# ಕುರುಬರ ಹೇಳಿಕೆಗಳು : ಸರ್ವೇಕ್ಷಣೆ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
ಮಲ್ಲಿಕಾರ್ಜುನ ಎಸ್. ಇಂಚಲ

ಮಾರ್ಗದರ್ಶಕರು
ಡಾ. ಎಸ್.ಎಸ್. ಅಂಗಡಿ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಭಾಷಾನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೨೧

# ಕುರುಬರ ಹೇಳಿಕೆಗಳು : ಸರ್ವೇಕ್ಷಣೆ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಹೆಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಮಲ್ಲಿಕಾರ್ಜುನ ಎಸ್. ಇಂಚಲ**

ಮಾರ್ಗದರ್ಶಕರು

**ಡಾ. ಎಸ್.ಎಸ್. ಅಂಗಡಿ**

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ



**ಭಾಷಾನಿಕಾಯ**

**ಹಸ್ತಪ್ರತಿಶಾಸ್ತ್ರ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

ಮಲ್ಲಿಕಾರ್ಜುನ ಎಸ್. ಇಂಚಲ ಅವರು ನನ್ನ ಮಾರ್ಗದರ್ಶನದಲ್ಲಿ **"ಕುರುಬರ ಹೇಳಿಕೆಗಳು: ಸರ್ವೇಕ್ಷಣೆ ಮತ್ತು ವಿಶ್ಲೇಷಣೆ"** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ಡಾ. ಎಸ್.ಎಸ್.ಅಂಗಡಿ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೨.೧೧.೨೦೨೦
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಘೋಷಣಾ ಪತ್ರ

**"ಕುರುಬರ ಹೇಳಿಕೆಗಳು: ಸರ್ವೇಕ್ಷಣೆ ಮತ್ತು ವಿಶ್ಲೇಷಣೆ"** ಎಂಬ ಮಹಾಪ್ರಬಂಧವನ್ನು **ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಡಾ.ಎಸ್.ಎಸ್.ಅಂಗಡಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೆ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**ಮಲ್ಲಿಕಾರ್ಜುನ ಎಸ್. ಇಂಚಲ**
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೦೨.೧೧.೨೦೨೦
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ–ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಭಾರತದ ಪ್ರಮುಖ ಜನಸಮುದಾಯಗಳಲ್ಲಿ ಹಾಲುಮತ ಸಮುದಾಯವು ಒಂದು. ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ಬಹುದೊಡ್ಡ ಪರಂಪರೆಯನ್ನು ಹೊಂದಿದ ಇವರನ್ನು ಸಾಮಾನ್ಯವಾಗಿ ಕುರುಬರು ಎಂದು ಕರೆಯಲಾಗುತ್ತದೆ. ಕರ್ನಾಟಕ ರಾಜ್ಯದಲ್ಲಿ ಹಾಲುಮತ ಪರಂಪರೆಯನ್ನು ಬಹುತೇಕ ಜಿಲ್ಲೆಗಳಲ್ಲಿ ಕಾಣಬಹುದು. ಕರ್ನಾಟಕ ಸಾಂಸ್ಕೃತಿಯ ಭಾಗವಾಗಿ ಹಾಲುಮತ ಸಂಸ್ಕೃತಿಯು ಗೋಚರಿಸುತ್ತದೆ. ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಪ್ರತಿಯೊಂದು ಸಮುದಾಯವು ತನ್ನ ಪರಂಪರಾನುಗತ ಜ್ಞಾನ ಮತ್ತು ಅನುಭವಗಳೊಂದಿಗೆ ತನ್ನ ಅನನ್ಯತೆಯನ್ನು ಕಂಡುಕೊಳ್ಳುತ್ತಾ ಬರುತ್ತದೆ. ಇದಕ್ಕೆ ಕುರುಬ ಸಮುದಾಯವು ಹೊರತಲ್ಲ. ಕುರಿ ಸಾಕಾಣಿಕೆ, ಕಂಬಳಿ ತಯಾರಿಕೆ ಹಾಗೂ ಕೃಷಿಯನ್ನು ಪ್ರಧಾನ ಕಸಬುಗಳನ್ನಾಗಿಸಿಕೊಂಡು ಜೀವನ ನಿರ್ವಹಿಸುವ ಕುರುಬರು, ಬಯಲಿನಲ್ಲಿ ಬಯಲಾಗಿ ಜೀವನ ನಡೆಸುವ ಅನಿವಾರ್ಯತೆ ಇದೆ.

ಕುರುಬರಲ್ಲಿ ಹಾಲುಮತ, ಹತ್ತಿಕಂಕಣ, ಉಣ್ಣೆಕಂಕಣ, ಹಂಡೆ ಕುರುಬರು, ಜೇನುಕುರುಬರು, ಕಾಡು ಕುರುಬರು ಎಂಬ ಹಲವು ಪಂಗಡಗಳಿದ್ದರೂ ಮೂಲತಃ ಇವರು ಬೀರದೇವರ ಭಕ್ತರು. ರೇವಣಸಿದ್ಧನನ್ನು ಗುರುಗಳನ್ನಾಗಿ ಮಾಡಿಕೊಂಡ ಕುರುಬರು ಹಾಡಿನ ಮೊದಲು ರೇವಣಸಿದ್ಧನನ್ನು ಸ್ಮರಿಸುತ್ತಾರೆ. ಮೈಲಾರಲಿಂಗ, ಅಮೋಘಸಿದ್ಧ, ಮಾಳಿಂಗರಾಯ, ಜೆಟ್ಟಿಂಗರಾಯ, ಇಟ್ಟಪ್ಪ, ಕೆಂಚರಾಯ, ಕರಿಸಿದ್ದ, ಗೊಲ್ಲಾಳ ದೇವರುಗಳ ಆರಾಧಕರು.

ಕುರುಬ ಸಮುದಾಯವು ಬಹುತೇಕ ಅಲೆಮಾರಿಯಾಗಿದ್ದು ಅಧ್ಯಯನಕ್ಕೆ ವಿಪುಲ ಅವಕಾಶವನ್ನು ಹೊಂದಿದೆ. ಒಂದು ಸಮುದಾಯದ ಅಧ್ಯಯನದ ಸಂದರ್ಭದಲ್ಲಿ ಆಚರಣೆಗಳು ಸಂಪ್ರದಾಯಗಳು, ನಂಬಿಕೆಗಳು, ಉತ್ಸವಗಳು ಮುಖ್ಯವೆನಿಸುತ್ತವೆ. ಹಾಲುಮತ ಸಮುದಾಯಗಳ ಜಾತ್ರೆಗಳಲ್ಲಿ, ಉತ್ಸವಗಳಲ್ಲಿ ಹಾಲುಮತ ಪರಂಪರೆಗೆ ಧಾರ್ಮಿಕ ಮುಖಂಡತ್ವವನ್ನು ವಹಿಸಿ ಎಲ್ಲ ಕಾರ್ಯ ವಿಧಾನಗಳನ್ನು ನಡೆಸಿಕೊಂಡು ಹೋಗಲು ಪೂಜಾರಿಗಳು ಇರುತ್ತಾರೆ. ಈ ಪೂಜಾರಿಗಳಿಗೆ

ಒಡೆಯರು ಎಂಬ ಇನ್ನೊಂದು ಹೆಸರು ಇದೆ. ಪುರೋಹಿತ ಕೆಲಸವನ್ನು ಈ ಒಡೆಯರು ನಿರ್ವಹಿಸುತ್ತಾರೆ. ಪೂಜಾರಿ ಭೌತಿಕವಾಗಿ ಭೂಮಿಯ ಮೇಲಿದ್ದರೂ ಭಾವ ಭಗವಂತನಲ್ಲಿ ಲೀನವಾಗಿ ಭವಿಷ್ಯವನ್ನು ನುಡಿಯುವ ಕಾರಣಿಕ ಕೆಲಸವನ್ನು ನಿರ್ವಹಿಸುತ್ತಾನೆ. ಹೀಗೆ ಭಗವಂತನಲ್ಲಿ ತಾದಾತ್ಮೆತೆಯನ್ನು ಹೊಂದಿ ಹೇಳುವ ಹೇಳಿಕೆಗಳ ಮೇಲೆ ಭವಿಷ್ಯದಲ್ಲಿ ಒದಗಬಹುದಾದ ಸುಗುನಕಾಲ ಬರ ಇತ್ಯಾದಿಯನ್ನು ತಿಳಿಸುವ ಪ್ರಯತ್ನವನ್ನು ಮಾಡುತ್ತಾನೆ. ಅವುಗಳಿಗೆ ಹೇಳಿಕೆಗಳು ಎಂದು ಕರೆಯುತ್ತಾರೆ. ಹೇಳಿಕೆಗಳನ್ನು ಸಮಾಜೋಭಾಷಿಕ, ಸಮಾಜೋಧಾರ್ಮಿಕ, ಸಮಾಜೋ ಸಾಂಸ್ಕೃತಿಕ ಈ ಹಿನ್ನೆಲೆಯಲ್ಲಿ ಚರ್ಚಿಸಿ ದಾಖಲಿಸುವ ಕಾರ್ಯ ನಡೆಯಬೇಕಾಗಿದೆ.

ಹಾಲುಮತ ಪರಂಪರೆಯನ್ನು ಕುರಿತು ಅನೇಕ ಅಧ್ಯಯನಗಳು ಕನ್ನಡ ನಾಡಿನ ಎಲ್ಲ ವಿಶ್ವವಿದ್ಯಾಲಯದಲ್ಲಿ ನಡೆದಿದೆ. ಹಾಲುಮತ ಸಾಂಸ್ಕೃತಿಕ ಪರಂಪರೆಯ ಭಾಗವಾಗಿರುವ ಕುರುಬರ ಹೇಳಿಕೆಗಳು ಎನ್ನುವ ವಿಷಯದ ಸಮಗ್ರ ಅಧ್ಯಯನ ನಡೆಯಬೇಕಾದ ಔಚಿತ್ಯವನ್ನರಿತು ನಾನು ಈ ಅಧ್ಯಯನ ಕೈಗೊಳ್ಳಬೇಕೆಂದು ಯೋಚಿಸಿದ್ದೇನೆ. ಇಡೀ ಕರ್ನಾಟಕದ ಎಲ್ಲ ಜಿಲ್ಲೆಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಪ್ರಾರಂಭಿಸಿ, ಅಧ್ಯಯನದ ವಸ್ತುವಿನ ವಿಸ್ತಾರ ಹೆಚ್ಚಿಸಿ ಅದನ್ನು ತಲಸ್ಪರ್ಶಿಯಾಗಿ ಅಧ್ಯಯನ ನಡೆಸಿ, ಒಂದು ಉತ್ತಮ ಸಂಶೋಧನಾ ಪ್ರಬಂಧವನ್ನು ಸಿದ್ದಪಡಿಸಬೇಕೆನ್ನುವುದು ನನ್ನ ಉದ್ದೇಶವಾಗಿದೆ, ಆದ್ದರಿಂದ ಕುರುಬರ ಹೇಳಿಕೆಗಳು : ಸರ್ವೇಕ್ಷಣೆ ಮತ್ತು ವಿಶ್ಲೇಷಣೆ ಎನ್ನುವ ವಿಷಯದ ಮೇಲೆ ಅಧ್ಯಯನ ಕೈಗೊಳ್ಳಲು ತೀರ್ಮಾನಿಸಿದ್ದೇನೆ.

ಮಾನವನ ಭಾವನೆಗಳ ಅಭಿವ್ಯಕ್ತಿ ಭಾಷೆಯೇ ಪ್ರಮುಖ ಮಾಧ್ಯಮ. ಮನುಷ್ಯನ ವಿವಿಧ ವರ್ತನೆಗಳು ಅಥವಾ ಚಟುವಟಿಕೆಗಳು ಭಾಷೆಯ ಮುಖಾಂತರ ವ್ಯಕ್ತವಾಗುತ್ತವೆ. ಮನೋಭಾಷಾ ವಿಜ್ಞಾನದ ಅಡಿಯಲ್ಲಿ ಮಾನವನ ಮಾನಸಿಕ ವರ್ತನೆಗಳನ್ನು ವಿವೇಚಿಸುವಾಗ ಮನೋವಿಜ್ಞಾನ ಹಾಗೂ ಭಾಷಾವಿಜ್ಞಾನದ ಸಂಬಂಧ ತಿಳಿದು ಬರುವುದು. ಇಂದ್ರೀಯಗಳ ಮೂಲಕ ಗ್ರಹಿಸಿದ ಜ್ಞಾನವನ್ನು ಭಾಷೆಯ ಮೂಲಕ ವ್ಯಕ್ತಪಡಿಸುವಾಗ ಸಂವೇದನೆ ಮತ್ತು ಪ್ರತ್ಯಕ್ಷಾನುಭವದ ಅಂಶಗಳು ಪ್ರಮುಖವಾಗುತ್ತವೆ.

ಪುರೋಹಿತ ಸ್ಥಾನದಲ್ಲಿ ನಿಂತುಕೊಂಡು ಸಮುದಾಯದ ಎಲ್ಲ ಧಾರ್ಮಿಕ ಕ್ರಿಯೆಗಳನ್ನು ನಡೆಸುವ "ಒಡೆಯರು" ವಿಶೇಷ ಉತ್ಸವಗಳಲ್ಲಿ ಹಾಗೂ ಜಾತ್ರೆಗಳಲ್ಲಿ ಹೇಳುವ ಹೇಳಿಕೆಗಳನ್ನು ವೈಜ್ಞಾನಿಕವಾಗಿಯೂ, ಪ್ರಾಯೋಗಿಕವಾಗಿಯೂ, ಸೈದ್ಧಾಂತಿಕವಾಗಿಯೂ ಚರ್ಚೆಗೆ ಒಳಪಡಿಸಬೇಕಾಗುತ್ತದೆ. ಒಂದೇ ಸವನೆ ಡೊಳ್ಳಿನ ಬಡಿತ ಪ್ರಾರಂಭವಾಗಿ ಡೊಳ್ಳಿನಿಂದ ಹೊರುಹೊಮ್ಮುವ ನಾದ ಪೂಜಾರಿಯ ಕಿವಿಯಲ್ಲಿ ಅನುರಣಿಸಿ ಅವನನ್ನು ಮಾನಸಿಕವಾಗಿ ಉನ್ಮಾದಗೊಳ್ಳುವಂತೆ ಪ್ರೇರಣೆ ನೀಡುತ್ತದೆ. ಇದರಿಂದ ತನ್ನ ಕುಲದೇವರಾದ ಬೀರದೇವರಲ್ಲಿ ಲೀನವಾಗಿ ತನಗಾದ ಅನುಭವವನ್ನು ಬೆಡಗಿನ ಮಾತುಗಳಲ್ಲಿ ಉಚ್ಚರಿಸುತ್ತಾನೆ. ಅವುಗಳೇ

"ಹೇಳಿಕೆಗಳು" ಎಂದು ಕರೆಯಲ್ಪಡುತ್ತವೆ. ಜನಪದರು ಈ ಹೇಳಿಕೆಗಳನ್ನು ಅಕ್ಷರಶಃ ಪಾಲಿಸಿಕೊಂಡುಬರುತ್ತಾರೆ. ಮಾನವನ ಹಿತಕ್ಕೆ ಅನುಕೂಲವಾಗುವ ಮತ್ತು ಅನಾನುಕೂಲತೆಯ ಎಚ್ಚರಿಕೆಯನ್ನು ಈ ಹೇಳಿಕೆಗಳು ಹೊಂದಿರುತ್ತವೆ.

೦೧. "ಎಲೇ ಮಕ್ಕಳಿರಾ, ಏಳು ಸಮುದ್ರ ದಾಟಿ ಬಂದಿನಿ. ಈಗ ತುರ್ತು
ರೋಹಿಣಿ, ಮಿರ್ಗಾ, ಪುಷ್ಯಾ ಮಳಿ ಬರ್ತೆತಿ, ಕೂರಿಗಿ, ಕುಂಟೆ, ಸಾಗ
ಮಾಡರೆಲೆ, ಆಶ್ಲೇಷಾ ಮಳಿಗೆ ರೈತನ ಕಣ್ಣು ಮ್ಯಾಗ ಹೋಗಬಾರದು
ತಗ್ಗಿ ಬಗ್ಗಿ ನಡೀಹಿರಲೇಽಽ ಹಾಕರಲೇಽಽ ಡೊಳ್ಳ,

೦೨. ಎಲೆ ತಿರುಗಲಿಕ್ಕೆ ರಾಮನ ಭಾಣಲ್ಲ
ಹಾರಲಿಕ್ಕೆ ಕಾಮನ ಬೂದಿ ಅಲ್ಲ.
ಮಿರಗಾ ಮಿಂಚಿತು, ಆರಿದ್ರಕ ಕೂರಿಗೆ ಸಾಗ
ಮಾಡೂದ್ರಾಗ ಸಂಪೂರ್ಣ ತಡಬಿತ್ತು ;
ಪುಷ್ಯ ಪುನರವಸು, ಛಪ್ಪನ್ನಾಡಿಗೆ ಸಂಪೂರ್ಣ ಮಾಡೀನಿ.

೦೩. ಎಲೇ, ಗುಡ್ಡದಾಗಿನ ಹುಲಿ ಗಡಬಡಿಸಲಿಕ್ಕೆ
ಹತ್ಯಾದ; ಇವತ್ತಿಲ್ಲ ನಾಳಿಗಿ,
ನಾಳೆ ಇಲ್ಲ ಇವತ್ತ ಜನ-ಜಾನುವಾರನ್ನ
ಬಗಲಾಗ ಹಿಡಕೊಂಡ ದಂಡೀಗಿ ಹಚ್ಚೀನಿ.

೦೪. ಮಿರ್ಗ ಮಿಂಚಿತು. ಆರಿದ್ರ ಕೂರಿಗಿ ಸಾಗ ಮಾಡ್ಬೇಕು ಅನ್ನೂದ್ರಾಗ
ಇದಿಮಾಯಿ ರಂಡಿ ಎದುರಿಗೀ ಬಂದ್ಳು.
ಭೂತ್ಯಾನ ಹಚ್ಚಿ ಬೈಲ
ಮಾಡೂದ್ರಾಗ ನಾಲ್ಕಾಣೆ ಕಸರ ಕುಂತು.

ಈ ಮೇಲಿನ ಹೇಳಿಕೆಗಳಲ್ಲಿ ಮುಂಗಾರು ಮಳೆಯ ಮುನ್ಸೂಚನೆ, ಮುಂದೆ ಒದಗಬಹುದಾದ ಸಮೃದ್ಧಿ ಮತ್ತು ಬರಗಾಲದ ಮುನ್ಸೂಚನೆಗಳನ್ನು ಕಾಣಬಹುದು. ಸಕಾಲದಲ್ಲಿ ಮಳೆಯಾಗಿ ಒಳ್ಳೆಯ ಬೆಳೆಯನ್ನು ರೈತರು ಬೆಳೆಯಬಹುದು ಎಂಬುವುದು ಈ ಹೇಳಿಕೆಗಳ ಅರ್ಥ. ಇಂತಹ ಹೇಳಿಕೆಗಳ ಬಗ್ಗೆ ಎಂ.ಎಂ. ಪಡಶೆಟ್ಟಿಯವರು "ಹೇಳಕೀ ಮಾಡ್ಯಾರ ಒಡೆಯರು" ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕನ್ನಡ ಹಂಪಿ ವಿಶ್ವವಿದ್ಯಾಲಯದ ಎಫ್.ಟಿ. ಹಳ್ಳಿಕೇರಿ ಅವರು ಹಾಲುಮತ ಅಧ್ಯಯನ ಪೀಠದಿಂದ ಹಾಲುಮತ ಸಮುದಾಯದ ಸಾಂಸ್ಕೃತಿಕ ಪರಂಪರೆಯನ್ನು ದಾಖಲಿಸುವ ನಿರಂತರ ಪ್ರಯತ್ನ ನಡೆಯುತ್ತಿದೆ. ಜಿ.ಜಿ.ಬಿರಾದರ ಅವರು ಕುರುಬರ ಗುರು

ಒಡೆಯರರ ಬಗ್ಗೆ ಸಾಂಸ್ಕೃತಿಕ ಅಧ್ಯಯನ ಪೂರೈಯಿಸಿದ್ದಾರೆ. ಇವೆಲ್ಲವುಗಳ ಮಧ್ಯ ಇಡೀ ಕರ್ನಾಟಕದಾದ್ಯಂತ ವಾಸ ಮಾಡುವ ಕುರುಬ ಸಮುದಾಯದ ಕುರುಬರ ಹೇಳಿಕೆಗಳನ್ನು ಸಂಗ್ರಹಿಸಿ ಅವುಗಳನ್ನು ಅನೇಕ ಮಗ್ಗಲುಗಳಲ್ಲಿ ವಿಶ್ಲೇಷಿಸಿ ದಾಖಲಿಸುವ ಪ್ರಯತ್ನ ನನ್ನದು.

**ಅಧ್ಯಯನದ ಉದ್ದೇಶ :**

ಕುರುಬರ ಹೇಳಿಕೆಗಳನ್ನು ಕುರಿತು ಎಂ.ಎಂ. ಪಡಶೆಟ್ಟಿಯವರು ಸಿಂದಗಿ ಪರಿಸರವನ್ನು ಗಮನದಲ್ಲಿಟ್ಟುಕೊಂಡು "ಹೇಳಕೀ ಮಾಡ್ಯಾರ ಒಡೆಯರು" ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಬಿ.ಜಿ.ಬಿರಾದರ ಅವರು ಕುರುಬರ ಗುರು ಒಡೆಯರು ಸಾಂಸ್ಕೃತಿಕ ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಎಸ್.ಎಸ್. ಅಂಗಡಿ ಅವರು ಕುರುಬ ಸಮುದಾಯದ ಭಾಷೆ ಮಾನವ ಭಾಷಾಶಾಸ್ತ್ರ ಅಧ್ಯಯನ ಎಂಬ ಪುಸ್ತಕದಲ್ಲಿ ಕುರುಬರ ಹೇಳಿಕೆಗಳನ್ನು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಇವೆಲ್ಲವುಗಳನ್ನು ಗಮನದಲ್ಲಿಟ್ಟುಕೊಂಡು ಒಂದು ಸಮಗ್ರ ಅಧ್ಯಯನವನ್ನು ಕುರುಬರ ಹೇಳಿಕೆಗಳ ಬಗ್ಗೆ ನಡೆಸುವದು ಈ ಅಧ್ಯಯನದ ಉದ್ದೇಶವಾಗಿದೆ. ಕರ್ನಾಟಕದಲ್ಲಿ ಕರಾವಳಿ ಜಿಲ್ಲೆಗಳನ್ನು ಹೊರತುಪಡಿಸಿದರೆ, ಉಳಿದೆಲ್ಲ ಜಿಲ್ಲೆಗಳಲ್ಲಿ ಕಂಡುಬರುವ ಕುರುಬರು ದೈವತ್ವವನ್ನು ನಂಬಿ ಬದುಕಿದವರು. ಆದ್ದರಿಂದ ಇಡೀ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ನಡೆಯುವ ಕುರುಬರ ಹೇಳಿಕೆಗಳನ್ನು ಸರ್ವೇಕ್ಷಣೆ ಮಾಡಿ ಅವುಗಳನ್ನು ಅನೇಕ ಪರಿಭಾಷೆಗಳ ಅಡಿಯಲ್ಲಿ ದಾಖಲಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

'ಕುರುಬರ ಹೇಳಿಕೆಗಳು : ಸರ್ವೇಕ್ಷಣೆ ಮತ್ತು ವಿಶ್ಲೇಷಣೆ' ವಿಷಯ ಕುರಿತ ಸಂಶೋಧನೆಯ ಅಧ್ಯಯನವಾಗಿದೆ ಅಂದರೆ ಕರ್ನಾಟಕ ರಾಜ್ಯದಲ್ಲಿ ಹಾಲುಮತ ಪರಂಪರೆಯನ್ನು ಬಹುತೇಕ ಜಿಲ್ಲೆಗಳಲ್ಲಿ ಕಾಣಬಹುದು. ಕರ್ನಾಟಕ ಸಂಸ್ಕೃತಿಯ ಭಾಗವಾಗಿ ಹಾಲುಮತ ಸಂಸ್ಕೃತಿ ಗೋಚರಿಸುತ್ತದೆ. ಕರ್ನಾಟಕದ ಕರಾವಳಿ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಎಲ್ಲ ಜಿಲ್ಲೆಗಳಲ್ಲಿ ಇರುವ ಹಾಲುಮತ ಸಮುದಾಯದ ಪ್ರಮುಖವಾದ ಮೌಖಿಕ ಭವಿಷ್ಯವನ್ನು ಹೇಳುವ ಹೇಳಿಕೆಗಳಿಗೆ ನನ್ನ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಿದ್ದೇನೆ.

**ಅಧ್ಯಯನದ ವಿಧಾನ :**

ಈ ಅಧ್ಯಯನಕ್ಕೆ ಪ್ರಮುಖವಾಗಿ ದಾಖಲಾಧಾರಿತ ಸಂಶೋಧನೆ ಮತ್ತು ಕ್ಷೇತ್ರಕಾರ್ಯ ಸಂಶೋಧನೆಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ದಾಖಲಾಧಾರಿತ ಸಂಶೋಧನೆಯ ವಿಧಾನದಲ್ಲಿ ಈ ಹಿಂದೆ ವಿವಿಧ ವಿದ್ವಾಂಸರು ವಿಶೇಷವಾಗಿ ಎಂ.ಎಂ.ಪಡಶೆಟ್ಟಿ ಅವರು ವಿಜಯಪುರ ಪರಿಸರದಲ್ಲಿ ಕ್ಷೇತ್ರ ಕಾರ್ಯಕೈಕೊಂಡು ೨೮೮ ಹೇಳಿಕೆಗಳನ್ನು ಮತ್ತು ೧೧೭ ಮೈಲಾರ ಕಾರ್ಣಿಕೋತ್ಸವದ ಹೇಳಿಕೆಗಳನ್ನು ಸಂಗ್ರಹಿಸಿದ್ದಾರೆ. ಅದರಂತೆ ಬಿ.ಜಿ.ಬಿರಾದಾರ, ಚೆನ್ನಪ್ಪ ಕಟ್ಟಿ

ಮುಂತಾದ ವಿದ್ವಾಂಸರು ೫೨ ಹೇಳಿಕೆಗಳನ್ನು ತಮ್ಮ ಸ್ವತಂತ್ರ ಗ್ರಂಥಗಳಲ್ಲಿ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಮೇಲೆ ಹೇಳಿದ ವಿದ್ವಾಂಸರ ಹೇಳಿಕೆಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳನ್ನು ಹೊರತುಪಡಿಸಿ ಬೆಳಗಾವಿ, ವಿಜಯಪುರ, ಬಾಗಲಕೋಟ, ಧಾರವಾಡ, ಹಾವೇರಿ, ಗದಗ ಮತ್ತು ಬಳ್ಳಾರಿ ಜಿಲ್ಲೆಗಳ ಹಾಲುಮತ ದೈವಗಳಿರುವ ನೆಲೆಗಳನ್ನು ಶೋಧಿಸಿ, ಕ್ಷೇತ್ರಕಾರ್ಯ ಕೈಕೊಂಡು ೪೪೨ ಹೇಳಿಕೆಗಳನ್ನು ಹೊಸದಾಗಿ ಸಂಗ್ರಹಿಸಲಾಗಿದೆ. ಅವೆಲ್ಲವೂ ಅಪ್ರಕಟಿತ ಹೇಳಿಕೆಗಳಾಗಿವೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಪ್ರಶ್ನಾವಳಿ, ಸಂದರ್ಶನ, ವೀಕ್ಷಣೆ ಮುಂತಾದ ಸಾಧನ ಮತ್ತು ತಂತ್ರಗಳನ್ನು ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ :**

**ಕುರುಬರ ಹೇಳಿಕೆಗಳು : ಸರ್ವೇಕ್ಷಣೆ ಮತ್ತು ವಿಶ್ಲೇಷಣೆ** ಎಂಬ ಈ ಸಂಶೋಧನಾ ಪ್ರಬಂಧವು ಒಟ್ಟು ಹತ್ತು ಅಧ್ಯಾಯಗಳನ್ನು ಹೊಂದಿದೆ. ಕರ್ನಾಟಕದ ಸಾಂಸ್ಕೃತಿಕ ಬದುಕಿಗೆ ತನ್ನದೇ ಆದ ಕೊಡುಗೆ ನೀಡಿದ ಕುರುಬರು ಜಾತ್ರೆ ಮತ್ತು ಉತ್ಸವಗಳಲ್ಲಿ ಒಡೆಯರು ಮಾಡುವ ಹೇಳಿಕೆಗಳು ಮಾನವನ ಬದುಕಿಗೆ ಮಾರ್ಗದರ್ಶನದಂತಿರುತ್ತವೆ. ಅಧ್ಯಯನದ ಅನುಕೂಲಕ್ಕಾಗಿ ಮಾಹಪ್ರಬಂಧವನ್ನು ಒಟ್ಟು ಹತ್ತು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲಾಗಿದೆ.

**ಅಧ್ಯಾಯ ೦೧.**

ಇದರಲ್ಲಿ ಮಹಾಪ್ರಬಂಧದ ತಾತ್ವಿಕ ವಿಶ್ಲೇಷಣೆಯ ನೆಲೆಯನ್ನು ಸ್ಥೂಲವಾಗಿ ವಿವರಿಸಿದೆ. ಕುರುಬರ ಹೇಳಿಕೆಗಳನ್ನು ಕುರಿತು ಎಂ.ಎಂ. ಪಡಶೆಟ್ಟಿಯವರು ಸಿಂದಗಿ ಪರಿಸರವನ್ನು ಗಮನದಲ್ಲಿಟ್ಟುಕೊಂಡು "ಹೇಳಕೀ ಮಾಡ್ಯಾರ ಒಡೆಯರು" ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಜಿ.ಜಿ.ಜಿರಾದರ ಅವರು ಕುರುಬರ ಗುರು ಒಡೆಯರು ಸಾಂಸ್ಕೃತಿಕ ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಎಸ್.ಎಸ್. ಅಂಗಡಿ ಅವರು ಕುರುಬ ಸಮುದಾಯದ ಭಾಷೆ ಮಾನವ ಭಾಷಾಶಾಸ್ತ್ರ ಅಧ್ಯಯನ ಎಂಬ ಪುಸ್ತಕದಲ್ಲಿ ಕುರುಬರ ಹೇಳಿಕೆಗಳನ್ನು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಇವೆಲ್ಲವುಗಳನ್ನು ಗಮನದಲ್ಲಿಟ್ಟುಕೊಂಡು ಒಂದು ಸಮಗ್ರ ಅಧ್ಯಯನವನ್ನು ಕುರುಬರ ಹೇಳಿಕೆಗಳ ಬಗ್ಗೆ ನಡೆಸುವದು ಈ ಅಧ್ಯಯನದ ಉದ್ದೇಶವಾಗಿದೆ. ಕರ್ನಾಟಕದಲ್ಲಿ ಕರಾವಳಿ ಜಿಲ್ಲೆಗಳನ್ನು ಹೊರತುಪಡಿಸಿದರೆ, ಉಳಿದೆಲ್ಲ ಜಿಲ್ಲೆಗಳಲ್ಲಿ ಕಂಡುಬರುವ ಕುರುಬರು ದೈವತ್ವವನ್ನು ನಂಬಿ ಬದುಕಿದವರು. ಆದ್ದರಿಂದ ಇಡೀ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ನಡೆಯುವ ಕುರುಬರ ಹೇಳಿಕೆಗಳನ್ನು ಸರ್ವೇಕ್ಷಣೆ ಮಾಡಿ ಅವುಗಳನ್ನು ಅನೇಕ ಪರಿಭಾಷೆಗಳ ಅಡಿಯಲ್ಲಿ ದಾಖಲಿಸಲಾಗಿದೆ.

**ಅಧ್ಯಾಯ ೦೨. ಅಧ್ಯಯನದ ಸಮೀಕ್ಷೆ :**

ಪ್ರಸ್ತುತ ಅಧ್ಯಯನದಲ್ಲಿ ಕುರುಬರ ಹೇಳಿಕೆಗಳಿಗೆ ಸಂಬಂಧಿಸಿದಂತೆ ಪ್ರಕಟವಾದ ಪುಸ್ತಕ ಹಾಗೂ ಲೇಖನಗಳ ಸ್ವರೂಪವನ್ನು ಕುರಿತು ಸ್ಥೂಲವಾಗಿ ವಿವರಿಸಲಾಗಿದೆ.

**ಅಧ್ಯಾಯ ೦೩. ಹೇಳಿಕೆಗಳು : ಅರ್ಥ, ಸ್ವರೂಪ ಮತ್ತು ವರ್ಗೀಕರಣ :**

ಹಾಲಮತ ಪರಂಪರೆಯಲ್ಲಿ ಧಾರ್ಮಿಕ ಮುಖಂಡತ್ವವನ್ನು ವಹಿಸಿ ಎಲ್ಲ ಕಾರ್ಯಗಳನ್ನು ನಡೆಸಿಕೊಂಡು ಹೋಗಲು ಪೂಜಾರಿಗಳು ಇರುತ್ತಾರೆ. ಈ ಪೂಜಾರಿಗಳಿಗೆ ಒಡೆಯರು ಎಂದು ಹೆಸರು. ಈ ಒಡೆಯರು ಜಾತ್ರೆ, ಉತ್ಸವ ಮುಂತಾದ ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಭಾವ ಭಗವಂತನಲ್ಲಿ ಲೀನವಾಗಿ ಭವಿಷ್ಯವನ್ನು ನುಡಿಯುವ ಕಾರಣಿಕ ಕೆಲಸವನ್ನು ನಿರ್ವಹಿಸುತ್ತಾನೆ. ಅವುಗಳನ್ನು ಹೇಳಿಕೆಗಳು ಎಂದು ಕರೆಯುತ್ತಾರೆ. ಈ ಅಧ್ಯಾಯದಲ್ಲಿ ಈವರೆಗೆ ಹೇಳಿಕೆಗಳನ್ನು ಕುರಿತು ವ್ಯಾಖ್ಯೆಗಳನ್ನು ದಾಖಲಿಸುವದು ಮತ್ತು ಅವುಗಳ ಸ್ವರೂಪವನ್ನು ನಿರ್ಧರಿಸುವದು ಮುಖ್ಯವಾಗಿದೆ.ಒಡೆಯರು ವಿಶೇಷ ಸಂದರ್ಭಗಳಲ್ಲಿ ಹೇಳುವ ಭವಿಷ್ಯವಾಣಿಯು ಅಂದರೆ ಹೇಳಿಕೆಗಳನ್ನು ಹಲವು ಪ್ರಕಾರಗಳಲ್ಲಿ ವರ್ಗೀಕರಿಸಬಹುದು. ಪ್ರಕೃತಿಗೆ ಸಂಬಂಧಿಸಿದ ಹೇಳಿಕೆಗಳು, ಮಾನವನ ಬದುಕಿಗೆ ಸಂಬಂಧಿಸಿದ ಹೇಳಿಕೆಗಳು, ಮುಂದೆ ಒದಗಬಹುದಾದ ಭೀಕರ ಅನಾಹುತಗಳಿಗೆ ಸಂಬಂಧಿಸಿದ ಹೇಳಿಕೆಗಳು, ಕೌಟುಂಬಿಕ ಸಮಸ್ಯೆಗಳನ್ನು ಬಗೆಹರಿಸುವ ಹೇಳಿಕೆಗಳು ಇನ್ನೂ ಮುಂತಾಗಿ ಹೇಳಿಕೆಗಳ ಸ್ವರೂಪದ ಆಧಾರದಲ್ಲಿ ಅವುಗಳನ್ನು ವರ್ಗೀಕರಿಸಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ೦೪ . ಹೇಳಿಕೆಗಳು : ಅಧ್ಯಯನದ ನೆಲೆಗಳು :**

ಈ ಅಧ್ಯಾಯದಲ್ಲಿ ಕುರುಬರ ಹೇಳಿಕೆಗಳನ್ನು ಈ ಕೆಳಗಿನ ವಿವಿಧ ಅಧ್ಯಯನದ ನೆಲೆಗಳ ಅಡಿಯಲ್ಲಿ ಚರ್ಚಿಸಿದ್ದೇನೆ.

**೪.೧ ಸಾಮಾಜಿಕ ನೆಲೆ :**

ಮಾನವನ ಬದುಕಿನ ಮೇಲೆ ಸಮಾಜ ನೇರ ಪ್ರಭಾವವನ್ನು ಬೀರುತ್ತದೆ. ಮನುಷ್ಯ ವೈಯಕ್ತಿಕವಾಗಿ ತನ್ನಷ್ಟಕ್ಕೆ ತಾನು ಬದುಕಲು ಸಾಧ್ಯವಿಲ್ಲ. ಈ ಕಾರಣದಿಂದ ಮನುಷ್ಯ ಜೀವನದ ಮೇಲೆ ಸಮಾಜದ ಪ್ರಭಾವ ಮತ್ತು ಪ್ರೇರಣೆ ಕಂಡುಬರುತ್ತದೆ. ಜನ ಮೊದಲಿನಿಂದಲೂ ದೆವ್ವ, ಪುನರ್ಜನ್ಮ, ಮಾಟ, ಮಂತ್ರ, ಪ್ರಾರ್ಥನೆ, ಭವಿಷ್ಯ, ಪವಾಡಗಳು ಮೊದಲಾದ ಅಭೌತಿಕ ಅಂಶಗಳಲ್ಲಿ ನಂಬಿಕೆಯಿಟ್ಟಿರುವ ಸೂಕ್ಷ್ಮ ಸಂವೇದನೆಗಳನ್ನು ಸಾಮಾಜಿಕ ಹಿನ್ನೆಲೆಯಲ್ಲಿ ದಾಖಲಿಸಿದ್ದೇನೆ.

**೪.೨ ಧಾರ್ಮಿಕ ನೆಲೆ :**

ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ಮಳೆ ಸರ್ವರ ಕಲ್ಯಾಣವನ್ನು  ತಂದುಕೊಡುವ ಒಂದು ದೈವ. ಈ ದೈವದ ಅವಕೃಪೆಗೆ ಪಾತ್ರರಾದರೆ ನಮ್ಮ ಬದುಕು ಕಷ್ಟಕರವಾಗುತ್ತದೆ. ಪ್ರಕೃತಿಯಲ್ಲಿ ನಡೆಯುವ ವಿಧ್ಯಮಾನಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ನೋಡುವ ಪದ್ಧತಿ ಭಾರತೀಯರಲ್ಲಿ ಮೊದಲಿನಿಂದಲೂ ಕಂಡುಬರುತ್ತದೆ. ಶೈವ ಸಂಪ್ರದಾಯಕ್ಕೆ ಸೇರಿದ ಕುರುಬರ ಧಾರ್ಮಿಕ ಆಚರಣೆಗಳು ತುಂಬಾ ಕುತೂಹಲಕಾರಿಯಾದವುಗಳು ಮತ್ತು ವೈಶಿಷ್ಟ್ಯಪೂರ್ಣವಾದವುಗಳು. ಬಿರಮದೇವ, ಬೀರದೇವರ, ಮಾಳಿಗರಾಯ, ಕರಿಸಿದ್ಧ, ರೇವಣಸಿದ್ಧ, ಅಮೋಘಸಿದ್ಧ, ಮೈಲಾರಲಿಂಗ,

ಕೆಂಚರಾಯ, ಇಟ್ಟಪ್ಪ, ಚಿಂಚಲಿ ಮಾಯವ್ವ ಮುಂತಾದ ದೇವತೆಗಳ ಆರಾಧಕರಾದ ಕುರುಬರು ಧರ್ಮವನ್ನು ನಂಬಿ ನಡೆಯುವವರು. ಅವರ ಎಲ್ಲ ಧಾರ್ಮಿಕ ನೆಲೆಗಳನ್ನು ವಿಸ್ತೃತವಾಗಿ ದಾಖಲಿಸಿದ್ದೇನೆ.

**೪.೩ ಮನಃಶಾಸ್ತ್ರೀಯ ನೆಲೆ :**

ಹೇಳಿಕೆಗಳನ್ನು ಮಾಡುವ ಪೂಜಾರಿ ಅಥವಾ ಒಡೆಯರು ಚಿತ್ರ ವಿಚಿತ್ರವಾಗಿ ವರ್ತಿಸುವದು ಕಾಣುತ್ತೇವೆ. ನಿರಂತರವಾಗಿ ಡೊಳ್ಳು ಬಡಿಯುವ ಸಪ್ಪಳ ಹಾಗೂ ಭಂಡಾರವನ್ನು ಎರಚುವದರಿಂದ ಪೂಜಾರಿ ದೈವೀ ಪರವಶನಾಗಿ ವರ್ತಿಸುವುದು ಸಾಮಾನ್ಯವಾಗಿರುತ್ತದೆ. ಇಂತಹ ವರ್ತನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಒಡೆಯರ ಮನಸ್ಸಿನ ನಿಜಸ್ಥಿತಿಯನ್ನು ಅರಿಯಲು ಮನೋವಿಜ್ಞಾನ ಸಹಾಯಮಾಡುತ್ತದೆ. ಇಂದ್ರೀಯಾನುಭವ ಹಾಗು ಸಂವೇದನೆಗಳು ಹೇಳಿಕೆ ಮಾಡುವವನ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎಂಬುದನ್ನು ದಾಖಲಿಸಿದ್ದೇನೆ.

**೪.೪ ಭಾಷಿಕ ನೆಲೆ :**

ಮೊದಮೊದಲು ಹಾಲುಮತ ಪರಂಪರೆಯಲ್ಲಿ ಅಷ್ಟೇನೂ ವಿದ್ಯಾವಂತರಲ್ಲದ ಒಡೆಯರು ತಮ್ಮ ಆಡು ಭಾಷೆಯನ್ನು ಬಳಸಿಕೊಂಡು ಹೇಳಿಕೆಗಳನ್ನು ಮಾಡುತ್ತಿದ್ದರು. ಬುದ್ಧಿಶಕ್ತಿ, ಆಲೋಚನೆ, ಚಿಂತನೆ, ತಿಳಿವಳಿಕೆ, ಸ್ಮರಣೆ, ಗ್ರಹಿಕೆ ಮುಂತಾದವು ಮನುಷ್ಯರಲ್ಲಿ ಅವರು ಆಡುವ ಭಾಷೆಯ ಮೂಲಕವೇ ವ್ಯಕ್ತವಾಗುತ್ತವೆ. ಮನುಷ್ಯನ ಮನಸ್ಸಿನ ವರ್ತನೆಗೂ ಭಾಷೆಗೂ ಅತಿನಿಕಟವಾದ ಸಂಬಂಧವಿದೆ. ಇದನ್ನು ಆಯಾ ಪ್ರಾದೇಶಿಕ ಭಾಷಾ ವೈಶಿಷ್ಟ್ಯವನ್ನು ಹೇಳಿಕೆಗಳಲ್ಲಿ ಬಳಸುವ ಭಾಷೆಯಿಂದ ಗುರುತಿಸಬಹುದು. ಭಾಷೆಯ ಹಿನ್ನೆಲೆಯಲ್ಲಿ ಕುರುಬರ ಹೇಳಿಕೆಗಳನ್ನು ಪರಿಶೀಲಿಸಿ ದಾಖಲಿಸುವದು. ಭಾಷೆಯನ್ನು ಬಳಸುವ ಸಂದರ್ಭದಲ್ಲಿ ಕಂಡುಬರುವ ಭಾಷಿಕ ವೈಶಿಷ್ಟ್ಯದ ಜೊತೆಗೆ ಭಾಷಿಕ ಕ್ರಿಯೆಗಳ ಸ್ವರೂಪವನ್ನು ದಾಖಲಿಸಿ ವಿಶ್ಲೇಷಿಸುವದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಾಯ ೦೫. ಹೇಳಿಕೆಗಳು ಸಾಂಸ್ಕೃತಿಕ ಮಹತ್ವ :**

ಹೇಳಿಕೆಗಳು ಕರ್ನಾಟಕದಲ್ಲಿ ಆಚರಣೆಯ ದೃಷ್ಟಿಯಿಂದ ಸಾಂಸ್ಕೃತಿಕ ಮಹತ್ವವನ್ನು ಪಡೆದಿವೆ. ವಿಶೇಷವಾಗಿ ಹೇಳಿಕೆಗಳು ಜಾತ್ರೆ ಉತ್ಸವಗಳಲ್ಲಿಯೇ ನಡೆಯುವದರಿಂದ ಅವುಗಳು ಹೇಳಿಕೆಗಳು ಸಾಂಸ್ಕೃತಿಕವಾಗಿ ವೈಶಿಷ್ಟ್ಯವನ್ನು ಹೊಂದಿದವುಗಳು. ಜಾತ್ರೆ ಉತ್ಸವಗಳಲ್ಲಿನ ಹೇಳಿಕೆಗಳು ಸಾರ್ವಜನಿಕವಾಗಿ ನಡೆಯುವುದರಿಂದ ಎಲ್ಲ ಜಾತಿ ಧರ್ಮದ ಜನರೂ ಸೇರಿರುತ್ತಾರೆ. ಕೆಲವು ಹೇಳಿಕೆಗಳು ದೇವರ ಪೀಠದ ಮುಂದೆ ಖಾಸಗಿಯಾಗಿ ನಡೆಯುತ್ತವೆ. ಖಾಸಗಿ ಹೇಳಿಕೆಗಳಿಗಿಂತ ಹೆಚ್ಚು ಸಾರ್ವಜನಿಕ ಹೇಳಿಕೆಗಳು ಸಾಂಸ್ಕೃತಿಕ ಮಹತ್ವವನ್ನು ಪಡೆದವುಗಳು. ಸಾಮೂಹಿಕವಾಗಿ ಅನ್ವಯವಾಗುವ ವಿಷಯಗಳನ್ನು ಇಲ್ಲಿ ಹೆಚ್ಚು ಹೇಳಲಾಗುತ್ತದೆ. ಇದರ ಮೂಲಕ ಹೇಳಿಕೆಗಳ ಸಾಂಸ್ಕೃತಿಕ ಮಹತ್ವವನ್ನು ದಾಖಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಾಯ – ೦೬. ಸಮಾರೋಪ

ಈ ಅಧ್ಯಾಯದಲ್ಲಿ ಇಡೀ ಅಧ್ಯಯನದ ಫಲಿತವನ್ನು ಕುರಿತು ಚರ್ಚಿಸಿರುವುದು. ಹೇಳಿಕೆಗಳ ಬಗ್ಗೆ ನಡೆಸಬಹುದಾದ ಇನ್ನಿತರ ಅಧ್ಯಯನದ ವಿಷಯಗಳನ್ನು ಪಟ್ಟಿ ಮಾಡಿರುವುದು ಇದರ ಜೊತೆಗೆ ಸಾಂಸ್ಕೃತಿಕವಾಗಿ ಬಹಳ ಮಹತ್ವವನ್ನು ಪಡೆದ ಕುರುಬರ ಹೇಳಿಕೆಗಳನ್ನು ಸಮಾಜೋ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ.

## ಅಧ್ಯಾಯ–ಎರಡು

# ಕುರುಬರ ಹೇಳಿಕೆಗಳು : ಅಧ್ಯಯನ ಸಮೀಕ್ಷೆ

ಪ್ರಸ್ತುತ ಅಧ್ಯಯನದಲ್ಲಿ ಕುರುಬರ ಹೇಳಿಕೆಗಳಿಗೆ ಸಂಬಂಧಿಸಿದಂತೆ ಪ್ರಕಟವಾದ ಪುಸ್ತಕ ಹಾಗೂ ಲೇಖನಗಳ ಸ್ವರೂಪವನ್ನು ಕುರಿತು ಸ್ಥೂಲವಾಗಿ ವಿವರಿಸಲಾಗಿದೆ.

ಎಂ.ಎಂ.ಪಡಶೆಟ್ಟಿ ಅವರು **ಹೇಳಕೀ ಮಾಡ್ಯಾರ ಒಡೆಯರು** (೧೯೯೩) ಎಂಬ ಪುಸ್ತಕದಲ್ಲಿ ಸಿಂದಗಿ ಪರಿಸರದ ಹಾಲುಮತ ದೈವಗಳ ಆಚರಣೆ, ಉತ್ಸವ, ಜಾತ್ರೆ ಇವುಗಳಿಗೆ ಸಂಬಂಧಿಸಿದಂತೆ ವಿಸ್ತಾರವಾದ ಕ್ಷೇತ್ರಕಾರ್ಯ ಕೈಗೊಂಡು ಹೇಳಿಕೆ ಮಾಡುವ ಹಾಲುಮತ ಒಡೆಯರು ಮಾಡಿದ ಹೇಳಿಕೆಗಳನ್ನು ಸಂಗ್ರಹಿಸಿದ್ದಾರೆ. ಬಹುಶಃ ಇದು ಕುರುಬರ ಹೇಳಿಕೆಗಳಿಗೆ ಸಂಬಂಧಪಟ್ಟಂತೆ ಮೊದಲ ಪುಸ್ತಕವಾಗಿದೆ. ಮೌಖಿಕವಾಗಿ ಸಾರುತ್ತಿದ್ದ ಹೇಳಿಕೆಗಳನ್ನು ದಾಖಲಿಸಿದ ಪಡಶೆಟ್ಟಿಯವರ ಪ್ರಯತ್ನ ಮೆಚ್ಚಲೇಬೇಕಾದದ್ದು. ಇದರಲ್ಲಿ ೨೦೫ ಹೇಳಿಕೆಗಳಿವೆ. ಈ ಹೇಳಿಕೆಗಳು ಮಳೆ, ಬೆಳೆ, ಹಳ್ಳಿಗಳ ಭವಿಷ್ಯ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ವೈವಿಧ್ಯಮಯವಾದ ಹೇಳಿಕೆಗಳನ್ನು ಪಡಶೆಟ್ಟಿಯವರು ಶ್ರಮವಹಿಸಿ ಕಲೆಹಾಕಿದ್ದಾರೆ. ಇದರಲ್ಲಿ ಹೇಳಿಕೆಗಳ ಅರ್ಥ ಸ್ವರೂಪವನ್ನು ಕುರಿತು ಅಭ್ಯಾಸ ಪೂರ್ಣವಾದ ಪ್ರಸ್ತಾವನೆ ಬರೆದಿದ್ದಾರೆ. ಇದನ್ನು ಸಿಂದಗಿಯ ನೆಲೆ ಪ್ರಕಾಶನದವರು ಪ್ರಕಟಿಸಿದ್ದಾರೆ.

ಎಂ.ಎಂ.ಪಡಶೆಟ್ಟಿ ಅವರ **ಕುರುಬರ ಹೇಳಿಕೆಗಳು** (೨೦೧೭) ಎಂಬ ಪುಸ್ತಕದಲ್ಲಿ ಸಿಂದಗಿ ಪರಿಸರದ ಜೊತೆ ಜೊತೆಗೆ ವಿಜಯಪುರ ಜಿಲ್ಲೆಯ ಹಲವಾರು ಕಡೆ ಕ್ಷೇತ್ರಕಾರ್ಯಮಾಡಿ ಮತ್ತಷ್ಟು ಹೇಳಿಕೆಗಳನ್ನು ಸಂಗ್ರಹಿಸಿದ್ದಾರೆ. ಈ ಸಂಗ್ರಹದಲ್ಲಿ ಮೊದಲಿನ ೨೮೮ ಹೇಳಿಕೆಗಳ ಜೊತೆಗೆ ಮೈಲಾರ ಕಾರ್ನಿಕ ಉತ್ಸವದ ಹೇಳಿಕೆಗಳನ್ನು ಒಟ್ಟು ಗೂಡಿಸಿ ೪೦೫ ಹೇಳಿಕೆಗಳಿವೆ. ೧೯೯೩ ರಲ್ಲಿ ಪ್ರಕಟವಾದ ಹೇಳಿಕೆ ಮಾಡ್ಯಾರ ಒಡೆಯರು ಪುಸ್ತಕದ ಮುಂದುವರಿಕೆ ಇದಾಗಿದೆ. ಇದನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ ಬೆಳ್ಳಿಹಬ್ಬ ಹಾಗೂ ಹಾಲುಮತ ಅಧ್ಯಯನ ಪೀಠದ ದಶಮಾನೋತ್ಸವ ಪ್ರಯುಕ್ತವಾಗಿ ಪ್ರಸಾರಾಂಗದವರು ಪ್ರಕಟಿಸಿದ್ದಾರೆ. ಕುರುಬರ ಹೇಳಿಕೆಗಳನ್ನು

ಕುರಿತು ಮುನ್ನುಡಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಕುಲಪತಿಗಳಾದ ಮಲ್ಲಿಕಾ ಎಸ್. ಘಂಟಿ ಅವರ ಅಧ್ಯಯನಕ್ಕೆ ಪೂರಕವಾದ ವಿಷಯಗಳನ್ನು ಚರ್ಚಿಸಿದ್ದಾರೆ. ಇದರಲ್ಲಿ ಕುರುಬರ ಹೇಳಿಕೆಗಳು ಮತ್ತು ಸಾಮಾನ್ಯ ಹೇಳಿಕೆಗಳು ಎಂದು ೨ ಅಧ್ಯಾಯಗಳಲ್ಲಿ ಕುರುಬರ ಹೇಳಿಕೆಗಳನ್ನು ಸಂಗ್ರಹಿಸಿದ್ದಾರೆ. ಇವುಗಳು ಸಂಶೋಧನ ಅಧ್ಯಯನಕ್ಕೆ ಸಹಾಯಕವಾಗುತ್ತವೆ. ಹೀಗೆ ಹೇಳಿಕೆಗಳನ್ನು ಕುರಿತು ೦೨ ಸಂಕಲನಗಳು ಬಂದಿವೆ.

ಎಸ್.ಎಸ್. ಅಂಗಡಿ ಅವರ **ಕುರುಬರ ಹೇಳಿಕೆಗಳು ಮನೋಭಾಷಿಕ ವಿಶ್ಲೇಷಣೆ** ಎಂಬ ಲೇಖನ ಅವರ ಕುರುಬ ಸಮುದಾಯದ ಭಾಷೆ ಎಂಬ ಪುಸ್ತಕದಲ್ಲಿ ಪ್ರಕಟವಾಗಿದೆ. ಕುರುಬರ ಗುರುಒಡೆಯರು ವಿಶೇಷ ಸಂದರ್ಭದಲ್ಲಿ ಹೇಳುವ ಹೇಳಿಕೆಗಳನ್ನು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಇಂದಿಯಾನುಭವ, ಸಂವೇದನೆ, ಸಂವೇದನಾಶೀಲ ಕ್ರಿಯೆ, ಬಾಹ್ಯಗ್ರಾಹಕಗಳು, ಪ್ರತ್ಯಕ್ಷಾನುಭವ, ಮನೋವಿಶ್ಲೇಷಣಾ ಪರಿಕಲ್ಪನೆಗಳ ಅಡಿಯಲ್ಲಿ ಕುರುಬರ ಹೇಳಿಕೆಗಳನ್ನು ಕುರಿತ ಅಭ್ಯಾಸ ಪೂರ್ಣವಾದ ಲೇಖನ ಇದಾಗಿದೆ. ಗ್ರಾಮೀಣ ಭಾಷೆಯ ಸೊಗಡಿನಲ್ಲಿರುವ ಕುರುಬರ ಹೇಳಿಕೆಗಳು ಮಾನವ ಬದುಕಿನ ದರ್ಶನ ಮಾಡಿಸುವದರಿಂದ ಒಂದು ಸಮುದಾಯದ ಭಾಷಾವೈಶಿಷ್ಟ್ಯವನ್ನು ಇದರಲ್ಲಿ ದಾಖಲಿಸಿದ್ದಾರೆ.

ಎಸ್.ಆಯ್. ಮೇತ್ರಿ ಅವರ **ಸಾಂಸ್ಕೃತಿಕ ನಾಯಕರ ಹೇಳಿಕೆಗಳು** ಜನಪದ ಸಾಹಿತ್ಯ ದರ್ಶನ ಭಾಗ ೪೨ ರಲ್ಲಿ ಮೇತ್ರಿಯವರು ಸಾಂಸ್ಕೃತಿಕ ನಾಯಕರ ಹೇಳಿಕೆಗಳು ಎನ್ನುವ ಲೇಖನದಲ್ಲಿ ಹೇಳಿಕೆಗಳು ಪದದ ಅರ್ಥವನ್ನು ವಿವರಿಸಿದ್ದಾರೆ ಅದರ ಜೊತೆಗೆ ಹೇಳಿಕೆಗಳ ಬಗ್ಗೆ ಇದ್ದ ಪಾರಂಪರಿಕ ನಂಬಿಕೆ ಹಾಗೂ ನಿಷ್ಠೆಯನ್ನು ಕುರಿತು ಚರ್ಚಿಸಿದ್ದಾರೆ. ಕಾಲಜ್ಞಾನದ ಹೇಳಿಕೆಗಳ ಜೊತೆಗೆ ಕುರುಬರ ಹೇಳಿಕೆಗಳನ್ನು ಉಲ್ಲೇಖಿಸಿ ಅವುಗಳ ಸ್ವರೂಪ ಮತ್ತು ಮಹತ್ವವನ್ನು ಸ್ಪಷ್ಟಪಡಿಸಿದ್ದಾರೆ.

ಬಿ.ಜಿ. ಬಿರಾದಾರ ಅವರ **ಕುರುಬರ ಗುರು ಒಡೆಯರು ಸಾಂಸ್ಕೃತಿಕ ಅಧ್ಯಯನ** ೨೦೧೦ ಇದು ಅವರ ಪಿಹೆಚ್.ಡಿ. ಮಹಾಪ್ರಬಂಧ. ಕುರುಬರ ಗುರು ಒಡೆಯರ ಬಗ್ಗೆ ವಿವಿಧ ದೃಷ್ಠಿಕೋನದಿಂದ ಅಧ್ಯಯನ ನಡೆದಿದೆ. ಹೇಳಿಕೆಗಳನ್ನು ಮಾಡುವ ಗುರು ಒಡೆಯರ ಐತಿಹಾಸಿಕ ಹಿನ್ನೆಲೆ, ಸಾಮಾಜಿಕ ಸಂರಚನೆ, ಒಡೆಯರ ಪರಂಪರೆಗಳು, ಭೌಗೋಳಿಕ ಪ್ರಸಾರ, ಗುರುಪರಂಪರೆಯ ಮಹಾಪುರುಷರ ಒಡೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಇವುಗಳ ಬಗ್ಗೆ ಚರ್ಚಿಸಲಾಗಿದೆ. ಈ ಸಂಶೋಧನಾ ಪ್ರಬಂಧದಲ್ಲಿ **ಕುರುಬರ ಗುರು ಒಡೆಯರ ಸಾಂಸ್ಕೃತಿಕ ಅಧ್ಯಯನ** ಎಂಬ ಅಧ್ಯಾಯದಲ್ಲಿ ಒಡೆಯರ ಹೇಳಿಕೆಗಳು ಎಂಬ ಉಪಶೀರ್ಷಿಕೆಯಡಿಯಲ್ಲಿ ಹೇಳಿಕೆಗಳ ಕುರಿತು ಅವುಗಳ ಸಾಂಸ್ಕೃತಿಕ ಮಹತ್ವವನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಮುರುಗಾನೂರ ಹೇಳಿಕೆಗಳು, ಕಲ್ಲೂರ ಹೇಳಿಕೆಗಳು ಎಂಬ ವಿಷಯಗಳಲ್ಲಿ ಹೇಳಿಕೆಗಳನ್ನು ಸಂಗ್ರಹಿಸಿ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹೇಳಿಕೆಗಳ ಅಧ್ಯಯನಕ್ಕೆ ಇವುಗಳನ್ನು ಆಕರಗಳಾಗಿ ಬಳಸಬಹುದಾಗಿದೆ. ಈ ಪುಸ್ತಕವನ್ನು ವಿಕಾಸ ಪ್ರಕಾಶನ, ಹೊಸಪೇಟೆ ಅವರು ಪ್ರಕಟಿಸಿದ್ದಾರೆ.

ಚನ್ನಪ್ಪ ಕಟ್ಟಿ ಅವರ **ಅರಕೇರಿ ಅಮೋಘಸಿದ್ಧೇಶ್ವರ** (೨೦೧೨) ಹಾಲು ಮತ ಸಾಂಸ್ಕೃತಿಕ ದೈವಗಳಲ್ಲಿ  ಅರಕೇರಿ ಅಮೋಘಸಿದ್ಧೇಶ್ವರರ ಒಬ್ಬರು, ವಿಜಯಪುರ ಸಮೀಪವಿರುವ ಅರಕೇರಿ ಇತನ ಮೂಲ ನೆಲೆ. ಈ ನೆಲೆಯ ಮೂಲಕ ಅಮೋಘ ಸಿದ್ದನು ಕರ್ನಾಟಕ, ಮಹಾರಾಷ್ಟ್ರದಲ್ಲಿ ವ್ಯಾಪಕವಾಗಿ ಆರಾಧನೆಗೊಳ್ಳುವ ದೈವ. ಈ ಆರಾಧನೆಯಿಂದಾಗಿ ಅಮೋಘ ಸಿದ್ದನ ಶಿಷ್ಯಪ್ರಶಿಷ್ಯ ಪರಂಪರೆಯಲ್ಲಿ ನೂರಾರು ದೈವಗಳಿವೆ. ಹೀಗಾಗಿ ಈ ಪರಂಪರೆಯ ಕುರಿತು ಲಿಖಿತ ಮತ್ತು ಮೌಖಿಕ ರೂಪದಲ್ಲಿ ಅಪಾರವಾದ ಮಾಹಿತಿಗಳಿವೆ. ಅಮೋಘಸಿದ್ಧನ ಇಂತಹ ಎಲ್ಲ ಮಾಹಿತಿಗಳನ್ನು ಒಂದೆಡೆ ಸಂಗ್ರಹಿಸಿ ಕ್ರಮಬದ್ಧವಾಗಿ ವರ್ಗೀಕರಿಸಿ ಅಮೋಘಸಿದ್ಧನ ಸಾಂಸ್ಕೃತಿಕ ಚರಿತ್ರೆಯನ್ನು ಈ ಕೃತಿಯ ಮೂಲಕ ಕಂಡರಿಸಿದ್ದಾರೆ. ಈ ಪುಸ್ತಕದಲ್ಲಿ **ಒಡೆಯರ ಮೌಖಿಕ ರಚನೆಗಳು** ಎಂಬ ಅಧ್ಯಾಯದಲ್ಲಿ ಹೇಳಿಕೆಗಳು ಎಂಬ ಉಪಶೀರ್ಷಿಕೆಯಡಿಯಲ್ಲಿ ಹೇಳಿಕೆಗಳನ್ನು ಐದು ಭಾಗಗಳಲ್ಲಿ ವಿಂಗಡಿಸಿದ್ದಾರೆ.  ಅವುಗಳೆಂದರೆ.

೦೧. ಮಳೆ ಕುರಿತ ಹೇಳಿಕೆಗಳು.

೦೨. ಬೆಳೆ ಕುರಿತ ಹೇಳಿಕೆಗಳು.

೦೩. ಜನರ ಕುರಿತ ಹೇಳಿಕೆಗಳು.

೦೪. ಜಾನುವಾರು ಕುರಿತ ಹೇಳಿಕೆಗಳು.

೦೫. ವ್ಯಾಪಾರ ರಾಜಕೀಯ ಕುರಿತ ಹೇಳಿಕೆಗಳು.

ಎಂದು ವರ್ಗೀಕರಿಸಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಅನ್ನಪೂರ್ಣಾ ಗೋಸಬಾಳ ಅವರ **ಹಾಲುಮತ ಕಿರಣ** (೨೦೧೪). ಹಾಲುಮತ ಕಿರಣ ಎಂಬ ಪುಸ್ತಕದಲ್ಲಿ ಅನ್ನಪೂರ್ಣಾ ಗೋಸ್ಬಾಳ ಅವರು ಹಾಲುಮತ ಸಮುದಾಯದ ಆಚರಣೆಗಳು ಎನ್ನುವ ಲೇಖನದಲ್ಲಿ ಕರ್ನಾಟಕದಲ್ಲಿರುವ ಕುರುಬರ ಗುರು ಪೀಠಗಳನ್ನು  ಕುರಿತು ಅಮೂಲ್ಯ ಮಾಹಿತಿ ಸಿಗುತ್ತವೆ. ರೇವಣಸಿದ್ದ, ಸಿದ್ಧರಾಮ, ಅಮೋಘಸಿದ್ದ, ಶಾಂತಮುತ್ತಯ್ಯ, ಇಟಗಿ ಭೀಮಾಂಬಿಕೆ, ಮೈಲಾರಲಿಂಗ, ಇಟ್ಟಪ್ಪ, ಬೀರಪ್ಪ, ಮಾಳಿಂಗರಾಯ, ಗೊಲ್ಲಾಳೇಶ್ವರ, ಚಿಂಚಲಿ ಮಾಯವ್ವ/ಅಕ್ಕಮ್ಮ ಮುಂತಾದ ಮೂರು ಹಾಲುಮತ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಕರ್ನಾಟಕದಲ್ಲಿ ನಡೆಯುವ ಕುರುಬರ ಜಾತ್ರೆ ಹಾಗೂ ಆಚರಣೆಗಳ ಬಗ್ಗೆ ವಿವರಿಸಿದ್ದಾರೆ. ಸರೂರ ಶಾಂತಮುತ್ತಯ್ಯ ಮಹಾಶಿವರಾತ್ರಿಯಂದು ಪೂಜೆಗೊಳ್ಳುತ್ತಾನೆ. ಈ ಸಂದರ್ಭದಲ್ಲಿ ಒಡೆಯರಿಂದ ನಡೆಯುವ ಹೇಳಿಕೆಗಳು ದೈವವಾಣಿಗಳಾಗುತ್ತವೆ ಎಂದೂ, ಆ ಹೇಳಿಕೆಗಳ ಆಧಾರದ ಮೇಲೆ ಆ ವರ್ಷದ ಭವಿಷ್ಯವನ್ನು ನಿರ್ಧರಿಸುತ್ತದೆ. ಪದ್ಧತಿಯನ್ನು ದಾಖಲಿಸಿದ್ದಾರೆ. ಈ ಪುಸ್ತಕವನ್ನು ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ ಹೊಸಪೇಟೆ ಇವರು ೨೦೧೪ರಲ್ಲಿ ಪ್ರಕಟಿಸಿದ್ದಾರೆ.

ಬ. ಪ. ನಾಯ್ಕರ ಅವರ **ಹಾಲುಮತಸ್ಥರು** (೨೦೧೧) ತೃತೀಯ ಅವೃತ್ತಿ ಈ ಪುಸ್ತಕದ ಕೊನೆಗೆ ಶ್ರೀ ಮೈಲಾರಲಿಂಗ ಸ್ವಾಮಿಯ ದೇವರ ಆಶೀರ್ವಾದದಿಂದ ೧೯೦೦ ರಿಂದ ೨೦೧೧ ರವರೆಗಿನ ಗೊರವಯ್ಯನ ಕಾರ್ಣಿಕಗಳು/ಹೇಳಿಕೆಗಳನ್ನು ಒಂದೆಡೆ ಸಂಗ್ರಹಿಸಿ ಕೊಟ್ಟಿದ್ದಾರೆ. ಅವುಗಳನ್ನು ಈ ಸಂಶೋಧನೆಗೆ ಆಕರಗಳನ್ನಾಗಿ ಉಪಯೋಗಿಸುತ್ತೇನೆ. ಇವುಗಳಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ, ಹೇಳಿಕೆಗಳು ಅನೇಕ ಸಲ ಪುನರಾವರ್ತನೆಯಾಗಿವೆ. ಈ ಪುಸ್ತಕವನ್ನು ೨೦೧೧ ರಲ್ಲಿ ಗದುಗಿನ ವಿದ್ಯಾನಿಧಿ ಪ್ರಕಾಶನರವರು ಪ್ರಕಟಿಸಿದ್ದಾರೆ.

ಎಂ.ಎಂ.ಪಡಶೆಟ್ಟಿ ಅವರ **ಹೇಳಿಕೆಗಳು**. ಲೇ. ಹಾಲುಮತ ವ್ಯಾಸಂಗ-೪ ಸಂ. ಎಫ್.ಟಿ.ಹಳ್ಳಿಕೇರಿ ಈ ಲೇಖನದಲ್ಲಿ ಎಂ.ಎಂ.ಪಡಶೆಟ್ಟಿ ಅವರು ಹೇಳಿಕೆಗಳ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಹಾಲುಮತ ಸಾಂಸ್ಕೃತಿಯ ಆಚರಣೆಗಳಲ್ಲಿ ಹೇಳಿಕೆಗಳು ಪ್ರಮುಖವಾಗಿವೆ. ಒಡೆಯರಾದವರು ಮಾಡುವ ಹೇಳಿಕೆಗಳು ಮನುಷ್ಯನ ಜೀವನದ ಪ್ರತಿಬಿಂಬದಂತಿರುತ್ತದೆ. ಭವಿಷ್ಯವನ್ನು ಕುರಿತು ಹೇಳುವದರಿಂದ ಹೇಳಿಕೆಗಳು ಮಹತ್ವವನ್ನು ಪಡೆದಿವೆ. ಹೇಳಿಕೆಗಳು ಪ್ರಾದೇಶಿಕವಾಗಿ ಬೇರೆ ಬೇರೆ ರೀತಿಯಲ್ಲಿ ಕರೆಯಿಸಿಕೊಳ್ಳುವ ಪದಗಳನ್ನು ಕುರಿತು ಈ ಲೇಖನದಲ್ಲಿ ಮಾಹಿತಿ ಸಿಗುತ್ತದೆ. 'ಹೇಳು' ಎಂಬ ಕ್ರೀಯಾ ಪ್ರಕೃತಿಗೆ 'ಇಕೆ' ಎಂಬ ತದ್ದಿತಾಂತ ಪ್ರತ್ಯಯ ಸೇರಿ ಹೇಳಿಕೆಗಳು ಎಂಬ ಪದ ನಿಷ್ಪತ್ತಿಯಾಗಿದೆ ಎಂದು ಈ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಹಾಲುಮತ ವ್ಯಾಸಂಗ ಕುರುಬರ ಕಲೆ ಆಚರಣೆಗಳು ಸಂಪ್ರದಾಯಗಳು ಎನ್ನುವ ನಾಲ್ಕನೇ ಸಂಪುಟದಲ್ಲಿ ಈ ಲೇಖನ ಪ್ರಕಟವಾಗಿದೆ.

ಚಿದಾನಂದಯ್ಯ ಗುರುವಿನ ಅವರ **ಆಚರಣೆಗಳು** ಲೇ. ಹಾಲುಮತ ವ್ಯಾಸಂಗ-೦೫ ರೇವನಸಿದ್ಧ ಪರಂಪರೆ. ಸಂ. ಡಾ.ಎಫ್.ಟಿ.ಹಳ್ಳಿಕೇರಿ ೨೦೧೪ ಈ ಲೇಖನದಲ್ಲಿ ಹಾಲುಮತ ಆಚರಣೆಗಳಾದ ಕಂಥಾಧಾರಣ ಸೇವೆ, ಪ್ರಗತಿಪರ ಮದುವೆ, ಕಾಲಿಲ್ಲದ ಐನೋರು ಮುಂತಾದವುಗಳ ಬಗ್ಗೆ ಚರ್ಚಿಸಿದ್ದಾರೆ. **ಸಮಾಜಕ್ಕೆ ಸಾಂತ್ವನ; ಒಡೆಯರ ಹೇಳಿಕೆಗಳು** ಎನ್ನುವ ಲೇಖನದಲ್ಲಿ ಹೇಳಿಕೆಗಳು ಪ್ರಸ್ತುತ ಸಮಾಜದಲ್ಲಿ ನಡೆಯುವ ಘಟನೆಗಳೊಂದಿಗೆ ಮುಖಾಮುಖಿಯಾದಂತಿರುತ್ತವೆ. ಆದ್ದರಿಂದ ಅವುಗಳು ಮಾನವನ ಬದುಕಿನ ಕಷ್ಟ ನಷ್ಟಗಳಿಗೆ ಸಾಂತ್ವನದಂತೆ, ಭವಿಷ್ಯದಲ್ಲಿ ಒದಗುವ ಗಂಡಾಂತರಗಳಿಗೆ ಎಚ್ಚರಿಕೆಯಂತೆ ಕಂಡುಬರುತ್ತವೆ.

ಲಿಂಗದಹಳ್ಳಿ ಹಾಲಪ್ಪ ಅವರ **ಹಾಲುಮತ ಸಾಂಸ್ಕೃತಿ ಪದಕೋಶ** ಸಂಪುಟ-೦೧ ಈ ಪದಕೋಶದಲ್ಲಿ ಹೇಳಿಕೆ-ಕೇಳಿಕೆಗಳ ಬಗ್ಗೆ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ. ೧೪೩೦ನೇ ಪದ ಅರ್ಥದಲ್ಲಿ ಸಾಮಾನ್ಯವಾಗಿ ಉತ್ತರ ಕರ್ನಾಟಕದ ಬೀರದೇವರ ಸಂಪ್ರದಾಯದಲ್ಲಿ ಕಂಡುಬರುವ ಪದವಾಗಿದೆ. ಬೀರದೇವರ ಮುಂದೆ ಭಕ್ತರು ತಮ್ಮ ಕಷ್ಟ ಸುಖ ಕುರಿತು ಕೇಳಿಕೆ ಇಡುತ್ತಾರೆ. ದೇವರು ಅವರ ಕಷ್ಟ ಸುಖಕ್ಕೆ ಪರಿಹಾರ ರೂಪವಾದ ಹೇಳಿಕೆ ನೀಡಿ ಹರಸುತ್ತಾನೆ. ಈ ಸಂಭಾಷಣೆಗೆ ಹೇಳಿಕೆ ಕೇಳಿಕೆಗಳೆಂದು ಕರೆಯುತ್ತಾರೆ. ಈ ಪುಸ್ತಕವನ್ನು ಹಾಲುಮತ ಸಾಂಸ್ಕೃತಿ ಪ್ರತಿಷ್ಠಾನ ಹೊಸಪೇಟೆ ಇವರು ೨೦೧೪ರಲ್ಲಿ ಪ್ರಕಟಿಸಿದ್ದಾರೆ.

ರಾಜಶ್ರೀ ಪಾಟೀಲ ಅವರ **ಹಾಲುಮತ ಗುರು ಸರೂರ ಶಾಂತಮುತ್ತಯ್ಯ** ಈ ಪುಸ್ತಕದ ನಾಲ್ಕನೇ ಅಧ್ಯಾಯ ಆಚರಣೆ–ಉತ್ಸವ–ಸಂಪ್ರದಾಯಗಳು ಎನ್ನುವ ಅಧ್ಯಾಯದಲ್ಲಿ ಒಡೆಯರ ಹೇಳಿಕೆಗಳು ಎನ್ನುವ ಉಪಶೀರ್ಷಿಕೆಯಡಿಯಲ್ಲಿ ಒಡೆಯರು ವಿಶೇಷ ಸಂದರ್ಭಗಳಲ್ಲಿ ಹೇಳುವ ಹೇಳಿಕೆಗಳ ಬಗ್ಗೆ ಚರ್ಚಿಸಿದ್ದಾರೆ. ಪ್ರಕೃತಿಯಲ್ಲಾಗುವ ಬದಲಾವಣೆಗಳನ್ನು ಚರ್ಚಿಸಿ ಒಡೆಯರು ಹೇಳಿಕೆಗಳನ್ನು ಮಾಡುತ್ತಿದ್ದರು ಎನ್ನುವದನ್ನು ಉಲ್ಲೇಖಿಸಿದ್ದಾರೆ. ಸರೂರ ಮಲ್ಲಿಕಾರ್ಜುನ ಒಡೆಯರು ಹಾಗೂ ಸಿದ್ಧಯ್ಯ ಒಡೆಯರು ಹೇಳಿದ ಹೇಳಿಕೆಗಳನ್ನು ಈ ಪುಸ್ತಕದಲ್ಲಿ ನಮೂದಿಸಿದ್ದಾರೆ. ಈ ಪುಸ್ತಕವನ್ನು ವಿಕಾಸ ಪ್ರಕಾಶನ ಶೋಧನ, ಶಿಕ್ಷಕರ ಬಡಾವಣೆ, ಎಂ.ಪಿ.ಪ್ರಕಾಶ ನಗರ ಹೊಸಪೇಟೆ ಇವರು ೨೦೧೧ರಲ್ಲಿ ಪ್ರಕಟಿಸಿದ್ದಾರೆ.

ಹೀಗೆ ಹೇಳಿಕೆಗಳ ಕುರಿತು ೨ ಸಂಗ್ರಹಗಳು ಮತ್ತು ಸುಮಾರು ೧೯ಕ್ಕೂ ಹೆಚ್ಚು ಲೇಖನಗಳು ಬಂದಿವೆ. ಅವು ಹೇಳಿಕೆಗಳು ಜನರ ಮನಸ್ಸಿನ ಮೇಲಿರುವ ಪ್ರಭಾವವನ್ನು ಗಟ್ಟಿಯಾಗಿ ತೋರಿಸುತ್ತವೆ. ಸಮುದಾಯಗಳ ನಂಬಿಕೆ ಮತ್ತು ಆಚರಣೆಯಲ್ಲಿ ಈ ಹೇಳಿಕೆಗಳು ಮಹತ್ವ ಪಡೆದಿವೆ. ಕುರುಬರ ಗುರು ಒಡೆಯರಲ್ಲಿ ಜನಜನಿತವಾಗಿರುವ ಇನ್ನೂ ನೂರಾರು ಹೇಳಿಕೆಗಳನ್ನು ಕ್ಷೇತ್ರಕಾರ್ಯ ನೆರವಿನಿಂದ ಸಂಗ್ರಹಿಸಿ ಈ ಅಧ್ಯಯನಕ್ಕೆ ಒಳಪಡಿಸುತ್ತೇನೆ.

## ಅಧ್ಯಾಯ–ಮೂರು

# ಹೇಳಿಕೆಗಳು : ಅರ್ಥ ಸ್ವರೂಪ ಮತ್ತು ವರ್ಗೀಕರಣ

ಜನಪದರು ಗ್ರಾಮ ರಕ್ಷಣೆಗಾಗಿ, ಇಷ್ಟಾರ್ಥಸಿದ್ಧಿಗಾಗಿ ಕುರುಬರು ಗುರು ಒಡೆಯರನ್ನು ಪೌರೋಹಿತ್ಯಕ್ಕಾಗಿ ಆಹ್ವಾನಿಸುತ್ತಾರೆ. ಭೂಮಿಯನ್ನು ಉತ್ತಿ,ಬಿತ್ತಿ ಫಸಲು ಬಂದಾಗ ಬಂದಂತಹ ಪಸಲು ಯಾವುದೇ ರೀತಿಯ ನಷ್ಟ ಆಗದಂತೆ ದನಕರುಗಳಿಗೆ ತೊಂದರೆಯಾಗದಂತೆ ಕುರುಬರು ಗುರು ಒಡೆಯರ ಮನೆಯಿಂದ ಅನ್ನದ ಅಂಬಲಿ ತಂದು ಹಸಿರು ತುಂಬಿ ನಿಂತ ಭೂಮಿತಾಯಿಗೆ (ಪ್ರಕೃತಿ ದೇವಿಗೆ) ಅರ್ಪಿಸುವುದು. ಆ ಮೂಲಕ ಯಾವುದೇ ರೀತಿಯ ತೊಂದರೆ ಕೊಡಬೇಡವೆಂದು ಬೇಡಿಕೊಳ್ಳುವುದಾಗಿದೆ. ಇಷ್ಟಾರ್ಥ ಸಿದ್ಧಿ ಬಹಳ ಮುಖ್ಯವಾಗಿದೆ. ತಾತ್ಪರ್ಯವಿಷ್ಟೇ, ಸಮುದಾಯದಲ್ಲಿ ಕುರುಬರಿಗೆ ವಿಶೇಷ ಸ್ಥಾನಮಾನವಿದೆ, ಗೌರವವಿದೆ ಅವರು ಮುಗ್ದರು, ಪ್ರಾಮಾಣಿಕರು. ಬದುಕಿನ ಹಲವು ಸಂದರ್ಭಗಳಲ್ಲಿ ಅವರು ಮತ್ತು ಅವರ ಕಂಬಳಿ ವಿಶೇಷ ಪಾತ್ರವಹಿಸುತ್ತದೆ. ಉದಾ: ಹುಟ್ಟು, ಮದುವೆ, ಗೃಹ ಪ್ರವೇಶದ ಸಂದರ್ಭದಲ್ಲಿ ಕುರುಬರನ್ನು ಮನೆಗೆ ಆಹ್ವಾನಿಸಿ ಹೊಸಪಾತ್ರೆಯಲ್ಲಿ ಹಾಲು ಹಾಕಿ, ಒಲೆಯ ಮೇಲಿರಿಸಿ, ಅವರಿಂದಲೆ ಕಾಯಿಸಿ, ಹಾಲು ಉಕ್ಕಿ ಹೊರಸೂಸುವಂತೆ ಮಾಡುವುದು. ಕುರುಬರು ಹಾಲುಕ್ಕಿಸಿದ ಮನೆ ಹಾಲಿನಂತೆ ಉಕ್ಕೇರುವುದು ಎಂಬ ಹೇಳಿಕೆ ಜನಪದರಲ್ಲಿ ಜನಜನಿತವಾಗಿದೆ. ಇದಕ್ಕೆ ಕಾರಣವೂ ಸ್ಪಷ್ಟವಿದೆ. ಕುರುಬರು ಪಶುಪಾಲಕರು. ಅವರು ಕುರಿಗಳ ಹಾಲನ್ನು ಮಾರದೆ ಮರಿಗಳಿಗೆ ಉಣಿಸಿ ಹಿಂಡು ಬೆಳೆಸುತ್ತಾರೆ. ಬಡಮಕ್ಕಳು ಉಂಡು ಹೆಸರು ಹೇಳಬೇಕು, ಹಿಂಡನ್ನು ಕಾಯುವ ನಾಯಿ ಕುಡಿದು ಬಲಿಷ್ಟವಾಗಬೇಕು ಎಂಬುದು ಅವರ ಹಂಬಲ. ಹೀಗಾಗಿ ಅವರಿಂದ ಯಾವುದೇ ಕೆಲಸ ಆರಂಭಿಸಿದರೆ ಫಲವಂತಿಕೆ ಹೆಚ್ಚಾಗುತ್ತದೆ. ಎಂಬ ದೃಢವಾದ ನಂಬಿಕೆ ಜನಪದರಲ್ಲಿ ಇದೆ.

**ಹೇಳಿಕೆಗಳ ಅರ್ಥ :**

ಸಾಮಾನ್ಯವಾಗಿ 'ಹೇಳಿಕೆ' ಎಂದರೆ ಮಾತು, ನುಡಿ ಎಂದರ್ಥ. 'ದೇವರ ಹೇಳಿಕೆ' ಎಂದರೆ ದೇವರ ಮಾತು ಅದು ಪೂಜಾರಿ ಮೂಲಕ ಸಮಾಜಕ್ಕೆ ಸಂವಹನವಾಗುತ್ತದೆ. ಆ ಹೇಳಿಕೆಗಳು

ಬದುಕಿನ ಸ್ಥಿತಿ-ಗತಿ-ಭವಿಷ್ಯವನ್ನು ಒಳಗೊಂಡಿರುವುದರಿಂದ ಅವುಗಳಿಗೆ ಸಮಾಜದಲ್ಲಿ ಶ್ರದ್ಧೆ, ನಂಬಿಕೆ, ಗೌರವ ಇರುತ್ತದೆ ಏಕೆಂದರೆ ಅದು ದೇವರ ಮಾತು ತಾನೆ! ಇದಕ್ಕೆ ಹಾಲುಮತ ದೈವಗಳ ಹೇಳಿಕೆಗಳು ಹೊರತಲ್ಲ. ಹೇಳಿಕೆಗಳು ಅಭಿವ್ಯಕ್ತವಾಗುವ ಸಂದರ್ಭ ತುಂಬ ಅರ್ಥಪೂರ್ಣವಾಗಿರುತ್ತದೆ.ಹಾಲುಮತ ದೈವದ ಜಾತ್ರೆ ಉತ್ಸವಗಳಲ್ಲಿ ಪೂಜಾರಿಯ ಮೈಮೇಲೆ ದೇವರ ಪ್ರವೇಶವಾಗುತ್ತದೆ. ಇಲ್ಲವೇ ಪೂಜಾರಿಯೇ ದೈವೀಶಕ್ತಿಯಲ್ಲಿ ತಾದಾತ್ಮ್ಯ ಹೊಂದುತ್ತಾನೆ. ಮನೋವೈಜ್ಞಾನಿಕವಾಗಿ ಅದನ್ನು ವಿಶ್ಲೇಷಿಸಿದಾಗ ಅದಕ್ಕೆ ಆ ಸಂದರ್ಭದ ಪರಿಸರವು ಕಾರಣವಾಗುತ್ತದೆ. ಒಂದೇ ಸವನೆ ಡೊಳ್ಳಿನ ಬಡಿತ ಪ್ರಾರಂಭವಾಗುತ್ತದೆ. ಡೊಳ್ಳು ಬಡಿಯುವುದರಿಂದ ಹೊರಹೊಮ್ಮುವ ನಾದ ಆತನನ್ನು ಮಾನಸಿಕವಾಗಿ ಉನ್ಮಾದಗೊಳ್ಳುವಂತೆ ಪ್ರೇರಣೆ ನೀಡುತ್ತದೆ. ಅಲ್ಲಿ ದೈವೀ ಶಕ್ತಿ ಆವರಣ ಉಂಟಾಗುತ್ತದೆ. ಆಗ ದೇವರಸಿ ಅಥವಾ ಗೊರವ ಅಥವಾ ಮಾರಾಯರು ಅಥವಾ ಒಡೆಯರರು ದೈಹಿಕವಾಗಿ ನೆಲದ ಮೇಲಿದ್ದರೂ ಆತನ ಭಾವ ಹಾಲುಮತ ದೈವದಲ್ಲಿ (ಬೀರಪ್ಪ, ಮಾಳಿಂಗರಾಯ ಮುಂತಾದ)ಲೀನವಾಗಿ ದೈವೀಸ್ಫೂರ್ತಿಗೆ ಒಳಗಾಗುತ್ತಾನೆ. ಅವನು ತನಗಾದ ಅನುಭವವನ್ನು ಬೆಡಗಿನ ಮಾತುಗಳಲ್ಲಿ ಉಚ್ಚರಿಸುತ್ತಾನೆ. ಅವುಗಳಿಗೆ 'ದೇವರ ಹೇಳಿಕೆ'ಗಳೆಂದು ಕರೆಯುತ್ತಾರೆ.

ಪೂಜಾರಿಯ ಮೈಮೇಲೆ ದೇವರು ಬರುತ್ತದೆಂಬ ನಂಬಿಕೆ ಜನಪದರಲ್ಲಿ ಬಲವಾಗಿದೆ. ಹಳ್ಳಿಗಳಲ್ಲಿ ಉಗ್ರವಾದ ಕಾಯಿಲೆಯೋ, ಮಳೆಯ ಅಭಾವವೋ ಅಥವಾ ಇನ್ನಾವುದಾದರೂ ಅಂತಹ ಸಾರ್ವತಿಕ ಸಮಸ್ಯೆಗಳು (ಬಂಜೆತನ, ಬೆಳೆಹಾನಿ, ಪ್ರಕೃತಿವಿಕೋಪ, ಮಾನಸಿಕ ಕಾಯಿಲೆ, ಆಸ್ತಿವ್ಯಾಜ್ಯಗಳು ಇತ್ಯಾದಿ) ಬಂದಾಗ ಅದರ ಪರಿಹಾರಾರ್ಥ ಆ ಹಳ್ಳಿ ದೇವರ (ಅಮಾನುಷ ಶಕ್ತಿಯ) ಸಹಾಯ ಪಡೆಯಲು ಪ್ರಯತ್ನಿಸುತ್ತಾರೆ. ಹುಣ್ಣಿಮೆ, ಅಮವಾಸ್ಯೆ ದಿವಸ ಗ್ರಾಮ ಅಥವಾ ಗ್ರಾಮ ದೇವರ ಗುಡಿಗೆ ಹೋಗಿ ತಮ್ಮ ತಮ್ಮ ಸಮಸ್ಯೆಗಳನ್ನು ದೇವರ ಪೂಜಾರಿ (ದೇವರಸಿ)ಯ ಮುಂದೆ ಹೇಳುತ್ತಾರೆ. ಆಗ ಪೂಜಾರಿ ಕೆಲವೊತ್ತು ಮೌನವಾಗಿದ್ದು ಜೊಲಿ ಹೊಡೆಯುತ್ತಾನೆ. ಆಗ ಅವನ ಮೈಮೇಲೆ ದೇವರು ಬಂದಿದೆಯೆಂದರ್ಥ. ಅವನ ಬಾಯಿಂದ ಜನರ ಸಮಸ್ಯೆಗಳಿಗೆ ಪರಿಹಾರವಾಗಿ ಹೇಳಿಕೆಗಳು (ದೇವರವಾಣಿ) ಪುಂಕಾನುಪುಂಕವಾಗಿ ಬರುತ್ತವೆ. ಅವನು ಹೇಳಿದರೆ ಸಾಕ್ಷಾತ್ ದೇವರೇ ಹೇಳಿದ ಹಾಗೆ. ಜನರು ಭಯಭಕ್ತಿಯಿಂದ ಆ ಹೇಳಿಕೆಗಳನ್ನು ಕೇಳುತ್ತಾರೆ. ಅಲ್ಲದೆ ಚಾಚೂ ತಪ್ಪದೆ ಆಚರಣೆಗೆ ತರುತ್ತಾರೆ. ಉದಾಹರಣೆಗೆ:

೧. ಎಲೆ ಮಕ್ಕಳಿರಾ! ಏಳು ಸಮುದ್ರ ದಾಟಿ ಬಂದಿನಿ ಈಗ ತುರ್ತುರೋಹಿಣಿ, ಮಿರ್ಗಾ, ಪುಷ್ಯಾ ಮಳಿ ಬರ್‍ತೆತಿ ಕೂರಿಗಿ ಕುಂಟಿ ಸಾಗ ಮಾಡಿರೆಲೆ, ಆಶ್ಲೇಶಾ ಮಳೆಗೆ ರೈತನ ಕಣ್ಣು ಮ್ಯಾಲ್ ಹೋಗಬಾರದು. ತಗ್ಗಿ ಬಗ್ಗಿ ನಡೀಹಿರಲೇ ಹಾಕರೆಲೇ ಡೊಳ್ಳು!

೨. ಎಲೆ ಮಕ್ಕಳಿರಾ! ಮುತ್ತಿನಂತಹಬೀರಪ್ಪ ಹೇಳ್ಯಾನ ಐದು ಅಮಾಸಿ ನನ್ನ ಗುಡಿಗೆ ತಪ್ಪದ್ ಬರಬೇಕು. ನನ್ನ ಅಂಗಳ ಹಸನ ಮಾಡಬೇಕು. ಬಂದ ದೆವ್ವ ಬಂದ ಹಾದಿಲೆ ಹೋಗುತ್ತದೆ. ಏನ್ ಚಿಂತಿ ಮಾಡಬೇಡಿರಿ ಹಾಕರಲೇ ಡೊಳ್ಳು!

೩. ಬಂಡಿತುಂಬ ಅನ್ನ ಕೊಪ್ಪರಿಗೆ ತುಂಬಾ ನೀರು ಕೊಟ್ಟನಿ ಒಕ್ಕಲಿಗ್ಯಾ ಮಗನ ಮರಿಬ್ಯಾಡ[೩]

ಇತ್ಯಾದಿ ಹೇಳಿಕೆಗಳು ಪ್ರಚಲಿತದಲ್ಲಿವೆ. ಅವು ಬದುಕಿನ ಭವಿಷ್ಯದ ಸ್ಥಿತಿ-ಗತಿಯನ್ನು ಹೇಳುತ್ತವೆ. ಅವುಗಳಲ್ಲಿ ಉಚ್ಚಾರಣೆಯ ಒತ್ತು, ಧ್ವನಿಯ ಏರಿಳಿತ, ತೀವ್ರತೆ ಇರುತ್ತದೆ. ಅಲ್ಲದೆ ಭಾಷಾಚಮತ್ಕಾರವು ಅಲ್ಲಿರುತ್ತದೆ. ದೇವರನ್ನು ಹೂ ಕೇಳುವುದು (ಕೌಲ ಕಟ್ಟುವುದು)ಒಂದು ಪದ್ಧತಿ, ದೇವರ ವಿಗ್ರಹಕ್ಕೆ ವಿಪುಲವಾಗಿ ಹೂವುಗಳನ್ನು ಮುಡಿಸಿರುತ್ತಾರೆ. ಪೂಜೆ ಆಗುತ್ತದೆ. ಭಕ್ತಾದಿಗಳು ದೇವರ ವಿಗ್ರಹವನ್ನೇ ಜಾತಕ ಪಕ್ಷಿಯಂತೆ ನೋಡುತ್ತಿರುತ್ತಾರೆ. ಹೂ ಬೀಳುವತನಕ ಜನರು ಕಾಯುತ್ತಾರೆ. ಎಡಗಡೆ ಹೂ ಬಿದ್ದರೆ ಕೇಳಿಕೊಂಡದ್ದು ಆಗುವುದಿಲ್ಲ. ಅದು ಅನಿಷ್ಟದ ಸಂಕೇತ. ಬಲಗಡೆ ಹೂ ಬಿದ್ದರೆ ಕೇಳಿದ ಕೆಲಸ ಆಗುತ್ತದೆ. ಇನ್ನೊಂದು ನೇರವಾದ ಮಾರ್ಗವಿದೆ. ದೇವರ ಅಭಿಪ್ರಾಯ ಅಥವಾ ವರವನ್ನು ಕೇಳಲು ದೇವಸ್ಥಾನದ ಮುಂದೆ, ಕಿವಿಕಿವುಡಾಗುವಂತೆ ವಾದ್ಯಘೋಷಗಳಾಗುತ್ತಿದಂತೆ ಒಬ್ಬನು ಆವೇಶದಿಂದ ಕೇಕೆ ಹಾಕುತ್ತಾನೆ. ಜನರು ತಮ್ಮ ಸಮಸ್ಯೆಯನ್ನು ದೇವರಲ್ಲಿ ಅರಿಕೆ ಮಾಡಿಕೊಂಡಾಗ ಆ ದೇವರು ಸೂಕ್ತ ರೀತಿಯಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿ ಆಶ್ವಾಸನೆಯನ್ನೋ ಅಭಯ ಭರವಸೆಯನ್ನೋ ಕೊಡುತ್ತಾನೆ. ದೇವರು ಮೈ ಮೇಲೆ ಬಂದ ವ್ಯಕ್ತಿ ಇಡೀ ಸಮುದಾಯವನ್ನೇ ನಿಯಂತ್ರಿಸುತ್ತಾನೆ. ಅವನಿಗೆ ಸಮುದಾಯದಲ್ಲಿ ತುಂಬ ಗೌರವವಿರುತ್ತದೆ. ಏಕೆಂದರೆ ಅವನು ದೇವರ ಪ್ರತಿರೂಪ ತಾನೆ! ಹೇಳಿಕೆಯ ಹಿಂದಿರುವ ಭಾಷೆಯ ಮನೋವೃತ್ತಿ ಅದರ ಹಿಂದಿರುವ ಭಾಷಿಕ ತರ್ಕದ ವಿಶ್ಲೇಷಣೆ ಇದೆ. ನಿಬಂಧದ ಆರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.

ಇಂತಹ ನಂಬಿಕೆಗಳು ಕರ್ನಾಟಕದಲ್ಲಿ ಮಾತ್ರವಲ್ಲ. ಭಾರತದಲ್ಲಿ ಮಾತ್ರವಲ್ಲ ಪ್ರಪಂಚದ ಬಹುಪಾಲು ದೇಶಗಳಲ್ಲಿ ಪ್ರಚಲಿತವಾಗಿವೆ. ಈ ತಲೆಮಾರಿನಲ್ಲಿ ಮಾತ್ರವಲ್ಲದೆ ತಲೆತಲಾಂತರಗಳಿಂದ ಸಾಗಿಬಂದಿವೆ, ವಿದ್ಯಾವಂತರು, ಅವಿದ್ಯಾವಂತರು, ನಾಗರಿಕರು, ಜನಪದರು ಮೊದಲಾದ ಎಲ್ಲ ಸಾಮಾಜಿಕ ವರ್ಗಗಳಲ್ಲಿಯೂ ಬೇರೆ ಬೇರೆ ಮಟ್ಟದಲ್ಲಿ ಉಳಿದುಬಂದಿವೆ. ಗ್ರಾಮೀಣ ಜನಸಮುದಾಯವಂತೂ ಹೇಳಿಕೆಗಳ ಪ್ರಭಾವದಲ್ಲಿ ಸಂಪೂರ್ಣ ನಂಬಿಕೆ ಇಟ್ಟಿದ್ದಾರೆ. ಪರಿಹಾರಕ್ಕೆ ಬೇಕಾದ ಬೇರೆ ಬೇರೆ ಕ್ರಮಗಳನ್ನು ಅನುಸರಿಸುತ್ತಿದ್ದರೂ ಅವರಿಗೆ ಅದು ಮೂಢನಂಬಿಕೆ ಎಂಬ ಭಾವನೆ ಇರಲಿಲ್ಲ. ಇಂದಿನ ಆಧುನಿಕ ಕಾಲದಲ್ಲಿಯೂ ಸಹ ಪ್ರತಿಯೊಬ್ಬರೂ ಪ್ರಜ್ಞಾಪೂರ್ವಕವಾಗಿರಲಿ, ಅಪ್ರಜ್ಞಾಪೂರ್ವಕವಾಗಿರಲಿ ಒಂದಲ್ಲ ಒಂದು ಹಂತದಲ್ಲಿ ಹೇಳಿಕೆಗಳ ಬಗ್ಗೆ ಗೌರವ ಇಟ್ಟುಕೊಂಡಿರುತ್ತಾರೆ.

**ಹೇಳಿಕೆಗಳ ಸ್ವರೂಪ :**

ಹೇಳಿಕೆಗಳ ಪ್ರಭಾವ ಸಮುದಾಯದಲ್ಲಿ ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಗೆ ಹಲವು ರೀತಿಯಲ್ಲಿ ವ್ಯಾಖ್ಯಾನಿಸಲು ಸಾಧ್ಯವಾಗುತ್ತದೆ. ಮಾತಿನ ಮೂಲಕ ಹಾಗೂ ಮನಸ್ಸಿನ ಮೂಲಕ

ಈ ಪ್ರಭಾವ ಉಂಟಾಗಬಹದಾದರೂ ಕಾಲಾನುಕಾಲದಿಂದ ಜನ ಹೇಳಿಕೆಯ ಭಾಷೆಯಲ್ಲಿ ನಂಬಿಕೆ ಇಟ್ಟಿರುವುದು ಆಶ್ಚರ್ಯ ಎನಿಸಬಹುದಾದರೂ ವಿಚಾರ ಮಾಡಿದಾಗ ತೀರ ಸಹಜವಾದುದು ಎಂಬ ಭಾವನೆ ಬರುತ್ತದೆ. ಜನಪದ ಬದುಕಿನಲ್ಲಿ ಅತೀಂದ್ರೀಯವಾದ ದೇವರಿಗೆ ತುಂಬ ಮಹತ್ವವಿದೆ. ಆದ್ದರಿಂದಲೇ ಜನಪದರು ದೇವರ ಹೇಳಿಕೆಗೆ ಹೆಚ್ಚು ಗಮನ ಕೊಟ್ಟಿದ್ದಾರೆ. ದೇವರ ಹೇಳಿಕೆಗಳು ಕೇಳುವ ಜನರು ಮನಸ್ಸಿನ ಭಾವನೆಗಳನ್ನು ಕೆರಳಿಸುತ್ತವೆ; ಏಕಾಗ್ರತೆ ಗೊಳಿಸುತ್ತವೆ; ನಂಬಿಸುತ್ತವೆ. ಹೇಳಿಕೆಗಳು ಜನಜೀವನದಲ್ಲಿ ಬಲವಾಗಿ ಬೇರು ಬಿಟ್ಟಿವೆ.

ಹೇಳಿಕೆಗೆ ಸಂಬಂಧಿಸಿದ ವಿವರಗಳನ್ನು ಕಲೆ ಹಾಕುವಾಗ ಮೂರು ಅಂಶಗಳನ್ನು ಗಮನಿಸ ಬೇಕಾಗುತ್ತದೆ. ಮೊದಲನೆಯದಾಗಿ ಹೇಳಿಕೆಗಳ ಪರಿಣಾಮದ ಸ್ವರೂಪ, ಎರಡನೆಯದಾಗಿ ಹೇಳಿಕೆ ಹೇಳುವ ಪೂಜಾರಿಗಳ ವ್ಯಕ್ತಿತ್ವದ ಸ್ವರೂಪ, ಮೂರನೆಯದಾಗಿ ಹೇಳಿಕೆಗಳು ಹೇಳುವ ಭಾಷಿಕ ಕ್ರಿಯೆಗಳ ಸ್ವರೂಪ, ಹೇಳಿಕೆಗಳ ಪ್ರಭಾವ ಎರಡು ರೀತಿಯಾಗಿರಬಹುದೆಂದು ತಿಳಿಯಲು ಸಾಧ್ಯವಾಗಿದೆ. ೧. ನೈತಿಕ ೨. ಸಹಜವಾದ ಬಗೆ. ಇಚ್ಛಾಶಕ್ತಿಯಿಂದ ಜನರ ಸಮಸ್ಯೆಗಳನ್ನು ಪರಿಹರಿಸುವುದೇ ಅವುಗಳ ಉದ್ದೇಶವಾಗಿದೆ. ಕೆಟ್ಟಕಣ್ಣು, ಅತೃಪ್ತಿ, ಅನಾರೋಗ್ಯ, ಪ್ರಕೃತಿ ವಿಕೋಪ ಇವುಗಳಿಂದ ಬದುಕು ಅಸ್ಥಿರವಾಗುತ್ತದೆ. ಸಮಸ್ಯೆಗಳೂ ಉಂಟಾಗುತ್ತದೆ. ಅವುಗಳ ಪರಿಹಾರಕ್ಕೆ ದೈವೀಶಕ್ತಿ ಜನಪದರ ಜೀವನಕ್ಕೆ ಬಹುದೊಡ್ಡ ಆಸರೆಯಾಗುತ್ತದೆ. ಪರಿಹಾರಕ್ಕೆ ಪೂರಕವಾಗುತ್ತದೆ.

ಹೇಳಿಕೆಗಳ ಸಂಕೀರ್ಣ ಸ್ವರೂಪದ ಪರಿಹಾರಗಳೇ 'ಯಂತ್ರ'ಗಳು (ತಾಯತಗಳು) ಅವು ಮೂರು ಬಗೆಯಾಗಿರುತ್ತವೆ. ೧. ಬಟ್ಟೆಯ ಮೇಲೆ ಧರಿಸುವಂತಹ ಯಂತ್ರಗಳು ೨. ಯಾರಿಗೂ ಕಾಣದಂತೆ ಬಟ್ಟೆಯ ಒಳಗೆ ಬರುವ ಹಾಗೆ ದೇಹದ ಮೇಲೆ ಧರಿಸಿದ ಯಂತ್ರಗಳು ೩. ಪವಿತ್ರವಾದ ಗ್ರಂಥಗಳ ಮಾತುಗಳನ್ನು ಬರೆದಿರುವ ಯಂತ್ರಗಳು. ಹೀಗೆ, ಬಗೆ ಬಗೆಯ ಆ ಸಂದರ್ಭದಲ್ಲಿ ಮಂತ್ರಗಳನ್ನೂ ಸಹ ಸಮಸ್ಯೆಗಳ ಪರಿಹಾರಕ್ಕೆ ಉಚ್ಚರಿಸುತ್ತಾರೆ. ಆಗ ಅವರ ಮಾತಿನಲ್ಲಿ ಒತ್ತು, ಗಂಭೀರತೆ ಹೆಚ್ಚಿರುತ್ತದೆ. ಆ ಸಂದರ್ಭದಲ್ಲಿ ಭಕ್ತರು (ಆಳುಮಕ್ಕಳು) ಭಂಡಾರ ತೂರುತ್ತಾರೆ.

ಸಮಸ್ಯೆಗಳ ಪರಿಹಾರಕ್ಕಾಗಿ ಹೇಳಿಕೆಗಳಲ್ಲಿ ಬಳಕೆಯಾಗುವ ವಸ್ತುಗಳಲ್ಲಿ ಉಗುಳು, ಉಪ್ಪು, ಭಂಡಾರ, ಕಂಬಳಿ ಅವು ಪ್ರಮುಖ ಪಾತ್ರವಹಿಸುತ್ತವೆ. ತಾಮ್ರ, ಕಬ್ಬಿಣ ಮೊದಲಾದ ಲೋಹಗಳು ಪದೆ ಪದೇ ಪ್ರಯೋಜನಕ್ಕೆ ಬರುತ್ತವೆ. ಕೆಂಪು, ಹಳದಿ, ಕಪ್ಪು ಬಣ್ಣಗಳೂ ಸಹ ಸಮಸ್ಯೆಗಳ ಪರಿಹಾರಕ್ಕೆ ಹೆಚ್ಚು ಉಪಯುಕ್ತವಾಗಿ ಪರಿಣಮಿಸಿವೆ. ಒಟ್ಟಾರೆ ಹೇಳಿಕೆಗಳಲ್ಲಿ ಸಮಸ್ಯೆಗಳಿಗೆ ಪರಿಹಾರಗಳು ಅನೇಕ ಸಂಖ್ಯೆಯಲ್ಲಿವೆ. ಮಕ್ಕಳಿಗೆ ದೃಷ್ಟಿದೋಷವಾದರೆ ಉರಿಯುತ್ತಿರುವ ಹಂಚಿಕಡ್ಡಿಗಳನ್ನು ನೀವಳಿಸಿ ಒಲೆಗೆ ಹಾಕುವುದು, ಸಕ್ಕರೆಯನ್ನು ಮಂತ್ರಿಸಿ ತಿನ್ನಲು ಹೇಳುವುದು, ಕೆಟ್ಟಕಣ್ಣಿಳಿದ್ದವರು ಹೊದ ಕಡೆಗೆ ಮೂರು ಸಲ ಉಗುಳಲು ಹೇಳುವುದು. ಮೊದಲ ಸರಳ ಪರಿಹಾರಗಳು ಹೇಳಿಕೆಯಲ್ಲಿರುತ್ತವೆ. ಹೇಳಿಕೆಗಳಲ್ಲಿ ಸಮುದಾಯವನ್ನು ನಿಯಂತ್ರಿಸುವ ಶಕ್ತಿಯಿರುತ್ತದೆ.

ಹೇಳಿಕೆಗಳ ಬಗ್ಗೆ ಜನರಿಗೆ ತುಂಬ ನಂಬಿಕೆಯಿದೆ. ಏಕೆಂದರೆ ಜನರ ಮನಸ್ಸಿನಲ್ಲಿ ಆಲೋಚನೆ ಮಾಡುವುದರ ಮೂಲಕ ತನ್ನ ಸುತ್ತಲು ಇರುವ ವ್ಯಕ್ತಿ, ಪ್ರಾಣಿಗಳು ತನಗೆ ಬೇಕಾದ ಪರಿಣಾಮವನ್ನು ಉಂಟುಮಾಡಬೇಕೆಂಬುದು. ಮಾನವ ತನ್ನ ಇಂದ್ರಿಯಗಳ ಸಹಾಯವಿಲ್ಲದೆ ಕಾಲ ದೇಶವನ್ನು ಮೀರಿ ಭೌತಿಕ ಪ್ರಪಂಚದ ಘಟನೆಗಳನ್ನು ತಿಳಿಯಲು ಸಾಧ್ಯವಿಲ್ಲ, ಹಾಗೆಯೇ ಅತೀಂದ್ರಿಯ ಶಕ್ತಿಗಳ ಪ್ರಭಾವವಿಲ್ಲದೆ ಭೌತಿಕ ವಸ್ತುಗಳ ಮೇಲೆ ಹಿಡಿತ ಸಾಧಿಸಿ ಪ್ರಭಾವ ಬೀರಲೂ ಸಾಧ್ಯವಿಲ್ಲ. ಇದರಲ್ಲಿ ಎಷ್ಟು ಸರಿ, ಎಷ್ಟು ತಪ್ಪು ಎಂಬುದು ಬೇರೆ ವಿಷಯ. ಆದರೆ, ಜನ ಮತ್ತು ಪ್ರಕೃತಿಯನ್ನು ನಿಯಂತ್ರಿಸಲಿಕ್ಕೆ ಅಮಾನುಷ ಶಕ್ತಿಯೇ ಮುಖ್ಯ ಎಂಬುದು ಅಷ್ಟೇ ನಂಬಲರ್ಹವಾಗಿದೆ. ಜನರು ಆ ಶಕ್ತಿಯನ್ನು ಉದಾಸೀನ ಮಾಡುವುದಿಲ್ಲ.

ಪ್ರಪಂಚದ ಸಾಂಸ್ಕೃತಿಕ ಇತಿಹಾಸವನ್ನು ಅಧ್ಯಯನ ಮಾಡಿದಾಗ ಜನ ಮೊದಲಿನಿಂದಲೂ ದೆವ್ವ, ಪುರ್ನಜನ್ಮ, ಮಂತ್ರ–ಮಾಟ, ಪ್ರಾರ್ಥನೆ, ಭವಿಷ್ಯ, ಪವಾಡಗಳು ಮೊದಲಾದ ಅಭೌತಿಕ ಅಂಶಗಳಲ್ಲಿ ನಂಬಿಕೆ ಇಟ್ಟಿರುವ ಅಂಶ ಸ್ಪಷ್ಟವಾಗುತ್ತದೆ. ಇಂದಿನ ವಿಜ್ಞಾನ–ತಂತ್ರಜ್ಞಾನ ಯುಗದಲ್ಲೂ ಜನರು ಅವುಗಳನ್ನು ಸತ್ಯವೆಂದು ನಂಬಿದ್ದಾರೆ. ಈ ಘಟನೆಯ ಹಿಂದಿನ ಮೂಲಶಕ್ತಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಇಂದು ವಿಜ್ಞಾನ ಹೊರಟಿದೆ. ಅದೇ ತರಾ ಮನೋವಿಜ್ಞಾನ ಭೌತಿಕ ತತ್ವದ ಪ್ರಕಾರ ಶರೀರವನ್ನು ನಿಯಂತ್ರಿಸುವುದು ಮೆದುಳು. ಅದು ಶರೀರದ ಕೇಂದ್ರ. ಮಾನವನ ವ್ಯಕ್ತಿತ್ವದಲ್ಲಿ ಅಭೌತಿಕವಾದ ಅಂಶ ಒಂದುಂಟು. ಅದೇ ಮನಸ್ಸು ಅದು ಮನುಷ್ಯನ ಪ್ರಜ್ಞಾಪೂರ್ವಕ ಮತ್ತು ಅಪ್ರಜ್ಞಾಪೂರ್ವಕವಾಗಿ ಅಭಿವ್ಯಕ್ತಗೊಳ್ಳುವ ಶಕ್ತಿಯನ್ನು ನಿಯಂತ್ರಿಸುತ್ತದೆ. ಅದರಲ್ಲಿ ಯಾಂತ್ರಿಕತೆಗೆ ಮೀರಿದ ಆಧ್ಯಾತ್ಮಿಕ ಅಂಶ ಉಂಟು ಎಂಬುದು ಮನೋವಿಜ್ಞಾನದ ಅಧ್ಯಯನದಿಂದ ಸೂಚಿತವಾಗಿದೆ. ಅಂದರೆ ಮಾನವನಲ್ಲಿ ಪ್ರಜ್ಞಾಪೂರ್ವಕವಾಗಿ ಇಂದ್ರಿಯಬದ್ಧ ದರ್ಶನಶಕ್ತಿ, ಬೆಳವಣಿಗೆ ಹೊಂದುವುದಕ್ಕಿಂತ ಮೊದಲೇ ಈ ಮನಃಶಕ್ತಿ ಇದ್ದಿರಬೇಕೆಂದೂ ತಿಳಿದುಬಂದಿದೆ.

ದೇವರು ಮೈಮೇಲೆ ಬಂದಾಗ ಪೂಜಾರಿಗಳಲ್ಲಿ ದೈವೀಶಕ್ತಿ ಹೊರಹೊಮ್ಮಬಹುದಾದ ಸಾಧ್ಯತೆ ಇರುವುದರಿಂದ ಹೇಳಿಕೆಗಳನ್ನು ಮನಃಶಾಸ್ತ್ರದ ನೆಲೆಯಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ತಮ್ಮಲ್ಲಿರುವ ಮನಃಚಲನಶಕ್ತಿಯಿಂದ ಕಾಯಿಲೆಗಳನ್ನು ವಾಸಿಮಾಡುತ್ತೇವೆಂದು ಹೇಳುವ ಅಸಾಂಪ್ರದಾಯದ ಚಿಕಿತ್ಸಕರು ಹೆಚ್ಚು ಪ್ರಯೋಜನಕ್ಕೆ ಬರುವ ಕಾಲ ಬಂದಾಗ ವೈದ್ಯವಿಜ್ಞಾನ ಕ್ಷೇತ್ರಕ್ಕೆ ಅದರಿಂದ ತುಂಬ ಪ್ರಯೋಜನವುಂಟು ಧರ್ಮದ ಮೇಲೆ ಮನೋವಿಜ್ಞಾನದ ಪ್ರಭಾವ ವಿಶೇಷವಾಗಿ ಆಗಿದೆ. ಮಾನವ, ಕೇವಲ ಭೌತಿಕ ವಸ್ತುವಲ್ಲ, ಆತನಲ್ಲಿ ಅಭೌತಿಕವಾದ ಆಧ್ಯಾತ್ಮಿಕವಾದ ವ್ಯಕ್ತಿತ್ವದ ಅಂಶ ಉಂಟು ಎಂಬುದನ್ನು ಮನೋವಿಜ್ಞಾನ ವೈಜ್ಞಾನಿಕವಾಗಿ ಸಾಧಿಸಿ ತೋರಿಸಿರುವುದರಿಂದ ಅದು ಧರ್ಮಕ್ಕೆ ವೈಜ್ಞಾನಿಕ ವಿಶ್ಲೇಷಣೆಯನ್ನು ನೀಡಿ ಅದಕ್ಕೆ ಸಮರ್ಥನೆಯನ್ನು ಕೊಟ್ಟಿದೆ. ಪುನರ್ಜನ್ಮದ ಬಗ್ಗೆ ಇಂದು ನಡೆದಿರುವ ಸಂಶೋಧನೆಗಳಿಂದ

ಪುನರ್ಜನ್ಮ ಸಾಧ್ಯ ಎಂಬ ಅಂಶವೂ ತಿಳಿದುಬಂದಿರುವುದರಿಂದ ಧರ್ಮಕ್ಕೆ ಇನ್ನೂ ಹೆಚ್ಚಿನ ವೈಜ್ಞಾನಿಕ ಸಮರ್ಥನೆ ದೊರೆತಂತಾಗಿದೆ.

ಪ್ರಾರ್ಥನೆ ಮಾಡುವವನಿಗೆ ಮಾತ್ರ ಪ್ರಾರ್ಥನೆಯ ಪರಿಣಾಮವಾಗುವುದರ ಜೊತೆಯಲ್ಲಿಯೇ ಪ್ರಾರ್ಥನೆ ಉದ್ದೇಶಿತ ವ್ಯಕ್ತಿಗಳ ಮನಸ್ಸಿನ ಮೇಲೂ ಪರಿಣಾಮ ಬೀರಬಹುದು. ಇದರಿಂದಾಗಿ ಪ್ರಾರ್ಥನೆ ಅರ್ಥವತ್ತಾದುದು ಎಂದು ಹೇಳುವುದರಿಂದ ಧರ್ಮದ ಮತ್ತೊಂದು ಪ್ರಮುಖ ಅಂಶಕ್ಕೆ ವೈಜ್ಞಾನಿಕ ಸಮರ್ಥನೆ ದೊರೆತಂತಾಗುತ್ತದೆ. ಹೀಗಾಗಿ ಮನೋವಿಜ್ಞಾನ ಧರ್ಮದ ಮೇಲೆ ಅಪಾರವಾದ ಪ್ರಭಾವ ಬೀರಿದೆ. ತತ್ವಶಾಸ್ತ್ರದ ಸಮಸ್ಯೆಗಳಲ್ಲಿ ದೇಹ-ಮನಸ್ಸುಗಳು ಸಮಸ್ಯೆಯೂ ಒಂದು ಮನೋವಿಜ್ಞಾನ ಈ ಸಮಸ್ಯೆಗೆ ವೈಜ್ಞಾನಿಕ ಉತ್ತರ ನೀಡುವುದರಿಂದ ತತ್ವಜ್ಞಾನಕ್ಕೆ ಈ ವಿಷಯದಲ್ಲಿ ಹೆಚ್ಚಿನ ಆಧಾರ ದೊರೆತಂತಾಗಿದೆ. ಭವಿಷ್ಯ, ದರ್ಶನವೂ ಸಹ ತತ್ವಜ್ಞಾನಿಗಳ ಗಮನವನ್ನು ವಿಶೇಷವಾಗಿ ಸೆಳೆದಿದೆ. ಮನಸ್ಸಿನ ಚಲನಶಕ್ತಿ ಪ್ರಯೋಗಗಳು ಪುನರಾವರ್ತನೆ ಮಾಡಲು ಕಠಿಣವಾಗಿದೆ. ಏಕೆಂದರೆ ಮನಃಚಲನಶಕ್ತಿ ಅತ್ಯಂತ ಸೂಕ್ಷ್ಮವಾದ ಶಕ್ತಿ ಮಾತ್ರವಲ್ಲದೆ ಅಪ್ರಜ್ಞಾಪೂರ್ವಕವಾಗಿರುವುದೂ ಇದಕ್ಕೆ ಕಾರಣ. ಹೊರಗಿನ ಪ್ರಭಾವಗಳು ಮನಃಚಲನಶಕ್ತಿ ಪ್ರಯೋಗದಲ್ಲಿ ಭಾಗವಹಿಸುತ್ತಿರುವ ಕರ್ತೃವಿನ ಮೇಲೆ ಪ್ರಭಾವ ಬೀರುತ್ತದೆ. ಅಷ್ಟೇ ಏಕೆ ಪ್ರಯೋಗಕಾರರ ಜಾಣ್ಮೆಯ ಮೇಲೆ ಕರ್ತೃವಿನ ಈ ಶಕ್ತಿಪ್ರದರ್ಶನ ನಿರ್ಧಾರವಾಗುತ್ತದೆ. ಇದರಿಂದಾಗಿ ಮನೋವಿಜ್ಞಾನ ಕರ್ತೃವಿನ ಮನಸ್ಥಿತಿಯನ್ನು ಅನುಸರಿಸಿ ಅವನನ್ನು ಸರಿಯಾದ ಮಾನಸಿಕ ವಾತಾವರಣದಲ್ಲಿ ಕೆಲಸ ಮಾಡಲು ಅವಕಾಶ ಮಾಡಬೇಕಾಗುತ್ತದೆ. ಇದರಿಂದಾಗಿ ಮನೊವಿಜ್ಞಾನ ವಿಜ್ಞಾನಿಯಾಗಿರುವಂತೆಯೇ ಉತ್ತಮ ಕಲೆಗಾರನೂ ಆಗಿರಬೇಕಾಗಿರುತ್ತದೆ. ಮನಸ್‌ಚಲನಶಕ್ತಿ ಪ್ರಯೋಗಗಳಲ್ಲಿ ಭಾಗವಹಿಸಿದ ಕರ್ತೃಗಳು ಸಹಜವಾದ ವ್ಯಕ್ತಿತ್ವವುಳ್ಳವರಾಗಿದ್ದಾರೆ. ಅವರಲ್ಲಿ ಯಾವ ಬಗೆಯ ಮಾನಸಿಕ ವಿಕಾರಗಳೂ ಇರುವುದಿಲ್ಲ. ಇದರಿಂದ ಮನಸ್‌ಚಲನಶಕ್ತಿ ಆರೋಗ್ಯವಾಗಿರುವ, ಮಾನಸಿಕ ವಿಕಾರವಿಲ್ಲದ ಜನಗಳಲ್ಲಿಯೂ ಇರುವುದೆಂಬ ಅಂಶ ತಿಳಿದಿದೆ. ಮನಃಚಲನಶಕ್ತಿಯ ಪ್ರಯೋಗ ಯಶಸ್ವಿಯಾಗಬೇಕಾದರೆ ಉತ್ತಮ ಪ್ರಯೋಗಕಾರ, ಉತ್ತಮ ಕರ್ತೃ, ಕರ್ತೃವಿನ ಪ್ರಿಯವಾದ ಗುರಿ ಹಾಗೂ ಪ್ರಿಯವಾದ ಪ್ರಾಯೋಗಿಕ ಆವರಣ ಈ ನಾಲ್ಕೂ ಅಂಶಗಳು ಸೇರಬೇಕಾಗುತ್ತದೆ. ಈ ಕಾರಣದಿಂದಲೇ ಮನೋವಿಜ್ಞಾನ ಪ್ರಯೋಗಗಳು ಉಳಿದ ವಿಜ್ಞಾನದ ಪ್ರಯೋಗಗಳಿಗಿಂತ ಭಿನ್ನವಾಗಿದೆ.

ಮನಃಚಲನಶಕ್ತಿ ಜೀವನದಲ್ಲಿ ಸಹಜ ಘಟನೆಗಳ ರೂಪದಲ್ಲಿ ಕಾಣಿಸುತ್ತದೆ. ಹೇಳಿಕೆಗಳು ಅಪೂರ್ವ ಪವಾಡಗಳ ಬಗ್ಗೆಯೂ ಹೇಳುತ್ತವೆ. ಆ ಹೇಳಿಕೆಗಳಲ್ಲಿಸಹಜತೆ ಇರುತ್ತದೆ. ನಿಜ; ಆದರೆ ಅವು ಸತ್ಯವೇ ಎಂಬುದನ್ನು ವೈಜ್ಞಾನಿಕ ಪ್ರಯೋಗಗಳ ಮೂಲಕ ತಿಳಿಯಲು ಸಾಧ್ಯವಿಲ್ಲ. ಈ ಹೇಳಿಕೆಗಳು ನಿಜ. ಎಂದು ಜನ ನಂಬುವ ವಿಷಯ ಮನಸ್‌ಚಲನಶಕ್ತಿಯ ಕ್ಷೇತ್ರಕ್ಕೆ ಸಂಬಂಧಪಟ್ಟಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಅವುಗಳ ಸಾಧ್ಯಾಸಾಧ್ಯತೆ ಏನೇ ಇರಲಿ

ಜಾನಪದಶಾಸ್ತ್ರ ಮತ್ತು ಮಾನವಶಾಸ್ತ್ರಕ್ಕೆ ಹೊಸ ದೃಷ್ಟಿ ಹಾಗೂ ಹೊಸ ಅರ್ಥ ಕೊಡುವುದರಲ್ಲಿ ಅವುಗಳ ಪಾತ್ರ ಹಿರಿದಾಗಿದೆ.

ವ್ಯಕ್ತಿಗಳು ಹಲವು ಸಂದರ್ಭದಲ್ಲಿ ಮಾನಸಿಕ ಅಸ್ತವ್ಯಸ್ತರಾದಾಗ ಜನಪದರು ಅಂತಹ ಘಟನೆಗಳಿಗೆ ಭೂತಪ್ರೇತಗಳಿಗೆ ಆರೋಪ ಮಾಡಿ, ದೇವರ ಹೇಳಿಕೆಗಳಿಗೆ ಮೊರೆಹೋಗುತ್ತಾರೆ. ಮನೋವಿಜ್ಞಾನಿಗಳು ಈ ಘಟನೆಗಳನ್ನು ಅತೃಪ್ತ ವ್ಯಕ್ತಿಯೊಬ್ಬನ ಮನಸ್‌ಚಲನಶಕ್ತಿಯ ಪ್ರಭಾವಕ್ಕೆ ಆರೋಪಣೆ ಮಾಡುತ್ತಾರೆ. ಅತೃಪ್ತವ್ಯಕ್ತಿ ಅತಿಯಾದ ಮಾನಸಿಕ ತೊಳಲಾಟಕ್ಕೆ ಒಳಗಾಗಿ ಜೀವನದಲ್ಲಿ ದಿಕ್ಕೆಟ್ಟು, ನಿರಾಸೆಯಾಗಿ ವಿಚಿತ್ರ ಭಾವನೆಗಳು ಆತನಲ್ಲಿ ಬೆಳವಣಿಗೆಯಾಗುತ್ತವೆ. ಅಸಮಾಧಾನ ಅತಿಯಾದಾಗ ಸುತ್ತಮುತ್ತಲ ವ್ಯಕ್ತಿ, ವಸ್ತುಗಳ ಮೇಲೆ ಕೆಟ್ಟಪರಿಣಾಮ ಬೀರುತ್ತದೆ. ಈ ಪರಿಣಾಮದಿಂದ ಪರಿಹಾರ ಹುಡುಕಲು ಜನಪದರು ದೇವರ ಹೇಳಿಕೆಗಳಿಗೆ ಮೊರೆಹೋಗುತ್ತಾರೆ. ಅವನೇ ಕಾಯುವವ ಎಂಬ ನಂಬಿಕೆ ಅವರಲ್ಲಿದೆ.

ಹೇಳಿಕೆಗಳ ಸಂದರ್ಭದಲ್ಲಿ ದೇವರಸಿಗಳ ಮನಸ್ಸಿನ ತೀವ್ರವಾದ ತುಮುಲ ಆರಂಭವಾಗಿ ಎಳೆತ ಅಥವಾ ತುಯ್ತ ಹೆಚ್ಚಾದಾಗ ಅವರ ಮಾತಿನ ಶಕ್ತಿ ಬಿಡುಗಡೆಯಾಗುತ್ತದೆ. ಆಗ ಆತ ತನ್ನ ನಿಜ ಸ್ವರೂಪವನ್ನು ತೋರಿಸುತ್ತಾನೆ. ಹೇಳಿಕೆಗಳ ಮೂಲಕ ಮನಸ್ಸಿನ ಚಲನಶಕ್ತಿಗೆ ಜನರು ಗೌರವ ಕೊಡುತ್ತಾರೆ; ನಂಬುತ್ತಾರೆ. ಆ ಶಕ್ತಿ ಭಾಷೆಯ ಮೂಲಕ ಅಭಿವ್ಯಕ್ತವಾಗುತ್ತದೆ. ಎಂಬುದು ಅರ್ಥಪೂರ್ಣವಾಗಿ ಕಾಣಿಸುತ್ತದೆ. ಆಗ, ಸಮಸ್ಯೆಗಳು ಪರಿಹಾರವಾಗುತ್ತವೆ. ದೇವರು ರಕ್ಷಣೆ ಮಾಡಿದನು ಎಂದು ಜನರು ನಂಬುತ್ತಾರೆ.

ಹೇಳಿಕೆಗಳು ಮತ್ತು ಅವುಗಳ ಆಚರಣೆಗಳು ಮಾನವನ ಅಪ್ರಜ್ಞಾವಲಯದಲ್ಲಿ ಬೇರು ಬಿಟ್ಟಿರುವ ಅಂಶಗಳು. ಇದು ಕೇವಲ ಗತಕಾಲಕ್ಕೆ ಸೀಮಿತವಾದುದಲ್ಲ. ಕೇವಲ ಅವಿದ್ಯಾವಂತರಿಗೆ ಸೀಮಿತವಾದುದಲ್ಲ. ಇವು ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಸೇರಿ ಹೋಗಿರುವ ಅಂಶ; ಕೆಲವು ಸಂದರ್ಭದಲ್ಲಿ ಪ್ರಜ್ಞಾವಲಯಕ್ಕೆ ಬರುವ ಅಂಶ. ಅಗೋಚರ ಶಕ್ತಿಗಳಿಗೆ ಮಾನವರು ಹೆದರುವುದು ಸಹಜವೇ. ಅವುಗಳ ಪರಿಣಾಮ ತನಗೆ ಉಂಟಾಗದಂತೆ ತಡೆಯಲು ದೇವರ ಹೇಳಿಕೆಗಳಿಗೆ ಮೊರೆಹೋಗುತ್ತಾರೆ. ಹೇಳಿಕೆಗಳಿಂದ ಮಾನವನಿಗೆ ಪ್ರಯೋಜನ ಆಗಬಹುದು, ಆಗದಿರಬಹುದು ಆದರೆ ಹೇಳಿಕೆಗಳನ್ನು ಕೇಳಿದ ವ್ಯಕ್ತಿಗೆ ಸಮಾಧಾನವಂತೂ ದೊರೆಯುತ್ತದೆ. ಉರುಳುವುದು (ದೀಡ್ ನಮಸ್ಕಾರ), ಭಂಡಾರ ಹಚ್ಚಿಕೊಳ್ಳುವುದು, ನೀವಳಿಸುವುದು, ಆರತಿ ಮಾಡುವುದು, ತಾಯತ ಕಟ್ಟಿಕೊಳ್ಳುವುದು ಇವುಗಳ ಉದ್ದೇಶ ಹಾಗೂ ಪರಿಣಾಮ ಇದೇ ಎಂದು ಹೇಳಬಹುದು. ಇವು ವ್ಯಕ್ತಿಗೆ, ಸಮುದಾಯಕ್ಕೆ ಹೆಚ್ಚಿನ ಮನಃಸ್ಥೈರ್ಯವನ್ನು ತಂದುಕೊಡುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಹೇಳಿಕೆಗಳಲ್ಲಿ ಬದುಕಿನ ಹಲವು ಮುಖಗಳು ಚಿತ್ರಿತವಾಗಿರುವುದರಿಂದ ಅವುಗಳಿಗೆ ಸಾರ್ವತ್ರಿಕ ಮುದ್ರೆ ಬಿದ್ದಿರುತ್ತದೆ. ಹಾಲುಮತ ಸಮುದಾಯವು ಒಳಗೊಂಡಂತೆ ಆಯಾ ಗ್ರಾಮದ ಎಲ್ಲ ಸಮುದಾಯಗಳ ಸಾಮಾಜಿಕ, ಧಾರ್ಮಿಕ ಸಾರವನ್ನು

ಸುಲಭವಾಗಿ ಅರಿಯಬೇಕಾದರೆ ಕುರುಬರ ಹೇಳಿಕೆಗಳನ್ನು ಗಮನಿಸಬೇಕು. ಸಮಾಜಮುಖಿಯಾದ ಹೇಳಿಕೆಗಳು ಸಮುದಾಯವನ್ನು ನಿಯಂತ್ರಿಸುತ್ತವೆ. ಜನರು ಇವುಗಳ ಬಗ್ಗೆ ಅಪಾರವಾದ ಭಕ್ತಿ ಶ್ರದ್ದೆ ಇಟ್ಟುಕೊಂಡಿರುತ್ತಾರೆ. ತಾತ್ಪರ್ಯವಿಷ್ಟೇ, ಹೇಳಿಕೆಗಳಿಗೆ ಸಾಂಸ್ಕೃತಿಕ ಮಹತ್ವವಿದೆ.

**ಕೊನೆ ಟಿಪ್ಪಣಿ :**

**ಕಾಲಜ್ಞಾನ, ಬೆಡಗು, ಹೇಳಿಕೆಗಳು :** ಇವು ಭವಿಷ್ಯ ಮತ್ತು ಬದುಕಿನ ಸ್ಥಿತಿಗತಿಗಳನ್ನು ಕುರಿತಾಗಿದ್ದರು ಅವುಗಳ ಸ್ವರೂಪವನ್ನು ಭಾಷಾಬಳಕೆಯ ಸಾಮಾಜಿಕ ಆಯಾಮದ ಹಿನ್ನೆಲೆಯಲ್ಲಿ ಅಭ್ಯಾಸಮಾಡಿದರೆ ಅವುಗಳಲ್ಲಿ ಸೂಕ್ಷ್ಮವಾದ ವ್ಯತ್ಯಾಸ ಇದ್ದೇಇದೆ. ಕಾಲಜ್ಞಾನ-ಭವಿಷ್ಯದ ಜ್ಞಾನ, ಮುಂದೆ ಆಗುವುದನ್ನೆಲ್ಲ ತಿಳಿಯುವಿಕೆ. ಇವುಗಳನ್ನು ಹೆಚ್ಚಾಗಿ ವೀರಶೈವ (ಲಿಂಗಾಯತ) ಸಮುದಾಯದ ಜಂಗಮರು ಕಾಲಜ್ಞಾನ ಹೇಳುತ್ತಾರೆ. ಇವುಗಳ ಭಾಷಾ ಬಳಕೆಯಲ್ಲಿ ಆಯಾ ಪ್ರದೇಶದ ವ್ಯಾವಹಾರಿಕ ಶಿಷ್ಟಭಾಷೆ ಬಳಕೆಯಾಗುತ್ತದೆ. ಬೆಡಗು-ಒಗಟಿನ ಮಾತು: ಇಲ್ಲಿ ಶಬ್ದ ಚಮತ್ಕಾರ ಇರುತ್ತದೆ. ಮತ್ತು ಭಾಷಾಬಳಕೆಯಲ್ಲಿ ಕೌಶಲ್ಯವಿರುತ್ತದೆ. ಹೇಳಿಕೆಗಳು-ಮೇಲೆ ವಿವೇಚಿಸಿದಂತೆ ಕುರುಬ ಸಮುದಾಯದ ಜಂಗಮರಾದ ಒಡೆಯರರು ಹೇಳುತ್ತಾರೆ. ಇವುಗಳ ಭಾಷಾಬಳಕೆಯಲ್ಲಿ ಆಡುಭಾಷೆಯ ಪ್ರಭಾವ ಗಾಢವಾಗಿರುತ್ತದೆ.

**ಕುರುಬರ ಹೇಳಿಕೆಗಳು : ವರ್ಗೀಕರಣ :**

ಕುರುಬ ಸಮಾಜದ ಒಡೆಯರು ಅಥವಾ ಗೊರವರು ಅಥವಾ ಪೂಜಾರಿಗಳು ಸೃಷ್ಟಿಸಿರುವ ಹೇಳಿಕೆಗಳಿಗೆ ಮೌಖಿಕ ಸಾಹಿತ್ಯದಲ್ಲಿ ಸಮುದಾಯದ ಸಾಮಾಜಿಕ, ಧಾರ್ಮಿಕ ವಲಯಗಳಲ್ಲಿ ಅಗ್ರಸ್ಥಾನವಿದೆ. ಒಡೆಯರು ಗುಡಿಗೆ ಬಂದ ಭಕ್ತರ ಎದುರಿನಲ್ಲಿ ಉಗಾಳಿಕೆ ಮಾಡಿದರೆ ಭಂಡಾರ ಹಿಡಿದು ಭಕ್ತನ ಮನೆಗೆ ಹೋದಾಗ ಹರಕೆ ಕೊಟ್ಟರೆ, ಜಾತ್ರೆ ಉತ್ಸವದ ಸಂದರ್ಭದಲ್ಲಿ ಭಕ್ತ ಸಮುದಾಯದ ಎದುರಿಗೆ ಹೇಳಿಕೆ ಮಾಡುತ್ತಾರೆ. ಹೇಳಿಕೆಗಳ ರಚನೆಯಲ್ಲಿ ದೈವದ ಸಂಕಲ್ಪ ಹಾಗೂ ವಿಧಿಯ ಪ್ರತಿರೋಧಗಳು ನಡುವೆ ಸಂಭವಿಸುವ ಬದುಕಿನ ಸಂಘರ್ಷವನ್ನು ನೋಡಬಹುದು, ಭರವಸೆ, ನಿರಾಸೆ, ಎಚ್ಚರಿಕೆ, ಭವಿಷ್ಯ ಮುಂತಾದ ಭಾಷಿಕ ಕ್ರಿಯೆ-ಪ್ರತಿಕ್ರಿಯೆಗಳು ಗೋಚರಿಸುತ್ತವೆ. ಇದರಲ್ಲಿ ಯಾವುದೇ ಕಟ್ಟುಕತೆ ಇರುವುದಿಲ್ಲ. ಇಂತಹ ಹೇಳಿಕೆಗಳು ನಿಜವಾಗಿಯೂ ಮುಂದೆ ಒದಗಬಹುದಾದ ಶುಭ, ಅಶುಭದಾಯಕವಾದ ಪ್ರಸಂಗಗಳನ್ನು ಹೇಳುವಾಗಲು ಕೊನೆಗೆ ಭರವಸೆಯ ನುಡಿಗಳು ಒಡೆಯರ ಬಾಯಿಂದ ಬರುವುದು ಈ ಹೇಳಿಕೆಗಳ ಇನ್ನೊಂದು ವಿಶೇಷ ಅಂಶವಾಗಿದೆ.

ಮೌಖಿಕ ಕ್ರಿಯೆಯಾದ ಕುರುಬರ ಹೇಳಿಕೆಗಳನ್ನು ಮೊಟ್ಟ ಮೊದಲಿಗೆ ಕ್ಷೇತ್ರಕಾರ್ಯದ ನೆರವಿನಿಂದ ಎಂ.ಎಂ.ಪಡಶೆಟ್ಟಿ ಅವರು ೧೯೯೩ರಲ್ಲಿ ಸಂಗ್ರಹಿಸಿ 'ಹೇಳಿಕೆ ಮಾಡ್ಯಾರ ಒಡೆಯರು' ಪುಸ್ತಕ ಹೊರತಂದರು ಹೇಳಿಕೆಗಳ ಸಂಗ್ರಹಕ್ಕೆ ಸಂಬಂಧಿಸಿದ ಮೊದಲ ಪುಸ್ತಕ ಇದಾಗಿದೆ. ಅದರ ಮುಂದುವರೆದ ಭಾಗವಾಗಿ ೨೦೧೭ರಲ್ಲಿ ಹಂಪಿ, ಕನ್ನಡ ವಿಶ್ವವಿದ್ಯಾಲಯದ

ತನ್ನ ಬೆಳ್ಳಿ ಹಬ್ಬದ, ಹಾಲುಮತ ಅಧ್ಯಯನ ಪೀಠದ ದಶಮಾನೋತ್ಸವದ ಪ್ರಕಟನೆಯಾಗಿ 'ಕುರುಬರ ಹೇಳಿಕೆಗಳು' ಎಂಬ ಪುಸ್ತಕವನ್ನು ಎಂ.ಎಂ.ಪಡಶೆಟ್ಟಿ ಅವರು ಹೊರತಂದಿದ್ದಾರೆ. ಅಲ್ಲಿ ಸಂಗ್ರಹವಾದ ಹೇಳಿಕೆಗಳನ್ನು ಕೇಂದ್ರವಾಗಿಟ್ಟುಕೊಂಡು ಹಲವು ವಿದ್ವಾಂಸರು ಕ್ಷೇತ್ರಕಾರ್ಯ ನೆರವಿನಿಂದ ಸಂಗ್ರಹಿಸಿದ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು ಕುರುಬರ ಹೇಳಿಕೆಗಳನ್ನು ಈ ಕೆಳಗಿನಂತೆ ವರ್ಗೀಕರಿಸಿದ್ದಾರೆ.

**೧. ಎಂ.ಎಂ.ಪಡಶೆಟ್ಟಿ :**
೧. ಸಾಮಾನ್ಯ ಹೇಳಿಕೆಗಳು
೨. ಮೈಲಾರ ಕಾರ್ಣಿಕೋತ್ಸವದ ಹೇಳಿಕೆಗಳು[೪]

**೨. ಚನ್ನಪ್ಪ ಕಟ್ಟಿ :**
೧. ಮಳೆಕುರಿತ ಹೇಳಿಕೆಗಳು
೨. ಬೆಳೆಕುರಿತ ಹೇಳಿಕೆಗಳು ಜನರ ಕುರಿತ ಹೇಳಿಕೆಗಳು
೩. ಜಾನುವಾರ ಕುರಿತ ಹೇಳಿಕೆಗಳು
೪. ವ್ಯಾಪಾರ ರಾಜಕೀಯ ಕುರಿತ ಹೇಳಿಕೆಗಳು[೫]

**೩. ಬಿ.ಜಿ.ಬಿರಾದಾರ :**
೧. ಮರಗಾನೂರ ಹೇಳಿಕೆಗಳು
ಬಸಯ್ಯ ಒಡೆಯರ ಅವರ ಹೇಳಿಕೆಗಳು, ನಾಡಗೌಡ ಒಡೆಯರ ಅವರ ಹೇಳಿಕೆಗಳು, ಮಲಕಾರಿ ಸಿದ್ಧ ಒಡೆಯರ ಹೇಳಿಕೆಗಳು, ಮದ್ದಪ್ಪ ಒಡೆಯರ ಹೇಳಿಕೆಗಳು
೨. ಕಲ್ಲೂರ ಹೇಳಿಕೆಗಳು, ಕೆಳಗಿನ ಮಠದ ಹೇಳಿಕೆಗಳು[೬]

**೪. ಅನ್ನಪೂರ್ಣ ಗೋಸ್ಬಾಳ :**
೧. ರಾಜಕೀಯ ಕುರಿತು ಹೇಳಿಕೆಗಳು
೨. ದಂಗೆ ಕುರಿತು ಹೇಳಿಕೆಗಳು
೩. ಮಳೆ ಕುರಿತು ಮುಂತಾದ ಹೇಳಿಕೆಗಳು[೭]

ಈ ಮೇಲಿನ ಅಧ್ಯಯನಕಾರರು ಕುರುಬರ ಹೇಳಿಕೆಗಳ ಸ್ವರೂಪ ಮತ್ತು ಲಕ್ಷಣಗಳ ಆಧಾರದ ಮೇಲೆ ಹೇಳಿಕೆಗಳನ್ನು ವರ್ಗೀಕರಿಸಿದ್ದಾರೆ. ಈ ಅಧ್ಯಾಯದಲ್ಲಿ ನಾನು ಸಂಗ್ರಹಿಸಿದ ಹೇಳಿಕೆಗಳು ಹಾಗೂ ಈ ಹಿಂದೆ ಸಂಗ್ರಹಿಸಿ ಪ್ರಕಟಿಸಿದ ಹೇಳಿಕೆಗಳನ್ನು ಅಧ್ಯಯನ ಮಾಡಿ ಈ ಕೆಳಗಿನಂತೆ ಹೇಳಿಕೆಗಳನ್ನು ವರ್ಗೀಕರಿಸಲಾಗಿದೆ.

**೧. ಸಾಮಾನ್ಯ ಹೇಳಿಕೆಗಳು :** ೧. ಮಳೆ ಕುರಿತು ಹೇಳಿಕೆಗಳು

೨. ಬೆಳೆ ಕುರಿತು ಹೇಳಿಕೆಗಳು

೩. ಜನ-ಜಾನುವಾರ ಕುರಿತು ಹೇಳಿಕೆಗಳು

**೨. ಪ್ರಕೃತಿಗೆ ಸಂಬಂಧಿಸಿದ ಹೇಳಿಕೆಗಳು** ೧. ಬರ ಕುರಿತು ಹೇಳಿಕೆಗಳು

೨. ಸಮೃದ್ಧಿ ಕುರಿತು ಹೇಳಿಕೆಗಳು,

೩. ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದಹೇಳಿಕೆಗಳು

**೩. ಬದುಕಿಗೆ ಸಂಬಂಧಿಸಿದ ಹೇಳಿಕೆಗಳು** ೧. ಸಂತಾನ ಕುರಿತು ಹೇಳಿಕೆಗಳು

೨. ವ್ಯಕ್ತಿತ್ವವನ್ನು ಕುರಿತು ಹೇಳಿಕೆಗಳು

೩. ದಾನದ ಮಹತ್ವವನ್ನು ಸಾರುವ ಹೇಳಿಕೆಗಳು

೪. ಗುರುವಿನ ಮಹತ್ವವನ್ನು ಸಾರುವ ಹೇಳಿಕೆಗಳು

೫. ಶುಭ ಹಾಗೂ ಅಶುಭ ಘಟನೆಗಳನ್ನು ಕುರಿತು ಹೇಳಿಕೆಗಳು,

೬. ಆರೋಗ್ಯ ಕುರಿತು ಹೇಳಿಕೆಗಳು

**೪. ಸಂಪ್ರದಾಯ ಕುರಿತು ಹೇಳಿಕೆಗಳು :**

**೫. ವ್ಯಾಪಾರ ಮತ್ತು ರಾಜಕೀಯ ಕುರಿತ ಹೇಳಿಕೆಗಳು :**

**೬. ಭವಿಷ್ಯ ಕುರಿತು ಹೇಳಿಕೆಗಳು :**

**೧. ಸಾಮಾನ್ಯ ಹೇಳಿಕೆಗಳು :**

ಮಾನವನ ಬದುಕು ಸುಖ-ದುಃಖ, ಹಿರಿಮೆ-ಗರಿಮೆ ಖಿನ್ನತೆ ಸಂತೋಷ ಇಂತಹ ಕೆಲವು ಪ್ರಕ್ರಿಯೆಗಳನ್ನು ಸಂಗತಿಗಳನ್ನು ಅವಲಂಬಿಸಿರುತ್ತದೆ. ಆ ಸಂದರ್ಭದ ಘಟನೆಗಳಿಗೆ ಪೂರಕವಾಗುವ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ಹೇಳುವ ಹೇಳಿಕೆಗಳನ್ನು ಸಾಮಾನ್ಯ ಹೇಳಿಕೆಗಳೆಂದು ಕರೆಯಬಹುದು.

**ಮಳೆ ಕುರಿತು ಹೇಳಿಕೆಗಳು :**

ಮಳೆ ಸರ್ವ ಸಂಕುಲಕ್ಕೂ ಅತ್ಯಗತ್ಯವಾಗಿ ಬೇಕೆ ಬೇಕು. ಜೀವ ಜಲದ ಅಗತ್ಯ ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ಇದ್ದೇ ಇದೆ. ರೈತರು ಕಲ್ಯಾಣ ಕೇಂದ್ರಿತವಾದ ಈ ಆಚರಣೆಯಲ್ಲಿ ಮಳೆ ಕುರಿತಾದ ಹೇಳಿಕೆಗಳಿಗೆ ಅಗ್ರಸ್ಥಾನವಿದೆ. ಏಕೆಂದರೆ ಮಳೆಯಿಂದ ಬೆಳೆ, ಬೆಳೆಯಿಂದ ರೈತನ ಬದುಕು. ಆಕಾಶದಲ್ಲಿ ಮೋಡಗಟ್ಟಿದ್ದನ್ನು ಕಂಡು ಖುಷಿಪಡುವ ಮೊದಲ ವ್ಯಕ್ತಿ ರೈತ. ಕುರುಬರ ಒಡೆಯರ ಒಡಪಿನ ಭಾಷೆಯಲ್ಲಿ ಮೊಡವನ್ನು 'ಗುಡ್ಡದಾಗಿನ ಹುಲಿ' ಎಂದು ಭಾವಿಸುತ್ತಾರೆ. ಅಂತೆಯೇ ಮಳೆ ಕುರಿತಾದ ಅನೇಕ ಹೇಳಿಕೆಗಳು ಒಡೆಯರಿಂದ ಉವಾಚಗೊಂಡಿದ್ದು ಕಂಡುಬರುತ್ತದೆ.

ಈ ವರ್ಷ ಮಳೆ ಬೆಳೆ ಸಂಪೂರ್ಣ

ಅನ್ನದಾನ ಮಾಡ್ರಿ ಕೂಸಾ ಕುನ್ನಿ

ಇದ್ದವರಿಗೆ ಕರುಣಾ ಇರಲಿ

ಡೊಳ್ಳು ಹಾಕರಲೇ[೮]

ತನ್ನ ನಂಬಿದ ರೈತರಿಗೆ ಈ ಹೇಳಿಕೆಯ ಮೂಲಕ ಮಳೆಯ ಬಗ್ಗೆ ನೀಡುವ ಒಡೆಯರು ಕೂಸು ಕುನ್ನಿ (ಮಕ್ಕಳು ಮರಿ)ಇದ್ದವರಿಗೆ ಕರುಣೆ ಇರಲಿ ಅನ್ನದಾನ ಮಾಡಬೇಕು ಎಂದು ಇದರ ತಾತ್ಪರ್ಯವಾಗಿದೆ. ಮಳೆ ಕುರಿತಾಗಿ ಕಲ್ಲೂರ, ಮಾಡ್ಯಾಳ ಮತ್ತು ಚಬನೂರ ಅಮೋಘ ಸಿದ್ದೇಶ್ವರ ಹೇಳಿಕೆಗಳು 'ಕಲ್ಲ ಅರಿಮ್ಯಾಗ ಮ್ಯಾಣದ ಗೂಟ ಜಡಿದಂತೆ' ಎನ್ನುವ ಮಾತುಗಳು ಭಾಷೆಯ ಖಚಿತತೆಯನ್ನು ಮತ್ತು ದೈವದ ಬಗ್ಗೆ ಜನರ ನಂಬಿಕೆಯನ್ನು ಕಾಣುತ್ತೇವೆ.

ಹಿಂಗಾರಿ, ಮುಂಗಾರಿ ಹಚ್ಚಿ ತೂಗಿ ನೋಡುದ್ರಾಗ

ಮುಂಗಾರಿ ಒಂದು ಗುಂಜಿ ಹೆಚ್ಚಾಯ್ತಲೇ

ಬಸವನ ಚಿಕ್ಕ ದಸರಿಗಿ ಹರಿದೀನಿ

ಭೂತ್ಯಾಗ ಹಚ್ಚಿ ಬಯಲ ಮಾಡೀನ್[೯]

ಅಮೋಘಸಿದ್ಧ ಪರಂಪರೆಯಲ್ಲಿ ಬರುವ ಅನೇಕ ಸಿದ್ಧರಿಗೆ ಮಳೆಗಾಲ ಸಿದ್ಧರು ಎಂಬ ಹೆಸರಿದೆ. ಇವರೆಲ್ಲ ಕಂಬಳಿ ಬೀಸಿ ಕ್ಷಣಾರ್ಧದಲ್ಲಿ ಮಳೆ ತರಿಸಿದರೆಂಬ ಪ್ರತೀತಿಯೂ ಇದೆ.

ಮಿರಗ ಅರ್ಧ, ಆರಿದ್ರ ಅರ್ಧ

ಪುಶ್ಯ ಪುನರುಶ್ಯಕ ಕೂರಿಗಿ ಸಾಗಬೇಡಬೇಕ

ಅನ್ನೂದರಾಗ ಇದಿಮಾಯಿ ರಂಡಿ ಇದಿರಿಗಿ ಬಂದ್ಲು

ಭೂತ್ಯಾನ ಹಚ್ಚಿ ಮೂರ ತುಕಡಿ ಮಾಡೂದ್ರಾಗ

ಚಾರಣೆ ಕಸರ ಕುಂತಾವ ಅಂದ.[೧೦]

ರೈತರು ಮಿರಗಾ, ಆರಿದ್ರಾ, ಪುಶ್ಯಾ ಇಂತಹ ಮಳೆಗಳ ಬಗ್ಗೆ ಅಪಾರ ಶ್ರದ್ದೆ ಮತ್ತು ನಂಬಿಕೆ ಇಟ್ಟುಕೊಂಡಿರುತ್ತಾರೆ. ಆ ಮಳೆ ಖಂಡಿತವಾಗಿಯೂ ಆಗುತ್ತವೆ. ರೈತರ ಆತ್ಮ ಸ್ಥೈರ್ಯ ಎಂದೂ ಕಳೆದುಕೊಳ್ಳಬಾರದು ಎನ್ನುವ ನಿಲುವು ಆ ಹೇಳಿಕೆಯಲ್ಲಿವೆ.

ಎಲೇ! ಯಾವ ಕೇಳಾವ ತುದಿಗೈ ಹಿಡಿದ ಕೇಳಬ್ಯಾಡ

ಮುಂಗೈ ಹಿಡಿದ ಕೇಳು ಎಷ್ಟು ಸೋಸಿ ನಡಿದರೂ

ಕರಿತಲಿ ಮಾನವನ ಸೊಕ್ಕು ಮುರಿಲಿಲ್ಲ.

ಮಿರಗಾ ಮಿಂಚಿತು ಅಂದ್ರ ಕೂರಿಗಿ ಸಾಗಿತು

ಬಸವನ ಚಿಕ್ಕ ದಸರೀಗಿ ಹರಿದಿನಿ[೧೧]

ಭವಿಷ್ಯದ ಬಗ್ಗೆ ಹೇಳಿಕೆ ಮಾಡುವವನಿಗೆ ಎಷ್ಟು ಖಚಿತತೆ ಇತ್ತು ಅನ್ನುವುದಕ್ಕೆ ಈ ಹೇಳಿಕೆ ಉದಾಹರಣೆ: ಏನೋ ಹೇಳಿಕೆ ಅನ್ನುವುದಲ್ಲ ಸ್ಪಷ್ಟವಾಗಿಯೇ ಹೇಳುತ್ತಿದ್ದೇನೆ. ಎನ್ನುವುದು ಅವನ ಮೊದಲ ಮಾತಿನಲ್ಲಿಯೇ ಇದೆ. ಯಾವ ಕೇಳಾವ ತುದಿಗೈ ಹಿಡಿದ ಕೇಳಬ್ಯಾಡ ಮುಂಗೈ ಹಿಡಿದ ಕೇಳು ಅನ್ನವುದಲ್ಲಿ ನಿಖರತೆ ಮತ್ತು ಖಚಿತತೆ ಇದೆ. ಈ ಹೇಳಿಕೆಗಳಲ್ಲಿ ರೈತರು ಗುರುವಿನ ಅಥವಾ ದೈವದ ಬಗ್ಗೆ ಭಕ್ತಿ ಶ್ರದ್ದೆಗಳು ಇರಬೇಕು ಅದಕ್ಕಾಗಿ ಮುಂಗೈ ಮುಂದುಮಾಡಿ ಕೇಳಬೇಕೆಂದು ಅದಕ್ಕೆ ಭರವಸೆ ಖಚಿತವೆಂದು ಈ ಹೇಳಿಕೆಯ ಹಿಂದಿನ ತಾತ್ಪರ್ಯವಾಗಿದೆ.

ಎಲೇ! ಮೈಲಾರಲಿಂಗ ಹುಬ್ಬಿ ಹಿಡಿಯಾಯ್ತು ಉತ್ತರಿಗೆ ಉಡಿ ಕಟ್ಟೇನಿ.[೧೨]

ಮುಂಗಾರು ಮಳೆಗಾಲಲ್ಲಿ ಹುಬ್ಬ ಮತ್ತು ಉತ್ತರಿ ಮಳೆಗಳು ಪ್ರಮುಖವಾದವುಗಳು. ಹುಬ್ಬ ಹಿಡಿಯಾಯ್ತು ಅಂದ್ರೆ ಕಡಿಮೆಯಾದರೂ ಉತ್ತರಿ ಮಳೆ ಸಂಪೂರ್ಣವಾಗುತ್ತದೆ. ಎನ್ನುವುದು ಈ ಹೇಳಿಕೆಯಲ್ಲಿದೆ. ಮುರಗಾನೂರಿನ ಬಸಯ್ಯ ಒಡೆಯರ ಅವರು ಮಳೆ ಕುರಿತಾಗಿ ಹೇಳಿರುವ ಒಂದು ಹೇಳಿಕೆ ತುಂಬ ಅರ್ಥಪೂರ್ಣವಾಗಿದೆ ಅದು ಹೀಗಿದೆ.

ಹಾರಲಾಕ ಕಾಮನ ಬೂದಿಯಲ್ಲ! ತಿರಗಲಾಕ ರಾಮಣ ಬಾಣ ಅಲ್ಲ!

ಮುರಗಾನೂರ ಸಿದ್ಧನದು ಕಲ್ಲ ಅರಿಮ್ಯಾಗ ಮ್ಯಾಣದ ಗೂಟ ಜಡಿದಂಗ

ರೋಣಿ ಒಂದು ಭಾಗಕ್ಕ ಸಾಗ ಮಾಡೇನಿ ಮಿರಗಕ್ಕ ಕೂರಿಗಿ ಸಾಗ

ಮಾಡಬೇಕು ಅನ್ನೂದರಾಗ ಕೊಡ್ಡ ಅಡ್ಡ ಬಿತ್ತು! ಆರಿದ್ರಿ ಒಂದು ಭಾಗ

ಸಾಗ ಮಾಡೇನಿ ಪುಶ್ಯ ಪುನರುಶ್ಯಾಕ್ಕ ಸಂಪೂರ್ಣ ಮಾಡಿನಲೆ

ಗಾಣಮಿಣಿ[೧೩]

ಈ ಹೇಳಿಕೆಗಳನ್ನು ಹೇಗೆಲ್ಲ ಅರ್ಥೈಸಿಕೊಳ್ಳಬಹುದು ಎನ್ನುವುದು ಕಷ್ಟಸಾದ್ಯ ಅದರ ಬಳಕೆಯ ಆಯಾಮ ವಿಸ್ತರಿಸಿದಷ್ಟು ವಿಸ್ತಾರವಾಗುತ್ತದೆ. ಮೊದಲು ಎರಡು ಸಾಲಿನಲ್ಲಿ ತನ್ನ ಹೇಳಿಕೆ ಬಗ್ಗೆ ನಿಖರತೆ ಮತ್ತು ಸ್ಪಷ್ಟತೆಯನ್ನು ನೀಡುತ್ತಾರೆ. ಕಾಮನ ಬೂದಿ ಮತ್ತು ರಾಮಣ ಬಾಣ ಗಾಳಿಯಲ್ಲಿ ಅದೃಶ್ಯವಾಗಿ ಅನಿಶ್ಚಿತತೆ ಉದಾಹರಣೆಗಳಾಗಿವೆ. ಕಲ್ಲ ಅರಿಮ್ಯಾಗ ಮ್ಯಾಣದ ಗೂಟ ಜಡದಂಗ ಅನ್ನುವಲ್ಲಿ ಕಲ್ಲಿನಲ್ಲಿ ಯಾವುದೇ ವಸ್ತುವನ್ನು ಜಡಿಯಲು ಸಾದ್ಯವಿಲ್ಲ.ಆದರೆ ಮ್ಯಾನದ ಗೂಟವನ್ನು ಜಡಿದರೆ ಕಲ್ಲನ್ನು ಬಿಟ್ಟು ಮೇಣ ಹೊರಬರದೇ ನಿಖರವಾಗಿರುತ್ತದೆ. ಭಾಷಾಬಳಕೆಯಲ್ಲಿ ಗಾಢತೆಯಿದೆ. 'ಹಾರಲಾಕ ಕಾಮನ ಬೂದಿಯಲ್ಲ! ತಿರಗಲಾಕ ರಾಮಣ ಬಾಣ ಅಲ್ಲ!' ಇಂತಹ ಮಾತುಗಳಲ್ಲಿ ಪೌರಾಣಿಕತೆ ಮತ್ತು ಉಪಮೆಯಗಳು ಅರ್ಥ ಪೂರ್ಣವಾಗಿ ಬಳಕೆಯಾಗಿವೆ. ರೋಣಿ ಒಂದು ಭಾಗಕ್ಕ ಸಾಗ ಮಾಡೇನಿ ಅಂದರೆ ಊರನ್ನು ಎರಡು ಭಾಗ

ಮಾಡಿ ಉದ್ದೇಶಿಸಿ ಹೇಳಿದ್ದೋ ಅಥವಾ ಪ್ರತಿ ಮಳೆಯ ಅವಧಿ ಹದಿನೈದು ದಿನಗಳ ಮೊದಲ ಏಳು ದಿನಗಳ ಒಂದು ಭಾಗ ನಂತರ ಏಳು ದಿನಗಳು ಒಂದು ಭಾಗ ಹೀಗೆಂದು ಅರ್ಥೈಸಬಹುದು. ಅರ್ಧ ಆಗಿ ಅರ್ಧ ಆಗದೇ ಇರುವುದು ರೋಹಿನಿ ಮತ್ತು ಆರಿದ್ರ ಮಳೆಗಳಲ್ಲಿ ಸಂಪೂರ್ಣತೆ ಕಾಣದೆ ಪುಶ್ಯ ಪುನರ್‌ವಸು ಮಳೆಗಳು ಸಂಪೂರ್ಣವಾಗುತ್ತವೆ. ಎನ್ನುವುದು ಈ ಹೇಳಿಕೆಯ ಅರ್ಥವಾಗಿದೆ. ಬದುಕಿನ ಭಾಗವಾದ ಮಳೆ ರೈತರು ಸೇರಿದಂತೆ ಎಲ್ಲ ಸಮುದಾಯದವರಿಗೆ ಆಸರೆಯಾಗಿದೆ. ಮಳೆ ಇದ್ದರೆ ಮಾತ್ರ ಬದುಕು ಎಂಬುದು ಈ ಹೇಳಿಕೆಗಳ ಸಾಂಸ್ಕೃತಿಕ ಮಹತ್ವವಾಗಿದೆ.

ಎಲೆ ಗಾಣಮಣಿ! ಯಾಂವ ಕೇಳಾಂವ ತುದಿಗೆ ಹಿಡಿದ ಕೇಳಬ್ಯಾಡ
ಮುಂಗೈ ಹಿಡಿದ ಕೇಳು ತುರ್ತು ಮಿರಗಾ ಮಿಂಚಿತು ಆರಿದ್ರಾ ಕೂರಗಿ
ಸಾಗಾಯಿತು ಪುಶ್ಯ ಪುನರಷ್ಯ ಚಪ್ಪನಾರು ದೇಶಕ್ಕೆ ಸಂಪೂರ್ಣ[೧೪]

ಇದು ಭವಿಷ್ಯದಲ್ಲಿ ಬರುವ ಸುಗುಣಕಾಲವನ್ನು ಕುರಿತು ಹೇಳಿಕೆಯಾಗಿದೆ. ಎಲ್ಲ ಮಳೆಗಳೂ ಕಾಲಕಾಲಕ್ಕೆ ಬಂದು ಯಾವುದೇ ತೊಂದರೆ ಇಲ್ಲದೆ ಕೃಷಿ ಚಟುವಟಿಕೆಗಳು ಅನಾಯಾಸವಾಗಿ ನೆರವೇರುವ ಮುನ್ಸೂಚನೆಯನ್ನು ನೀಡಿದೆ. ಜನಪದರು ನಂಬಿರುವ ಚಪ್ಪನ್ನಾರು(೫೬) ದೇಶಗಳು ಸರಿಯಾದ ಮಳೆ ಮತ್ತು ಬೆಳೆಯ ಕಾರಣದಿಂದ ಸಮೃದ್ಧವಾಗಿರುತ್ತವೆ ಎಂಬುದನ್ನು ತಿಳಿಸುತ್ತದೆ. ಪ್ರತಿ ವರ್ಷ ಹಾಲುಮತ ಕುಲದೈವವಾದ ಹಾಗೂ ಕರ್ನಾಟಕದ ಶ್ರದ್ಧಾಕೇಂದ್ರವಾದ ಮೈಲಾರ ಕಾರ್ಣಿಕೋತ್ಸವದಲ್ಲಿ ಹೇಳಿಕೆಗಳು ನಡೆಯುತ್ತವೆ. ಬಹುತೇಕ ಸಂಗ್ರಹಿಸಿದ ಹೇಳಿಕೆಗಳಲ್ಲಿ ಮಳೆಗೆ ಸಂಬಂಧಿಸಿದ ಹೇಳಿಕೆಗಳೆ ಇರುತ್ತವೆ.

'ಮುತ್ತಿನ ಮಳೆ ಸುರಿದೀತಲೇ ಪರಾಕ್'[೧೫]
'ಆಕಾಶಕ್ಕೆ ಸಿಡಿಲು ಬಡಿದೀತಲೇ ಪರಾಕ್'[೧೬]
'ಆಕಾಶಕ್ಕೆ ಮಬ್ಬಗವಿದೀತಲೇ ಪಾರಕ್'[೧೭]
'ಮುತ್ತಿನ ಮಳೆ ಬಿತ್ತಲೇ ಪರಾಕ್'[೧೮]
'ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್'[೧೯]

ಒಗಟಿನ ರೂಪದಲ್ಲಿರುವ ಈ ಹೇಳಿಕೆಗಳನ್ನು ಗಮನಿಸಿದರೆ ವಾಚ್ಯಾರ್ಥ, ಲಕ್ಷಣಾರ್ಥ, ಗೂಢಾರ್ಥಗಳು ಅಧ್ಯಯನಕಾರರ ಗಮನ ಸೆಳೆಯುತ್ತವೆ. 'ಮುತ್ತಿನ ಮಳೆ, 'ಆಕಾಶಕ್ಕೆ ಗುಂಡು ಇಂತಹ ಪದಪುಂಜಗಳು ಮಳೆಯ ಅಗತ್ಯತೆಯನ್ನು, ತೀವ್ರತೆಯನ್ನು ತಿಳಿಸಿಕೊಡುತ್ತವೆ. ಈ ತೆರನಾದ ಅನೇಕ ಹೇಳಿಕೆಗಳು ಮಳೆಯ ಮುನ್ಸೂಚನೆಯ ಜೊತೆಗೆ ರೈತನಿಗೆ ಬಲ ನೀಡುವ ದೇವವಾಣಿಗಳಾಗಿವೆ. ಮಳೆಯ ಕುರಿತಾದ ಒಂದು ಸಂಭಾಷಣೆಯ ರೂಪದ ಹೇಳಿಕೆಯನ್ನು ಇಲ್ಲಿ ಉದಾಹರಿಸಬಹುದು. ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಕಟಕೋಳದ

ಸಿದ್ರಾಯಜ್ಜ ನೆರೆದ ಭಕ್ತರ ಮುಂದೆ ಮಳೆಯ ಕುರಿತಾಗಿ ಪ್ರಶ್ನಿಸುತ್ತಾನೆ. ಮಳೆಯೇ ತಾನಾಗಿ ತಾನೇ ಮಳೆಯಾಗಿ ವ್ಯಕ್ತವಾಗುವ ಈ ಹೇಳಿಕೆ ಭಕ್ತ ಹಾಗೂ ಗುರುವಿನ ಸಂಭಾಷಣೆಯಿಂದ ಮಹತ್ವ ಪಡೆದಿದೆ.

ನಾ ಎಲ್ಲಿ ಬೀಳ್ಳೀ ಅಲ್ಲಿ ಬೀಳ್ಯಾ: ಇಲ್ಲಿ ಬೀಳ್ಯಾ
ಅರ್ಥವಾಗದ ಜನ : ಅಜ್ಜ ಕೈ ಮುಗಿತೀವಿ ನೀ ಬೀಳೋದ ಬ್ಯಾಡ ಸುಮ್ನ
ಕುಂಡ್ರಿ ಅಂದ್ರಂತ
ಆಗ ಆವೇಶ ಭರಿತನಾದ ಅಜ್ಜ
ಥೂ ನಿಮ್ಮನೆ ಹಾಳಾಗ ಬೀಳಿತಿನ ಅಂದ್ರ ಬ್ಯಾಡ ಅಂದ್ರಿ
ಕಳಕಂಡ್ರಿಲೇ ನೀವೆಲ್ಲ ಕಳಕಂಡ್ರಿ ಅಂದ್ರಂತ

ಎಲ್ಲರೂ ದಿಗ್ಭ್ರಾಂತರಾದರು:
ದಿಗ್ಭ್ರಾಂತರಾದ ಜನ: ಸಿದ್ರಾಯಜ್ಜ ನಮಗ ನೀ ಹೇಳಿದ್ದು ತಿಳಿದಿಲ್ಲ
ಬಿಡಿಸಿ ಹೇಳು ಅಂದಾಗ ನಾ ಮಳಿಯಾಗಿ ಬಂದಿದ್ದೆ
ಬೀಳ್ತಿನಿ ಅಂದ್ರ ಬ್ಯಾಡ ಅಂದ್ರಿ
ಅದ್ಕ ನಾ ಹೊರಟು ಹೋದೆ ಅಂದಾಗ
ಎಲ್ಲ ಜನ ವಿಪರೀತ ಗೊಂದಲಕ್ಕೀಡಾಗಿ
ತಪ್ಪಾಗೈತಿ ಎಂದಾಗ ಛಾನ್ಸ್ ಹೋಯಿತ್ರಲೇ
ಮತ್ತ ಮುಂದ ನೋಡೋಣ ಅಂದ್ರಂತ[೨೦]

ಹೇಳಿಕೆ ಮಾಡುವವರು ಭವಿಷ್ಯವನ್ನು ಅರಿತು ಪ್ರಕೃತಿಯೊಂದಿಗೆ ಬೆರೆತು ಪ್ರಕೃತಿಯೇ ತಾವಾಗಿ ಭಕ್ತರಿಗೆ ತಿಳಿಯದಾದ ಭಾಷೆಯಲ್ಲಿ ಹೇಳಿ ಅಚ್ಚರಿ ಪಡಿಸುವುದು ಇದೆ. ಗೂಢಾರ್ಥವನ್ನು ಗ್ರಹಿಸುವ ಶಕ್ತಿಯಿಲ್ಲದ ಜನ ಒಮ್ಮೊಮ್ಮೆ ತಮ್ಮ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಟ್ಟ ಸಂಗತಿಗಳು ಕಾಣಸಿಗುತ್ತವೆ. ಇಂತಹ ಸಂಭಾಷಣೆಯಲ್ಲಿ ಆತ್ಮೀಯತೆ ಇದೆ. ಆಡು ನುಡಿಯ ಭಾಷೆಯಲ್ಲಿ ಬಳಕೆಯಾದ ಇಂತಹ ಹೇಳಿಕೆಗಳು ಭಾಷೆಯ ಸಂಕೀರ್ಣತೆ ದೂರವಾಗಿ ಜನರು ಮತ್ತು ಒಡೆಯರರು ಹತ್ತಿರವಾಗುತ್ತಾರೆ. ಪರಸ್ಪರ ಭಾಷಾ ವಿನಿಮಯ, ಸಾಮಾಜಿಕ ಸಂಪರ್ಕ ಅಧಿಕವಾಗುತ್ತದೆ ಪರಸ್ಪರರಲ್ಲಿ ದೇವರ ಬಗ್ಗೆ ಶ್ರದ್ದೆ ನಂಬಿಕೆ ಉಂಟಾಗುತ್ತದೆ. ಗೋಕಾಕ ತಾಲೂಕಿನ ಮಮದಾಪೂರ ಗ್ರಾಮದ ಬೀರಪ್ಪ, ಮಳೆಯ ಕುರಿತಾಗಿ

ಮಕ್ಕಳಿರಾ, ಕೂಸಾ ಕುನ್ನಿ ಹುಟ್ಟಿದರ್
ಮಳಿ ಇಲ್ಲ ಹೇಳಿರೋ ಹೇಳಿರೋ

ಕೇಳಿರೋ ಕೇಳಿರೋ ಕರಿ ಕಂಬಳಿ
ಬೀರಪ್ಪ ಮೂಡಲ ದಿಕ್ಕಿಗಿ ನಿಂತ ಕಂಬಳಿ
ಬೀಸತಾನ ಸುತ್ತಲೂ ಮಳಿಸೂರಿತೈತಿ
ಚಿಂತಿ ಮಾಡಬ್ಯಾಡರಲೇ.[೨೧]

ಮೂಡಣ ದಿಕ್ಕಿನಲ್ಲಿ ನಿಂತು ಬೀರಪ್ಪ ಕಂಬಳಿ ಬೀಸ್ತಾನ ಅಂದರ ಮಳಿ ಬರುವ ಸೂಚನೆ ಖಚಿತವಾಗಿದೆ ಎಂದು ಅಲ್ಲಿನ ಜನ ನಂಬಿದ್ದಾರೆ. ಮಳೆ-ಬೆಳೆ ಎಲ್ಲ ಜೀವ ಸಂಕುಲಕ್ಕೆ ಆಧಾರವಾಗುವ ಕಾರಣದಿಂದ ಬಹುತೇಕ ಭಕ್ತರು ತಮ್ಮ ಸ್ವ ಸಮಸ್ಯೆಗಳಿಗಿಂತ ವರ್ಷದ ಕೃಷಿ ಚಟುವಟಿಕೆಗಳ ಬಗ್ಗೆಯೇ ಗಮನವಿದೆ ಮಳೆ ಬಂದರೆ ಮಾತ್ರ ಬದುಕು ಹಸನಾಗುತ್ತದೆ. ಅದು ದೇವರ ಹೇಳಿಕೆಗಳಿಂದ ಮಾತ್ರ ಸಾಧ್ಯ ಎಂಬ ನಂಬಿಕೆ ಭಕ್ತರಿಗಿದೆ, ಸಮುದಾಯಕ್ಕಿದೆ.

**ಬೆಳೆ ಕುರಿತು ಹೇಳಿಕೆಗಳು :**

ಕೃಷಿ ಚಟುವಟಿಕೆಗಳ ಅಂತಿಮ ಗುರಿ ಉತ್ತಮ ಫಸಲು ಪಡೆಯುವುದು. ಮಳೆಯಾಧಾರಿತ ಕೃಷಿ ಚಟುವಟಿಕೆಯಲ್ಲಿ ಈ ಫಸಲಿನ ಪ್ರಮಾಣ ಅನಿಶ್ಚಿತವಾದುದು. ಆದ್ದರಿಂದ ಕೃಷಿಕರು ದೈವದ ಮೊರೆಹೋದ ಸಂದರ್ಭದಲ್ಲಿ ಸದಾ ಆತಂಕ ಮಡುವುಗಟ್ಟಿದ ಭಕ್ತರು ಈ ವರ್ಷದ ಬೆಳೆಯ ಕುರಿತಾದ ಭರವಸೆಯ ಹೇಳಿಕೆಗಳನ್ನು ಒಡೆಯರು ಉವಾಚಿಸಿದ್ದು ಇದೆ. ಕರ್ನಾಟಕ ಕೃಷಿ ಚಟುವಟಿಕೆಗಳಲ್ಲಿ ಎರಡು ಭಾಗ ಒಂದು ಮುಂಗಾರು ಬೆಳೆ, ಇನ್ನೊಂದು ಹಿಂಗಾರು ಬೆಳೆ. ಮುಂಗಾರು ಫಸಲನ್ನು 'ಮುತ್ತು' ಎಂತಲೂ ಹಿಂಗಾರು ಮಳೆಯನ್ನು ಹವಳ ಎಂತಲೂ ಕರೆದಿದ್ದಾರೆ. ಹವಳ ಮತ್ತು 'ಮುತ್ತು' ಇವು ಒಡೆಯರ ಬಳಸುವ ಸಂಕೇತ ಭಾಷೆಗಳು.

ಎಲೆ ಯಾವ ಕೇಳಾಂವ
ತುದಿಗ್ಯೆ ಹಿಡಿದ ಕೇಳಬ್ಯಾಡ
ಮುಂಗ್ಯೆ ಹಿಡಿದ ಕೇಳಲೇ
ಹವಳ ಮುತ್ತು ಚಿಂತಾಕ ಹಚ್ಚಿ
ಕಾಟಾ ಮಾಡೂದರಾಗ
ಹವಳ ಮೂರು ಗುಂಜಿ ಹೆಚ್ಚಾತು[೨೨]

ಎನ್ನುವ ಈ ಹೇಳಿಕೆಯಲ್ಲಿ ಈ ಸಾಲಿನ ಫಸಲಿನಲ್ಲಿ ಮುಂಗಾರಿ ಫಸಲು ಹವಳ ಹೆಚ್ಚಿನ ಪ್ರಮಾಣದಲ್ಲಿ ಬರಲಿದೆ ಎನ್ನುವ ಈ ಹೇಳಿಕೆಯ ಅರ್ಥವಾಗಿದೆ. ಹವಳ, ಮುತ್ತು, ಇವು ಶುಭದ ಸಂಕೇತಗಳು ಮಳೆಯಾದರೆ ಹೊಲದಲ್ಲಿ ಅಂತಹ ಫಸಲು ಬರುತ್ತವೆ ಎಂಬ ದೈವಿವಾಣಿ ರೈತರಿಗೆ ಆಶಾ ಕಿರಣವಾಗಿದೆ.

ಎಲೆ ಇಜ್ಜೇರಿ ನಿಂಗಣ್ಣ
ಹವಳ ಬಣ್ಣದ ಎತ್ತ ಕೂರಿಗಿ ಹೊಡಿ
ವಕ್ಕಲಿಗನ ಮಗನಿಗೆ ಐದು ಜೀನಸಿನ ಬೀಜಕಟ್ಟ
ಬಡದಾಡಿ ಬಿತ್ತೂದರಾಗ
ಕೆಂದೆತ್ತಿನ ಕೋಡಿಗೆ ಕೋರಿ ನಿಶಾನಿ ಹಚ್ಚಿನಲೇ ಗಾಣಮಿಣಿ
ಇದರಲ್ಲಿ ಹಿಂಗಾರಿ ಮತ್ತು ಮುಂಗಾರಿ ಫಸಲು ಸಮಸಮವಾಗಿ
ಬರುತ್ತದೆ[೨೩]

ಈ ಹೇಳಿಕೆಯಲ್ಲಿ ಸಂಭಾಷಣೆಯಿದೆ ಎತ್ತುಗಳ ಬಗ್ಗೆ, ಕೂರಿಗೆ ಕುಂಟೆಯ ಬಗ್ಗೆ, ರೈತರಿಗೆ ಅಪಾರ ಗೌರವವಿದೆ ಅವು ಸಾಗ ಮಾಡಲಿಕ್ಕೆ ಬೆಳೆ ಹುಲುಸಾಗಿ ಬರಬೇಕು. ಬೀಜವನ್ನು ಭೂಮಿಗೆ ಹಾಕುವಾಗ ರೈತ ಧಾರಾಳತನ ಮೆರೆದರೆ ಉತ್ತಮ ಫಸಲು ಬರುತ್ತದೆ ಎನ್ನುವುದು ಹೇಳುವುದರ ನಂಬಿಕೆ. ಈ ಕೆಳಗಿನ ಹೇಳಿಕೆಯನ್ನು ಗಮನಿಸಲಾಗಿ

ಬಿತ್ತುವಾಗ ಮುಂಗೈ ಹಿಡಿಬ್ಯಾಡ
ಅಂಗೈ ಹಿಡಿರಿ ಮುತ್ತಿನಂತಹ
ಜ್ವಾಳ ಮನ್ಯಾಗ[೨೪]

ಅಂಗೈ ಮತ್ತು ಮುಂಗೈ ಈ ಸಂಕೇತಗಳನ್ನು ಬಳಸಿ ಒಡೆಯರು ಹೇಳುವ ರೀತಿಯನ್ನು ಗಮನಿಸಿದರೆ ಅಂಗೈ ಪರಿಪೂರ್ಣತೆಯ, ಜ್ಞಾನದ, ಬೆಳಕಿನ, ಸಂಕೇತವಾಗಿದೆ. ಮುಂಗೈ ಎನ್ನುವುದು ವಿಶಾಲ ಸ್ವಭಾವದ, ಧಾರಾಳತನ ಇಲ್ಲದೇ ಇರುವುದು ಈ ಸಂಕೇತಗಳನ್ನು ಬಳಸಿಯೇ ಕೃಷಿಕರಿಗೆ ಮಾರ್ಗದರ್ಶನ ನೀಡುವುದು ಇದರಲ್ಲಿ ಅಡಗಿದೆ. ಒಂದೊಂದು ಸಲ ಫಸಲಿನ ಹೇಳಿಕೆಗಳು ಹಿಂದಿನ ವರ್ಷದ ಫಸಲು ಹಾಗೂ ಪ್ರಸ್ತುತ ಸಾಲಿನ ಫಸಲಿನ ನಡುವೆ ತುಲನೆ ಮಾಡಿ ರಚಿತಗೊಂಡಿರುತ್ತವೆ. ಅಂಥ ಹೇಳಿಕೆಯೊಂದು ಹೀಗಿದೆ.

ಎಲೇ ಹಿಂದಿನ ಸಾಲಿನ್ಯಾಗ
ಒಕ್ಕಲಿಗ್ಯಾನ ಮಗನೀಗಿ ಚಿಂತಿ ಇತ್ತು
ಈ ಸಾಲಿನ್ಯಾಗ ಒಕ್ಕಲಿಗನ ಮಗನೀಗಿ
ಹಿಂಗಾರಿ, ಮುಂಗಾರಿ ಫೀಕ್ ಝುಲ್ ಬಿಡಿಸೀನಿ.[೨೫]

ಈ ಹೇಳಿಕೆಯಲ್ಲಿ ಕಳೆದ ವರ್ಷ ಮತ್ತು ಈ ವರ್ಷ ಮಳೆ-ಬೆಳೆ ಬಗ್ಗೆ, ನಡೆದ ಆಗು ಹೋಗುಗಳ ಬಗ್ಗೆ ತೌಲನಿಕ ದೃಷ್ಟಿ ಇದೆ ಆ ಮೂಲಕ ಭಕ್ತರಲ್ಲಿ ಆತ್ಮವಿಶ್ವಾಸ ತುಂಬುವ ಕೆಲಸವನ್ನು ಇಂತಹ ಹೇಳಿಕೆಗಳು ಮಾಡುತ್ತವೆ. ಯಾವ ಫಸಲು ಉತ್ತಮವಾಗಿ ಬರುತ್ತದೆ

ಎನ್ನುವದನ್ನು ಹೇಳುವ ಒಡೆಯರು ಅತೀ ಆತ್ಮವಿಶ್ವಾಸದಿಂದ ಹಿಂಗಾರಿ ಫಸಲು ಹೆಚ್ಚಾಗುತ್ತದೆ ಎನ್ನುವದನ್ನು ಪ್ರಾಣಿಗಳ ಸಂಕೇತದೊಂದಿಗೆ ಹೇಳುವುದು ಇದೆ.

ಎಲೇ! ಯಾವ ಕೇಳಾಂವ ಅಂಗೈ ಹಿಡಿದು ಕೇಳಬ್ಯಾಡ
ಮುಂಗೈ ಹಿಡಿದು ಕೇಳು, ಮುಂಗಾರಿ ನಂದಿ ಮ್ಯಾಲ
ಹಿಂಗಾರಿ ಆನಿ ಮ್ಯಾಲ ಎರಡೂ ತೂಕ ಮಾಡೂದ್ರಾಗ
ದಸರೀಗಿ ಹರದೀನಿ.[೨೬]

ಇಲ್ಲಿ ನಂದಿ ಮತ್ತು ಆನೆಗಳನ್ನು ಪ್ರತಿಮೆಗಳಾಗಿ ಬಳಸಿದ್ದಾರೆ. ನಂದಿ ಆನೆಗಿಂತಲೂ ಚಿಕ್ಕದು, ನಂದಿಯ ಮೇಲೆ ಅಂದರೆ ಆಕಾರದಲ್ಲಿ ಕಡಿಮೆ. ಆನೆಯ ಮೇಲೆ ಎಂದರೆ ದೊಡ್ಡದು. ಮುಂಗಾರಿ ಕಡಿಮೆಯಾಗಿ ಹಿಂಗಾರಿ ಫಸಲು ಹೆಚ್ಚು ಎನ್ನುವದನ್ನು ಈ ಹೇಳಿಕೆ ತಿಳಿಸಿಕೊಡುತ್ತದೆ.

ಮುತ್ತಿನ ರಾಶಿ ಕಣದಾಗ ಬಂದೈತಿ
ಆನಿ ತುಳಿದರ ಸವದಿಲ್ಲ ಬೀರಪ್ಪನ
ಪಲ್ಲಕ್ಕಿ ಹ್ವಾದರ ನುರಿತತಿ
ಐದ ಅಮಾಸಿ ಬರ್ಲೆ.[೨೭]

ಮುತ್ತಿನ ರಾಶಿ ಅಂದರ ಬಿಳಿ ಜೋಳದ ರಾಶಿ. ತೆನೆಯನ್ನು ಮುರಿದು ಕಣದಲ್ಲಿ ಹಾಕಿ ಆನೆಯಿಂದ ತುಳಿದರೂ ನುರಿಯಲಾರದಷ್ಟು ಬಿದ್ದಿದೆ. ಬೀರಪ್ಪನ ಆಶೀರ್ವಾದ ಇದ್ದರ ರಾಶಿಯನ್ನು ಸುರಕ್ಷಿತವಾಗಿ ಮನೆಗೆ ತರಬಹುದು ಎನ್ನುವ ಸೂಚನೆ ಇದೆ. ಇಂತಹ ಹೇಳಿಕೆಗಳಲ್ಲಿ ಪ್ರಾಣಿ ವಾಚಕಗಳು ಫಲವತ್ತತೆಯ ಸಂಕೇತವಾಗಿ ಬಳಕೆಯಾಗಿವೆ.

ಹೈಯಾಳದಪ್ಪ ಏನ ಹೇಳ್ಯಾನ ಅಂದೀರಿ, ಒಕ್ಕಲಿಗ್ಯಾನ ಮಗನೀಗಿ
ಮುತ್ತ ಹವಳ ಕೊಟ್ಟು ತಲಿಹಚ್ಚಿ ಲಾಗಾ ಹೊಡಿಲಿಕ್ಕ
ಹಚ್ಚಿನಲ್ರೇ ಮಕ್ಕಳ್ರ್ಯಾ[೨೮]

ಪ್ರಸ್ತುತ ಹೇಳಿಕೆಯಲ್ಲಿ ಹೈಯಾಳದಪ್ಪ ಎನ್ನುವ ದೇವರು ಸರ್ವ ಮುಂಗಾರಿ ಮತ್ತು ಹಿಂಗಾರಿ ಕೊಟ್ಟ ಒಕ್ಕಲಿಗ್ಯಾನ ಮಗ ಗರ್ವದಿಂದ ತಿರುಗುವ ಮುನ್ಸೂಚನೆಯನ್ನು ನೀಡಿದ್ದಾರೆ. ಈ ಹೇಳಿಕೆಯಲ್ಲಿ ಮನುಷ್ಯ ಸ್ವಭಾವದ ಸಂಘರ್ಷವನ್ನು, ಬೆಳೆ ಬಂದಾಗ ರೈತ ವಿನಯದಿಂದ ವರ್ತಿಸಬೇಕೆಂಬ ಸೂಚನೆಯು ಇದೆ. ಫಸಲು ಪಡೆಯುವುದು ಎಷ್ಟು ಮುಖ್ಯವೋ ಬಂದ ಫಸಲನ್ನು ರಕ್ಷಿಸಿಕೊಳ್ಳುವುದು ಅಷ್ಟೇ ಮುಖ್ಯ. ಹೇಳಿಕೆಗಳು ಫಸಲನ್ನು ಹೇಗೆ ಸಂರಕ್ಷಿಸಿಕೊಳ್ಳಬೇಕು ಎನ್ನುವದನ್ನು ರೈತರಿಗೆ ಬುದ್ಧಿವಾದ ಹೇಳುತ್ತವೆ.

ಬಿಳಿ ಕಾಳ, ಕೆಂಪ ಕಾಳ ಮೂರುಗಣಕಿಯ ಮ್ಯಾಲ
ಕಾಳಮಾಡಿ ತೋರಸ್ತಿನಿ
ತನ್ನ ಜ್ಯಾಕಿಯೊಳಗ ಪಕ್ಕಡಿಯೊಳಗ
ಪಕ್ಕಡಿಯೊಳಗ ಹಿಡಕೊಂಡವರಿಗಿ
ಸಕ್ಕರಿ ತುಪ್ಪದೊಳಗ ಕೈ ತೊಳಿತಿನಿ.[೨೯]

ಕಾಳು ಕಡಿ ರೈತನ ಬದುಕಿಗೆ ಆಧಾರವಾದರೆ ಮೇವು, ಕಣಕಿ–ಕಾಳು ದನಕರುಗಳಿಗೆ ಆಧಾರ. ಹೀಗಾಗಿ ಕಾಳು ಕಡಿ ಮಾನವ ಸಂರಕ್ಷಿಸಿಕೊಳ್ಳುವಂತೆ ಮೇವು ಕಣಕಿಯನ್ನು ಸಂರಕ್ಷಿಸಿಕೊಳ್ಳಬೇಕೆಂದು ಹೇಳಿಕೆಗಳು ಸೂಚಿಸುತ್ತವೆ.

ತಿನ್ನೂ ಕಾಳ ಹೊರಗ್ ಹಚ್ಚು
ಬಸವನ ಪತ್ರಿ ಒಳಗ ಹಚ್ಚಕೊಂಡು
ಬದಕ ಮಾಡಬೇಕಲೇ ಗಾಣಮಿಣಿ.[೩೦]

'ಬಸವನ ಪತ್ರಿ' ಎಂದರೆ ಜಾನುವಾರುಗಳು ತಿನ್ನುವ ಆಹಾರ ಮೇವು ಮತ್ತು ಕಣಕಿಗೆ ಬಸವನ ಪತ್ರಿ ಎಂದು ದೇವರಸಿಗಳು ಕರೆಯುತ್ತಾರೆ. ಜಾನುವಾರುಗಳಿಲ್ಲದ ಕೃಷಿ ಚಟುವಟಿಕೆಗಳನ್ನು ಸೂಕ್ತವಾಗಿ ಮತ್ತು ಪರಿಣಾಮಕಾರಿಯಾಗಿ ಕೈಗೊಳ್ಳಲು ಸಾಧ್ಯವಾಗುವದಿಲ್ಲ. ದನಕರುಗಳು ತಿನ್ನುವ ಮೇವಿಗೆ ಬಸವನ ಪತ್ರಿ ಎಂದು ಪೂಜ್ಯ ಭಾವನೆಯಿಂದ ಗೌರವಿಸುತ್ತಾರೆ.

**ಜನ–ಜಾನುವಾರುಗಳ ಕುರಿತ ಹೇಳಿಕೆಗಳು :**

ಹೇಳಿಕೆಗಳು ಸಾಮಾನ್ಯವಾಗಿ ಜನರನ್ನು–ಭಕ್ತರನ್ನು ಒಕ್ಕಲಿಗನನ್ನು ಅದು ಅಲ್ಲದೆ ಸಾಂದರ್ಭಿಕವಾಗಿ ಬಾಲ ಶಿಶು, ಬಡವ ಮುಂತಾದ ಹೆಸರುಗಳಿಂದಲೂ ಕರೆಯುವುದುಂಟು. ತನ್ನ ಭಕ್ತರಲ್ಲಿ ನಂಬಿಕೆಯುಳ್ಳ ಭಕ್ತರು ಇದ್ದಂತೆ ನಂಬದ ಭಕ್ತರೂ ಇರುತ್ತಾರೆ ಎನ್ನುವ ಸತ್ಯ ಹೇಳಿಕೆ ಮಾಡುವ ದೈವಕ್ಕೆ ಗೊತ್ತಿದೆ. ನಂಬಿದ ಭಕ್ತರಿಗೆ ಅಭಯವನ್ನು ನಂಬದ ಭಕ್ತರಿಗೆ ಎಚ್ಚರಿಕೆಯನ್ನು ನೀಡುವ ಹೇಳಿಕೆಗಳು ಸಾಮಾನ್ಯವಾಗಿ ಕಂಡುಬರುತ್ತವೆ. ನಂಬದ ಭಕ್ತರಿಗೆ ತೀವ್ರವಾದ ಎಚ್ಚರಿಕೆಯ ಒಂದು ಹೇಳಿಕೆ ಇಲ್ಲಿದೆ.

ನಂಬಿಕೆ ಇಟ್ಟು ನಡದರ
ಅರಸನ ಅರಮನ್ಯಾಗ ಇಡತೀನಿ
ಅಪನಂಬಿಕೆ ಮಾಡಿದರ
ಪಾತಾಳಕ ತುಳಿತಿನಲೇ ಗಾಣಮಿಣಿ.[೩೧]

ಪಾತಾಳ ಎಂದರೆ ಸರ್ವನಾಶ. ಅದಕ್ಕೆ ದೈವದ ಮೇಲೆ ನಂಬಿಕೆ ಮತ್ತು ಭಕ್ತಿಯ ಬಗ್ಗೆ ಶ್ರದ್ಧೆ ಇರಬೇಕೆಂದು ಹೇಳುತ್ತಾನೆ. ನಂಬಿಕೆ ಇಟ್ಟು ದೇವರ ಸೇವೆ ಮತ್ತು ಧ್ಯಾನ ಮಾಡಿದರೆ ಸಕಲವನ್ನು ಕರುಣಿಸುತ್ತೇನೆ ಎನ್ನುವ ಅಭಯ ನಂಬಿ ನಡೆಯದಿದ್ದರೆ ನಿನ್ನ ಅವನತಿ ನನ್ನ ಕೈಯಲ್ಲಿ ಎನ್ನುವ ಎಚ್ಚರಿಕೆ ಇದರಲ್ಲಿದೆ. ದೈವದ ಮೇಲೆ ಭಕ್ತರಿಗೆ ಅಪಾರ ನಂಬಿಕೆ ಇರಬೇಕೆಂಬುದು ಈ ಹೇಳಿಕೆ ಹಿಂದಿನ ಆಶಯವಾಗಿದೆ

ಅರಿಕೇರಿ ಅಮೋಘಸಿದ್ಧನ ಗುರುಮನಿ
ಮ್ಯಾಗ ಮಣಕಾಪೂರ ಸಿಂಹಾಸನ ಗದ್ದಿಗಿ
ಯಾವ ಕೇಳಾಂವ ತುದಿಗೈಹಿಡಿದ್
ಕೇಳಬ್ಯಾಡ ಮುಂಗೈ ಹಿಡಿದ್ ಕೇಳ್
ನನ್ನಂತ ನಡದ್ರ ಬಗ್ಗತೀನಿ, ನನ್ನಂತ
ನಡಿದಿದ್ರ ಬಗ್ಗಿಸಿ ಹುಡಿ ಉರಳಿದಂಗ ಉಳ್ಳಸ್ತಿನಿ.[೨೧]

ಅಂದರೆ ಇದರಲ್ಲಿ ನಂಬಿಕೆ ಮತ್ತು ಭಕ್ತಿಯನ್ನು ಬಯಸುವ ದೇವರಗಳ/ಒಡೆಯರ ಹೇಳಿಕೆ ಅಂಜಿಕೆಯೂ ಹೌದು. ಅಲ್ಲಿ ಬಳಕೆಯಾದ ಸ್ಥಳನಾಮಗಳು, ವ್ಯಕ್ತಿನಾಮಗಳು ಅಧ್ಯಯನಕ್ಕೆ ಯೋಗ್ಯವಾಗಿವೆ. ಏಕೆಂದರೆ ಹೆಸರುಗಳು ಸಹಿತ ಸಂಸ್ಕೃತಿ ಸಂಕೇತವಾಗಿವೆ ಎಂಬುದು ಗಮನಾರ್ಹ. "ಮಳೆಯಾಧಾರಿತ ಕೃಷಿ ಚಟುವಟಿಕೆಯಲ್ಲಿ ತೊಡಗಿದ ರೈತನ ಬದುಕು ಅನಿಶ್ಚಿತವಾದುದು ಎನ್ನುವಲ್ಲಿ ಎರಡು ಮಾತಿಲ್ಲ. ಬಂದುದನ್ನೆಲ್ಲಾ ಎದುರಿಸುವ, ಸಹಿಸಿಕೊಳ್ಳುವ, ಆತ್ಮಸ್ಥೈರ್ಯ ತುಂಬುವ ಕೆಲಸವನ್ನು ಹೇಳಿಕೆಗಳು ಅಭಿವ್ಯಕ್ತಿಸುತ್ತವೆ. ಪರಿಸ್ಥಿತಿ ಎಂಥ ಕೆಟ್ಟದಿರಲಿ ರೈತರು ಜೀವ ವಿರೋಧಿ ನಿಲುವು ತೆಗೆದುಕೊಳ್ಳದ ಹಾಗೆ ಅವರಲ್ಲಿ ವಿಶ್ವಾಸವನ್ನು ಹುಟ್ಟಿಸುತ್ತವೆ".

ಎಲೇ ಎತ್ತ ನೋಡಿದಿರತ್ತ ಕರಿರಂಡೀನ ಕಾಣತಾಳ
ದಿಲ್ಲಿ ಸಿಂಹಾಸನಕ್ಕ ಕರಿ ಜೇಂಡಾ ಹಚ್ಚೇನಿ
ಜಾಡಿ ಪದರಾಗ ಐದ ಹನಿ ಕಟ್ಟಿನಿ
ಸಿಕ್ಕವಂಗ ಸಿಕ್ತು ಸಿಗ್ಲಾರದವಂಗ ಇಲ್ಲ
ನೆಲಗಂಗಿ ತಿರುವಿ
ಒಕ್ಕಲಿಗನ ಮಗನ್ನ ಆನಂದದಿಂದ
ಪಾಜಾಕ ಹಚ್ಚಿನಲೇ ಗಾಣಮಿಣಿ.[೨೨]

ಇಲ್ಲಿ ಎರಡು ಪ್ರತಿಮೆಗಳು ಗಮನಸೆಳೆಯುತ್ತವೆ. ಒಂದು ಕರಿರಂಡಿ ಇನ್ನೊಂದು ಕರಿಜೇಂಡಾ. ಇವುಗಳಲ್ಲಿ ಬರುವ ಕರಿ ಅಂದರೆ ಕಪ್ಪು ಬಣ್ಣ ಕಷ್ಟದ ಸಂಕೇತವಾದರೆ ಅದು ಮುಂದೆ

ಒದಗಬಹುದಾದ ತೊಂದರೆಗಳನ್ನು ಸೂಚಿಸುತ್ತದೆ. ಇಂತಹ ಹೇಳಿಕೆಗಳು ಬದುಕಿನ ಅಂತರಂಗದ ಚಲನವಲನಗಳನ್ನು ಹಾಗೂ ಅಂತರಂಗದ ಹೊಯ್ದಾಟವನ್ನು ಸೂಚಿಸುತ್ತವೆ. ಜನರ ಕಲ್ಯಾಣ ಎಷ್ಟು ಮುಖ್ಯವೋ ಮೂಕ ಪ್ರಾಣಿಗಳಾದ ಜಾನುವಾರುಗಳ ಕಲ್ಯಾಣ ಅಷ್ಟೆ ಮುಖ್ಯವೆನ್ನುತ್ತವೆ ಹೇಳಿಕೆಗಳು. ಎತ್ತುಗಳು ಕೃಷಿ ಚಟುವಟಿಕೆಗಳ ಮುಖ್ಯ ಆಧಾರ. ಎತ್ತುಗಳನ್ನು ಭಕ್ತಿಯಿಂದ ಬಸವನಿಗೆ ಹೋಲಿಸಿದ್ದು ನಮ್ಮ ಪರಂಪರೆ. ಬಹುತೇಕ ಸಂದರ್ಭಗಳಲ್ಲಿ ಹೇಳಿಕೆಗಳು ದನಕರುಗಳ ಲಾಲನೆ–ಪಾಲನೆಯ ಬಗ್ಗೆ ಎಚ್ಚರಿಕೆಯನ್ನು ನೀಡುತ್ತಲೇ ಬಂದಿವೆ.

ಎಲೇ ಎಷ್ಟು ಹೇಳಿದರೂ ಕರೀತಲಿ ಮಾನವಗ
ಸಮಜ ಆಗಲಿಲ್ಲ
ಬಾಲಗ ಬಸವಗ ಬಗಲಾಗ ಹಿಡಕೊಂಡ
ದಂಡಿಗೆ ಹಚ್ಚಬೇಕು ಅನುದಾರಗ
ಬಸವಗ ಖುಷಿ ಆಯೀತಲೇ ಗಾಣಮಿಣಿ.[೩೪]

ಭೀಕರ ಬರಗಾಲದಿಂದ ತತ್ತರಿಸಿರುವ ಸಂದರ್ಭದಲ್ಲಿ ನೀರು ಮತ್ತು ಮೇವಿನ ಕೊರತೆಯುಂಟಾದಾಗ ಏನಾದರೂ ಅವುಗಳಿಗೆ ಸಹಾಯ ಮಾಡಬೇಕು ಎನ್ನುವಾಗ ಮಳೆಯಾಗಿ ಮೇವು ಮತ್ತು ನೀರು ದೊರಕಿದ್ದೂ ಈ ಹೇಳಿಕೆಯಿಂದ ತಿಳಿಯುತ್ತದೆ.

ಅಡವ್ಯಾನ ಕುರಿಗಳಿಗೆ ಕುಡ್ಯಾಕ್ ನೀರಿಲ್ಲ
ಉತ್ತರ ದಿಕ್ಕಿನ್ಯಾಗ ಉರಿ ಬರ್ತದ
ಜ್ವಾಕಿಲಿ ಇರಬೇಕ್[೩೫]

ಮುಂದೆ ಬರಬಹುದಾದ ಭೀಕರ ಬರಗಾಲದ ಮುನ್ಸೂಚನೆಯನ್ನು ಕುರಿಗಳಿಗೆ ಕುಡಿಯಲು ನೀರು ಕೊರತೆಯಾಗುವುದೆಂದು ಈ ಹೇಳಿಕೆಯಿಂದ ಕಂಡು ಬರುತ್ತದೆ. ನೀರು ಮನುಷ್ಯನ ಬದುಕಿಗೆ ಮುಖ್ಯ ಆಧಾರ ಜನಪದರ ಗಾದೆಯ ಮಾತೊಂದು ನೆನಪಿಗೆ ಬರುತ್ತದೆ 'ತಾಯಿ ಆಸರೆಗಿಂತ ನೀರಿನ ಆಸರೆ ಬಹು ಮುಖ್ಯ' ಎಂಬ ಗಾದೆಯ ಮಾತು ನೀರಿನ ಮಹತ್ವವನ್ನು ಎತ್ತಿ ಹೇಳುತ್ತದೆ. ಮನುಷ್ಯರಿರಲಿ, ದನಕರುಗಳಿರಲಿ ಎಲ್ಲರಿಗೂ ನೀರು ಅವಶ್ಯ ಬರಗಾಲ ಬಿದ್ದಾಗ ಮಳೆ ಸುರಿದು ಕೆರೆ ಕಟ್ಟೆ ತುಂಬಲ್ಲೆಂದು ರೈತರು ಹಾಲುಮತ ದೈವಗಳನ್ನು ಪ್ರಾರ್ಥಿಸುತ್ತಾರೆ.

ದೇವಸ್ಥಾನಗಳಲ್ಲಿಯೂ ಪ್ರಾಣಿಗಳನ್ನು ಸಾಕುವ ಪರಂಪರೆ ನಮ್ಮಲ್ಲಿದೆ. ದೇವಸ್ಥಾನದಲ್ಲಿ ಸಾಕಿದ ಪ್ರಾಣಿಗಳು ಏನಾದರೂ ಹೊಲದಲ್ಲಿ ಬೆಳೆದ ಬೆಳೆಗಳನ್ನು ಮೇಯಲು ಹೋದರೆ ಅವುಗಳನ್ನು ಅಚೆ ಹೊಡೆಯದಂತೆ ದೇವರಿಸಿಗಳು ಕೃಷಿಕರಿಗೆ ಹೇಳುವುದು ಇದೆ. ದೇವಸ್ಥಾನದ ಪ್ರಾಣಿಗಳು ಹೊಲದಲ್ಲಿ ಬಂದು ಮೇಯ್ದರೆ ನಿಮಗೆ ಒಳ್ಳೆಯದಾಗುತ್ತದೆ ಎಂಬ ಪ್ರತೀತಿಯೂ ಇದೆ. ಹಾಗೆ ನಡೆಯಲು ಹೇಳುವವರು ತಿಳಿಸಿರುವ ಈ ಕೆಳಗಿನ ಹೇಳಿಕೆ.

ಬೀರಪ್ಪನ ಕುದ್ರಿ

ನಿಮ್ಮ ತ್ವಾಟಕ ಬಂದ್ರ

ಹೊಡಿಬ್ಯಾಡ್ರಿ ಹೊಡದ ಮರಗಬ್ಯಾಡ್ರಿ

ಭಂಡಾರ ಹಚ್ಚಿ ಕಳಿಸಿರಿ ಕೇಡ ಇಲ್ಲ.[೩೬]

ಒತ್ತಾಯದಿಂದ ಪ್ರಾಣಿಗಳನ್ನು ಕಳುಹಿಸದೆ. ಭಂಡಾರ ಹಚ್ಚಿ ಕಳಿಸುವುದು ಪದ್ಧತಿಯೂ ಇದೆ. ಹಾಗಾದರೆ ಯಾವ ರೀತಿ ಕೇಡು ಅವರ ಕುಟುಂಬಕ್ಕೆ ಆಗುವದಿಲ್ಲ ಎನ್ನುವ ನಂಬಿಕೆ. ದೇವರ ಗುಡಿಯಲ್ಲಿರುವ ಕುದುರೆ, ಆನೆ, ಗೂಳಿಗಳು ಇವು ಆ ದೈವತ್ವದ ಸಂಕೇತವಾಗಿದೆ. ಅವು ರೈತರ ಭೂಮಿಯನ್ನು ಹೊಕ್ಕಾಗ ಸಾಕ್ಷಾತ ದೇವರು ಹೊಕ್ಕಂತೆ ಎಂಬ ನಂಬಿಕೆ ಜನಪದರಲ್ಲಿದೆ.

ನಾಲ್ಕು ದಿಕ್ಕಿಗೆ ಸೋಸಿ ನೋಡುದರಾಗ್

ಮೂರು ಮೂಲಿಗೆ ಬಸವ ಋಷಿ ಆದಾನ್

ಒಂದು ಮೂಲ್ಯಾಗ ಕಸರ ಕುಂತು

ಇದಿಮಾಯಿ ರಂಡಿ ಇದಿರಿಗಿ ಬಂದಾಳು

ಭೂತ್ಯಾನ ಹಚ್ಚಿ ಬೈಲ ಮಾಡಿ ಬಸವನ ಚಿಕ್ಕ ದಸರಿಗಿ ಹರಿದ್ರಾಗ

ಒಳಗಡೆ ಹರಿದಿನಿ.[೩೭]

ಒಂದೊಂದು ಸಂದರ್ಭದಲ್ಲಿ 'ಬಸವನ ಪತ್ರಿ' ಅಂದರೆ ಮೇವಿಗೂ ಪರದಾಡುವ ಪರಿಸ್ಥಿತಿ ಬರುತ್ತದೆ. ಅಂತಹ ಸಂದರ್ಭದಲ್ಲಿ ಹೇಳುವವರು ತಮ್ಮ ಹೇಳಿಕೆಗಳ ಮೂಲಕ ಪರಿಹಾರ ಸೂಚಿಸುವ ಪದ್ಧತಿಯೂ ಇದೆ.

ಹೀಗೆ, ಜನ ಮತ್ತು ಜಾನುವಾರುಗಳನ್ನು ಕುರಿತು ಸಂಗ್ರಹಿಸಿದ ಅನೇಕ ಹೇಳಿಕೆಗಳಲ್ಲಿ ಕಾಣಬಹುದಾಗಿದೆ. ಜನರ ನಿತ್ಯದ ಏಳಿಗೆ, ಬದುಕು, ಸೋಲು, ನಿರಾಶೆ ಇವುಗಳ ಬಗ್ಗೆ ಸಮಾಧಾನದ ನುಡಿಗಳು ಗೊರವಯ್ಯರ ಮಾತುಗಳ ಮೂಲಕ ಪ್ರಸ್ಥಾಪಿತವಾಗುತ್ತವೆ. ಬದುಕಿಗೆ ಅವಶ್ಯವಾಗಿ ಬೇಕಾಗಿರುವ ಮಳೆ-ಬೆಳೆ ಒಡೆಯರರ ಮೂಲಕ ಬರುತ್ತದೆಂಬ ನಂಬಿಕೆ ಜನಪದರಲ್ಲಿದೆ.

**ಕರ್ಮಧರ್ಮದ ಕುರಿತ ಹೇಳಿಕೆಗಳು :**

ಮನುಷ್ಯ ಸಮಾಜ ಜೀವಿ. ಮನುಷ್ಯನ ದಿನನಿತ್ಯದ ಬದುಕು ಕರ್ಮಧರ್ಮದ ನಿಯೋಗದಿಂದ ನಡೆಯುತ್ತದೆ ಎನ್ನುವುದು ನಂಬಿಕೆ. ಸಮಾಜ ಒಪ್ಪಿತ ಮಾರ್ಗವನ್ನು ಮನುಷ್ಯ ಅನುಸರಿಸುವುದು ಅವನ ಕರ್ತವ್ಯ. ನಮ್ಮ ಜೀವನದಲ್ಲಿ ತಿಳಿದು ತಿಳಿಯದೆಯೋ ತಪ್ಪುಗಳನ್ನು ಮಾಡುವುದು ಸರ್ವೇ ಸಾಮಾನ್ಯ. ಅಂತಹ ತಪ್ಪುಗಳು ಹೇಳುವವರ ದೃಷ್ಟಿಯಲ್ಲಿ ಕರ್ಮ ಅಂತೆನಿಸಿಕೊಂಡು

ಆದಷ್ಟು ಒಳ್ಳೆಯದನ್ನು ಮಾಡಲು ಜನರಿಗೆ ಸೂಚಿಸುವಂತಹ ಅನೇಕ ಹೇಳಿಕೆಗಳನ್ನು ನೋಡಬಹುದು. ಕರ್ಮ ಮಾಡಿದರೆ ಕೇಡು ಕಟ್ಟಿಟ್ಟ ಬುತ್ತಿ ಎನ್ನುವ ಎಚ್ಚರಿಕೆ ರೂಪದ ಹೇಳಿಕೆಗಳು ಇವೆ.

ಭೂಮಿ ಮ್ಯಾಲೆ ಕರ್ಮ ಹೆಚ್ಚುತ್ತಾಯಿದೆ
ಧರ್ಮ ಮುಳುಗ್ತಾಯಿದೆ
ಧರ್ಮಿಗಳ ರಾಜ್ಯ ಲೋಪಾಗಿ ಈ ಕಲಿಯುಗ
ಕರ್ಮಿಗಳದೇ ಆಟ ಆಗ್ತಾಯಿದೆ.[೩೮]

ಪರಂಪರೆಯಿಂದ ನಂಬಿಕೊಂಡು ಬಂದಿರುವ ಮೌಲ್ಯ ಹಾಗೂ ನಂಬಿಕೆಗಳಿಗೆ ವಿರುದ್ಧವಾಗಿ ನಡೆಯುವದನ್ನು ಕರ್ಮ ಎನ್ನುತ್ತಾರೆ. ಧರ್ಮಿಗಳ ರಾಜ್ಯ ಲೋಪವಾಗಿ ಅಂದರೆ ಒಳ್ಳೆಯವರ ಕಾಲ ಮುಗಿದು ಕಲಿಯುಗದ ದುಷ್ಟರ ಆಟ ಹೆಚ್ಚಾಗಿದೆ ಅಂದರೆ ಅದು ಅವನತಿ ಪ್ರಾರಂಭವಾಗಿದೆ ಎಂದರ್ಥ. ಅದಕ್ಕೆ ಭೂಮಿಯ ಮೇಲೆ ಮನುಷ್ಯ ಧರ್ಮದಿಂದ ನಡೆಯಬೇಕು ಎನ್ನುವುದು ಈ ಹೇಳಿಕೆಯಲ್ಲಿದೆ.

ತಂದೆ–ತಾಯಿನ ಸೇರಲಿಲ್ಲ
ಮನಕ ನಾಚಿಕೆ ಹುಟ್ಟಲಿಲ್ಲ
ಕನಕ–ಹೆಣ್ಣು–ಮಣ್ಣಿಗಾಗಿ
ನಾಯಿಯಂತೆ ಬೆನ್ನ ಹತ್ತಬಾರದು.[೩೯]

'ಮಾತೃದೇವೋಭವ' 'ಪಿತೃದೇವೋಭವ' ಎನ್ನುವ ಸಂಪ್ರದಾಯವನ್ನು ಅಳವಡಿಸಿಕೊಂಡು ಬಂದ ಭಾರತದೇಶದಲ್ಲಿ ಇಂದು ಮನದ ನಾಚಿಕೆಯನ್ನು ತಂದೆ ತಾಯಿಗಳನ್ನು ನೋಡದೆ ಹಣ, ಆಸ್ತಿ, ಬಂಗಾರ ಇವುಗಳ ಬೆನ್ನು ಬಿದ್ದು ಮೌಲ್ಯ ಹಾಳು ಮಾಡಿಕೊಂಡು ನಾಯಿಯಂತೆ ತಿರುಗಬೇಡ ಎಂದು ಮನುಷ್ಯನಿಗೆ ಎಚ್ಚರಿಕೆ ಇದೆ. ಈ ಹೇಳಿಕೆಯಲ್ಲಿ ಕ್ಷಣಿಕ ಆಸೆ, ಆಮಿಸೆಗಳಿಗೆ ಒಳಗಾಗಬಾರದು ಎಂಬ ಎಚ್ಚರಿಕೆಯೂ ಈ ಹೇಳಿಕೆಯಲ್ಲಿದೆ.

ಮುರುಗಾನೂರಿನ ಶಿವಶರಣ ಒಡೆಯರು ಒಂದು ಸಂದರ್ಭದಲ್ಲಿ
ಎಲೇ ಗಾಣಮಿಣಿ! ಬಡವಗ ಬಗಲಾಗ ಹಿಡಿದಿನಿ
ಸಾವಕಾರನ ಅಂಗೈಯಾಗ ಹಿಡಿದಿನಿ ಬಲಿಜ್ವಾಕಿ ಬಲಿ
ಹುಷಾರಿ! ನನ್ನಂತೆ ನಡದರ ಬೆನ್ನಹಿಂದ ಇರತೀನಿ.[೪೦]

ಇಲ್ಲಿ 'ನನ್ನಂತೆ ನಡದರ' ಎನ್ನುವ ಮಾತನ್ನು ಹೇಗೆಲ್ಲಾ ಅರ್ಥೈಸಬಹುದು. ಅದು ಕೇಳುಗರಿಗೆ ಬಿಟ್ಟ ವಿಚಾರ ಎಲ್ಲಾ ಹೇಳಿಕೆಗಳು ನಿರ್ಧಿಷ್ಟವಾಗಿ ಇಲ್ಲದೆ ಒಡಪಿನ ಶೈಲಿಯಲ್ಲಿ ಹೇಳುವುದು ಅವುಗಳ ಅರ್ಥೈಸುವಿಕೆ ವಿಭಿನ್ನವಾಗಿರುತ್ತದೆ. ನನ್ನಂತೆ ಅಂದರೆ ಧರ್ಮದಿಂದ ನಡೆದರೆ ಎಂದೂ ಸಹ ಅರ್ಥೈಸಬಹುದು.

**ಪ್ರಕೃತಿಗೆ ಸಂಬಂಧಿಸಿದ ಹೇಳಿಕೆಗಳು :**

ಮಾನವ ಪ್ರಕೃತಿಯ ಕೂಸು. ಮಾನವನ ಅಗತ್ಯಗಳನ್ನು ಪೂರೈಸುವ ಶಕ್ತಿ ಈ ಪ್ರಕೃತಿಗೆ ಇದೆ. ಆದರೆ ದುರಾಸೆಗಳನ್ನಲ್ಲ. ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ಮಳೆಯು ಸರ್ವರ ಕಲ್ಯಾಣವನ್ನು ಬಯಸುವ ಒಂದು ದೈವ. ಅಂತೆಯೆ ಮಳೆಗೆ ವರುಣದೇವ ಎಂದು ಹೆಸರು ಇದೆ. ಮಳೆ ಸಕಾಲಕ್ಕೆ ಆಗದೆ ಕೆಲವು ಸಲ ಭೀಕರ ಬರಗಾಲ ಆವರಿಸಿರುವುದುಂಟು. ಅತಿವೃಷ್ಟಿ ಮತ್ತು ಅನಾವೃಷ್ಟಿ ಇವು ಪ್ರಕೃತಿಯ ಕ್ರಿಯೆಗಳು. ಪ್ರಕೃತಿಯ ಮೇಲೆಯೆ ಅವಲಂಬಿಸಿದ ರೈತರು ಸ್ವಾಭಾವಿಕವಾಗಿ ಅತಿಮಾನವ ಶಕ್ತಿಯನ್ನು ನಂಬಿ ಪೂಜಿಸಿ ಅವುಗಳ ಮೊರೆಹೋಗುವುದು ಅನಿವಾರ್ಯ. ಮಾನವನು ಪ್ರಕೃತಿಯ ಆರಾಧಕನಾಗಿದ್ದನೆಂಬುದರ ಹಿನ್ನಲೆಯಲ್ಲಿ ಯೋಚಿಸಿದಾಗಲಂತೂ ಈ ಮಾತನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದ್ದರಿಂದ ಅತಿಮಾನವ ಶಕ್ತಿಯಾದ ಭಗವಂತನನ್ನು ನಂಬಿ ಭವಿಷ್ಯವನ್ನು ನಂಬುವ ಪದ್ಧತಿ ನಮ್ಮ ಪರಂಪರೆಯಲ್ಲಿದೆ. ಹಾಲುಮತ ಸಾಂಸ್ಕೃತಿಕ ನಾಯಕರಾದ ಮೈಲಾರ, ಬೀರಪ್ಪ, ಮಾಳಿಂಗರಾಯ, ರೇವಣಸಿದ್ಧ, ಅಮೋಘಸಿದ್ಧ, ಹುಲ್ಲಪ್ಪ, ಚಂದಪ್ಪ ಮುಂತಾದ ದೇವತೆಗಳ ಹೇಳಿಕೆಗಳಲ್ಲಿ ಪ್ರಕೃತಿಯ ಘಟನೆಗಳಾದ ಬರ, ಸಮೃದ್ಧಿ ಮತ್ತು ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದಂತೆ ಅನೇಕ ಹೇಳಿಕೆಗಳು ಲಭ್ಯವಾಗುತ್ತವೆ.

**ಬರ ಕುರಿತ ಹೇಳಿಕೆಗಳು :**

ತಂಗಿ ಚಂದಾಗಿ ಕೇಳವ್ವಾ
ಹಾಲ, ಹೈನ, ಮೊಸರ ಗಡಿಗ್ಯಾಗ ಇಲ್ಲ
ಇದು ದೂರದ ಮಾತ ಅಲ್ಲ
ಮನಿ ಮನಿಗೆ ಕಡಬಿ ಇಟ್ಟಪ್ಪ ಸಾರಿ ಹೇಳ್ಯಾನ.[೪೧]

ಹಾಲ, ಹೈನ, ಮೊಸರು ಇವು ಸಮೃದ್ಧಿಯ ಸಂಕೇತಗಳು. ಕೃಷಿ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ರೈತರ ಇನ್ನೊಂದು ಉಪಕಸಬು ಪಶುಸಾಕಾಣಿಕೆ. ಎಮ್ಮೆ, ಆಕಳು, ಎತ್ತು, ಆಡು, ಕುರಿ, ಇತ್ಯಾದಿ ಪ್ರಾಣಿಗಳನ್ನು ಸಾಕಿ ಅವುಗಳ ಮೂಲಕ ಕೃಷಿಗೆ ಪೂರಕವಾದ ಚಟುವಟಿಕೆಗಳನ್ನು ಪೂರೈಸುವುದರ ಮೂಲಕ ಹೈನುಗಾರಿಕೆ ಉಪ ಉತ್ಪಾದನೆ ಆಗುತ್ತದೆ. ದನಕರುಗಳು ಸುಖವಾಗಿ ಇರಬೇಕೆಂದರೆ ಅಗತ್ಯವಿದ್ದಷ್ಟು ಮಳೆ ಬರಲೇಬೇಕು. ಮಳೆ ಇಲ್ಲ ಅಂದರೆ ಹೈನುಗಾರಿಕೆ ಇಲ್ಲದಂತಾಗುತ್ತದೆ. ಇವುಗಳು ಗಡಿಗ್ಯಾಗ ಇಲ್ಲ ಅಂದರೆ ಅದು ಬರದ ಸಂಕೇತ.

ಮಕ್ಕಳಿರಾ ಇದು ಚಲೋ ಕಾಲ ಅಲ್ಲರಲೇ
ಹೊಟ್ಟಿ ಹೊಸದ ದಾಟಬೇಕು

ಗ್ವಾಡಿ ಹಿಡಿದು ನಡಿಬೇಕು
ಸೋತ ಮಾತಾಡಿದರ ಬಾಳೆ ಅಕ್ಕತಿ
ಸಣ್ಣವನಾಗಿ ಸರಕೋಲೆ.[೪೨]

ಮುಚ್ಚಿದ ಕದಗಳು ತೆರೆಯದೇ ಹೋದಾವು
ಹೊಂಗಲ ಸೀಮಿ ಬಯಲಾಗಿ ಹೋಯಿತು
ಗಾಣದಾಗಿನ ಎಣ್ಣಿ ಗಾಣ ನುಂಗಿತು
ತಿಳಿಯದೆ ಹೋದಿತು.[೪೩]

ಮಳಿಗಳು ಹೋದಾವು
ಬೆಳೆಗಳು ಕೆಟ್ಟಾವು
ಹಲವು ಬುದ್ಧಿಗಳು ಶೇಣಸ್ಯಾವು
ಹಲವು ತಪ್ಪಲ ತಿನಿಸ್ಯಾರ
ಹಿಂಗ್ ಇದ್ದರ ನನ್ನ ಗುಡಿ ಹೆಂಗ್
ಕಟ್ಟತಿರೋ.[೪೪]

ಮಕ್ಕಳಿರಾ ಇದು ಸುಕಾಕಾಲ ಅಲ್ಲರಲೇ, ಮುಚ್ಚಿದ ಕದಗಳು ತೆರೆಯದೇ ಹೋದಾವು, ಮಳಿಗಳು ಹೋದಾವು, ಬೆಳೆಗಳು ಕೆಟ್ಟಾವು ಇವುಗಳ ಅರ್ಥವೇ ಬರ. ಮುಂದೆ ಒದಗಬಹುದಾದ ಬರದ ಎಚ್ಚರಿಕೆಯೂ ಇದರಲ್ಲಿದೆ. ಇಂತಹ ಹೇಳಿಕೆಗಳಲ್ಲಿ ಪ್ರಾದೇಶಿಕ ಭಾಷೆ, ಸಂಸ್ಕೃತಿ, ಬದುಕಿನ ಆಗು ಹೋಗುಗಳು, ಪರಿಸರ ಈ ಎಲ್ಲ ವಿವರಗಳು ಅರ್ಥಪೂರ್ಣವಾಗಿ ಮೂಡಿಬಂದಿವೆ.

ಭರಾ ಬಿದ್ದೈತಿ ಜನರಿಗೆ
ಇರಾಕ ಮನಿಯಿಲ್ಲಾ
ನಿಲ್ಲಾಕ ನೆರಳಿಲ್ಲಾ
ಅಳಲಿಕ್ಕೆ ದನಿಯಿಲ್ಲ
ಹೆಣಾ ಎಳಿಲಿಕ್ಕೆ ದಿಕ್ ಇಲ್ದಂಗ್ ಆದೀತು
ನೋಡಿ ನಡಿರಲೇ
ದಿನಮಾನ ಸುಮಾರ ಬಂದಾವು.[೪೫]

ಈ ಹೇಳಿಕೆಯಲ್ಲಿ ಬರದ ಭೀಕರತೆಯನ್ನು ಎಷ್ಟು ಅರ್ಥಪೂರ್ಣವಾಗಿ ಚಿತ್ರಿಸಿದೆ. ಅಳಲಿಕ್ಕೂ ದನಿಯಿಲ್ಲದಷ್ಟು ಭೀಕರತೆ ಇದೆ. ಬರದಿಂದ ಕಂಗೆಟ್ಟ ಜನ ಉದ್ಯೋಗ ಅರಸಿ ಬೇರೆ ಊರಿಗೆ ಹೋದರೆ ಹೆಣ ಎಳಿಲಿಕ್ಕೆ ದಿಕ್ ಇಲ್ದಂಗ್ ಆದೀತು ಎನ್ನುವ ಎಚ್ಚರಿಕೆ ಈ ಹೇಳಿಕೆಯಲ್ಲಿದೆ. ಬರ ಬಂದಾಗ ಭಗವಂತನು ಕಾಯಬೇಕು. ರೈತರಿಗೆ ಜೀವದಾನ ಮಾಡಬೇಕು. ದನಕರುಗಳು ಉಳಿಯಬೇಕು. ಎಂಬ ಕೋರಿಕೆ ಈ ಹೇಳಿಕೆಗಳ ಅಂತರಂಗದಲ್ಲಿ ಅಡಗಿದೆ.

ಉತ್ತರ ದಿಕ್ಕಿನ್ಯಾಗ ಕೆಂಡದ ಮಳಿ ಬರತೈತಿ
ದಕ್ಷಿಣ ದಿಕ್ಕಿನ್ಯಾಗ ಬಿರುಗಾಳಿ ಬೀಸತೈತಿ
ಭಂಡಾಗಿ ಹೋಗಬ್ಯಾಡರಿ.[೪೬]

ಜನತಾಕ ಸಮಾಧಾನ ಬೀಳಲಿಲ್ಲ
ಒಕ್ಕಲಿಗ್ಯಾನ ಮಗನೀಗಿ
ದಂಡಿಗೀ ಹಚ್ಚದ್ರಾಗ
ಕಸರ ಕುಂತಿತು.[೪೭]

ಎಲೇ! ಗಾಣಮಿಣಿ! ಇಷ್ಟು ದಿವ್ಸ ಬಡಗಿ ಹಿಡಿದು ಹೇಳತಿದ್ದೆ,
ಈಗ ಬೆತ್ತ ಹಿಡಿದ್ ಹೇಳತಿನಿ, ಇದಿಮಾಯಿ ರಂಡಿ ಇದರಿಗಿ ಬಂದ್ಲು,
ಬೂತ್ಯಾನ ಹಚ್ಚಿ ಬೈಲ್ ಮಾಡಬೇಕಂದ್ರ ದೀಡದಿನ ಹಿಂದಕ್ಕ ಬಿತ್ತು.
ಅದಕ್ಕ ಬೆನ್ನ ಹಿಂದ್ ಇದ್ದಿನಿ.[೪೮]

ಇನ್ನ ಮುಂದ ನಾಲ್ಕು ಎತ್ತು ಕಟ್ಟಿದಾವ ಎರಡ ಎತ್ತು ಕಟ್ಟತಾನ.
ಎರಡ ಎತ್ತ ಕಟ್ಟಿದಾಂವ ಒಂದ ಎತ್ತ ಕಟ್ಟತಾನ. ಧೈರ್ಯ ಬಿಡಬ್ಯಾಡ್ರಿ
ಹ್ಯಾಂಗರ ಮಾಡಿ ಲಿಂಗದಂಗ ಸಂರಕ್ಷಣೆ ಮಾಡ್ತಿನಿ.[೪೯]

ಚಟಾಕಿನ ಮೇಲೆ ಚಟಾಕ ಹಾಕಿದ್ರೂ ಬರ ಅನ್ನಿಸುವದಿಲ್ಲ
ಇದಕ್ಕ ಬೆನ್ನ ಹಿಂದ ಇರ್ತೀನಿ ಅಂತ ಆದ ವಾಕ್ಯ ಎಷ್ಟು ತುಟ್ಟಿ
ಮಾರಿದರೂ ಬರ ಅನ್ನಿಸುವುದಿಲ್ಲ.[೫೦]

ಎಲೇ ಮಕ್ಕಳಿರ್‍ಯಾ ಬಸವನ ಪತ್ರಿ, ಶಿಶುವಿನ ಅನ್ನ ಬಲು ಜೋಕಿ
ಮಕ್ಕಳ್ರ್ಯಾ ಬಸವನ ಪತ್ರಿ ಶಿಶುವಿನ ಅನ್ನ ಜ್ವಾಕಿ ಮಾಡಬೇಕೆನ್ನುದ್ರಾಗ
ಇದಿಮಾಯಿ ರಂಡಿ ಇದಿರಾದಾಳಲೇ ಹಾಕಲೇ ಡೊಳ್ಳು.[೫೧]

ಈ ಎಲ್ಲ ಹೇಳಿಕೆಗಳನ್ನ ಗಮನಿಸಿದರೆ ಬರದ ಎಚ್ಚರಿಕೆ ಇವುಗಳಲ್ಲಿ ಕಂಡುಬರುತ್ತದೆ. 'ಕೆಂಡದ ಮಳಿ' ಬಂದ ತೊಂದರೆಯನ್ನು, ಬದುಕಿನ ಕಷ್ಟ ನಷ್ಟಗಳನ್ನು ಬಯಲು ಮಾಡಬೇಕೆಂದರೆ ಒಂದೂವರೆ ದಿನ ಹಿಂದ ಹೋಯಿತು ಎನ್ನುವ, ನಾಲ್ಕು ಎತ್ತು ಕಟ್ಟುವ ರೈತ ಒಂದು ಎತ್ತಿಗೆ ಬರಬೇಕಾದರೆ ಅದಕ್ಕೆ ಬರವೇ ಕಾರಣ ಬಸವನ ಪತ್ರಿ ಮತ್ತು ಶಿಶುವಿನ ಅನ್ನ ರಕ್ಷಿಸಿಕೊಳ್ಳಲು ಸೂಚನೆಗಳು ಈ ಹೇಳಿಕೆಗಳಲ್ಲಿವೆ.

**ಸಮೃದ್ಧಿ ಕುರಿತ ಹೇಳಿಕೆಗಳು :**

ಹೆಚ್ಚಾಗಿ ಭವಿಷ್ಯವನ್ನೇ ಹೇಳುವ ಹೇಳಿಕೆಗಳು ನಿರ್ಧಿಷ್ಟವಾದ ವಿಷಯಗಳನ್ನು ಕುರಿತು ಎಲ್ಲಿಯೂ ಹೇಳಿಲ್ಲ. ಹೇಳಿಕೆ ಮಾಡುವಾಗ ಹೇಳುವ ಒಡೆಯರು ತಮ್ಮ ಅತಿಮಾನುಷ ಶಕ್ತಿಯನ್ನು ಉಪಯೋಗಿಸಿ ವಿಭಿನ್ನವಾದ ವಿಷಯಗಳನ್ನು ಚರ್ಚಿಸಿರುವುದು ಸಂಗ್ರಹಿತ ಹೇಳಿಕೆಗಳ ಮೂಲಕ ಕಂಡುಬರುತ್ತದೆ. ಒಮ್ಮೊಮ್ಮೆ ಮುಂದೆ ಬರಬಹುದಾದ ಸಮೃದ್ಧಿ ಹಾಗೂ ಸುಗುಣಕಾಲದ ಕುರಿತ ಅನೇಕ ಹೇಳಿಕೆಗಳು ಲಭ್ಯವಾಗಿವೆ.

ಎಲೆ ರೈತ,
ಭಕ್ತಿಯಿಂದ ಬಿತ್ತರಲೇ ಪುಣ್ಯಾದ ಬೆಳಿ ಬರತೈತಿ.
ಆಗ ಅಂಗ್ಯೆ ನೋಡಿ ಮುಂಗ್ಯೆ ಏರತಾವ
ಅನ್ನದ ಮನಿ ಆಗ್ತದ.[೫೨]

ಮಳಿ ಬಂದ್ ದೇಶ
ತೆಪ್ಪಾಗತೈತಿ ಈ ವರ್ಷ ಹೊಟ್ಟಿ-ನೆತ್ತಿಗೆ
ಏನ್ ಕಡಿಮಿಲ್ಲ.[೫೩]

ಸತ್ಯದ ದಿನಮಾನ ಒತ್ತೊತ್ತಿ ಬಂದಾವು
ಚಿತ್ತ ಕೊಟ್ಟ ಕೇಳರಲೇ
ಕರ್ತೃ ಗುರು ಅಮೋಘಸಿದ್ಧ

ಬರುವಾಗ ಮೃತ್ಯುಲೋಕ, ಜೀವ ಜಂತು
ಉಳಿತಾವು.[೫೪]

ಬೀರಪ್ಪನ ಜಾತ್ರ್ಯಾಗ ಆಳುಮಕ್ಕಳು ಉಂಡಮನ್ಯಾಗ
ಹಾಲಿನ ಹೊಳಿ ಸುರುಸ್ತಾನ ಹಾಲ ಹರವಿ ತುಂಬತೈತಿ.[೫೫]

ಎರಡು ಗುಡ್ಡದ ನಡುವೆ ಬೀರಪ್ಪ ಮಲಗ್ಯಾನ
ಅವಗ್ ನಡಕೋರ್‍ಯೋ ಉರಿ ಹೋಗಿ ಸಿರಿ ಬರ್‍ತದ.[೫೬]

ಎಲೇ ಎಲೇ ಕೇಳರಿಲೇ ಕೇಳರಿಲೇ
ಅಲಕನೂರು ಕರಿಸಿದ್ಧ, ಚಿಂಚಲಿ ಮಾಯವ್ವ
ಕಡಬಿ ಇಟ್ಟಪ್ಪ, ಕುರಿಬ್ಯಾಟ ಬೀರಪ್ಪ
ಹೇಳಿ ಕಳಿಸ್ಯಾನ ಮಾಳಪ್ಪಗ ಹೋದ ವರ್ಷಕ್ಕಿಂತ
ರೈತಗ ಈ ವರ್ಷ ಮಳಿ ಚಲೋ ಆಗಿ ಬಾಳೆ ಹರ್ಷ ಆಗತೈತಿ.[೫೭]

ಹಟ್ಟಿ ಕಲ್ಲು ಹುಸಿಯಾಯ್ತು
ಹಿಕ್ಕಿಯಿಂದ ಹೊಲ ಹದ ಆಯ್ತು
ಹಿಟ್ಟಿನ ಗಡಗಿ ದೊಡ್ಡದಾಯ್ತು.
ನನ್ನಂತ ನಡದರ ನುಚ್ಚಿನ ಕಟ್ಟಿ ಹಾಕೀನಲೇ ಗಾಣಮಿಣಿ.[೫೮]

ಎಲೇ! ಅರಕೇರಿ ಅರಮನಿ ಕಲ್ಲೂರ ಗುರಮನಿ
ಮಣಕಾಪೂರ ಸಿಂಹಾಸನ ಗದ್ಗಿ, ಒಕ್ಕಲಗ್ಯಾನ
ಮಗನೀಗಿ ಹೋದ ವರ್ಷಕ್ಕಿಂತ ಈ ವರ್ಷ ಖುಷಿ ಮಾಡ್ತೀನಿ.
ಆನಿಮ್ಯಾಗ ಅನ್ನ ಹೇರಿನಿ, ನಂದಿ ಮ್ಯಾಗ ನೀರ ಹೇರಿನಿ.[೫೯]

ಮೇಲಿನ ಹೇಳಿಕೆಗಳ ತಾತ್ಪರ್ಯ ಸಮೃದ್ಧಿ. ಭಕ್ತ ಜನಕ್ಕೆ ಬಂದೊದಗುವ ಸಮೃದ್ಧಿ ಕುರಿತ ಹೇಳಿಕೆಗಳು. ಇವುಗಳ ಸಹಾಯದಿಂದ ಜನರು ನೆಮ್ಮದಿಯಿಂದ ದೇವವಾಣಿಗಳನ್ನು ನಂಬಿ

ಬದುಕು ನಡೆಸುವುದು. ಒಂದು ವೇಳೆ ದೇವವಾಣಿಗಳಿಗೆ ವಿರುದ್ಧವಾದುದು ಸಂಭವಿಸಿದರೆ ಅದು ತಮ್ಮ ಕರ್ಮದ ಫಲವೆಂದು ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುವ ಸಂದರ್ಭಗಳು ಒದಗುವುದುಂಟು. ಈ ಹೇಳಿಕೆಗಳು ದೈವದ ಬಗ್ಗೆ ಶ್ರದ್ಧೆ-ನಂಬಿಕೆಯನ್ನು, ಬದುಕಿನ ಆಳವಾದ ತಿಳುವಳಿಕೆಯನ್ನು ಹಾಗೂ ಹಾಲುಮತ ದೈವಗಳು ಹೊಲ-ಮನೆಗಳಿಗೆ ಬಂದಾಗ ರೈತರಿಗೆ ಪರಮಾನಂದವಾಗುತ್ತದೆ. ರೈತರು ಆ ಸಂದರ್ಭದಲ್ಲಿ ತಮ್ಮ ಬಂಧು-ಬಳಗವನ್ನ, ಊರಿನ ದೈವದವರನ್ನು ಕರೆಸಿ ಸಂತೋಷಪಡುತ್ತಾರೆ. ಅಲ್ಲಯೂ ಮಳೆ-ಬೆಳೆ ಕುರಿತು ಹೇಳಿಕೆಗಳಾಗುತ್ತವೆ.

**ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದ ಹೇಳಿಕೆಗಳು :**

ಧುತ್ತೆಂದು ಧಾವಿಸಿ ಬರುವ ಪ್ರಾಕೃತಿಕ ವಿಕೋಪಗಳು ಮನುಷ್ಯನನ್ನು ಅಧೀನನ್ನಾಗಿ ಮಾಡುವ ಸಂದರ್ಭಗಳು ಮಾನವನ ಜೀವನದಲ್ಲಿ ಸರ್ವೇಸಾಮಾನ್ಯ. ಅತಿಯಾದ ಮಳೆ, ಅತಿಯಾದ ಬಿಸಿಲು, ಭೂಕಂಪ, ಬಿರುಗಾಳಿ, ಚಂಡಮಾರುತ ಇವುಗಳು ಜೀವನದ ಮೇಲೆ ಬೀರುವ ಪ್ರಭಾವವೇ ಭಯಂಕರವಾದವುಗಳು. ಆದ್ದರಿಂದ ಭವಿಷ್ಯದಲ್ಲಿ ಘಟಿಸಿರಬಹುದಾದ ಪ್ರಾಕೃತಿಕ ವಿಕೋಪಗಳ ಮುನ್ಸೂಚನೆಯನ್ನು ನೀಡುವ ಅನೇಕ ಹೇಳಿಕೆಗಳು ಕಾಣಸಿಗುತ್ತವೆ.

ಅಡವ್ಯಾನ ಕುರಿಗಳಿಗೆ ಕುಡ್ಯಾಕ ನೀರಿಲ್ಲ
ಉತ್ತರ ದಿಕ್ಕಿನ್ಯಾಗ ಉರಿ ಬರ್ತದ
ಜ್ವಾಕಿಲೇ ಹೋಗಬೇಕ.[೬೦]

ನಂಜಿನ ಗಾಳಿ ಬೀಸೀತು
ಕೆಂಡದ ಮಳೆಗರದೀತು
ವಿಷದ ಬಳ್ಳಿ ಹರದೀತೋ
ಹುಷ್ಯಾರಿಂದ ಹೋಗ್ರಿ.[೬೧]

ಇಂತಹ ಹೇಳಿಕೆಗಳು ನಿಸರ್ಗದಲ್ಲಿ ಕಂಡು ಬರುವ ಏರು-ಪೇರುಗಳನ್ನು ಆ ಸಂದರ್ಭದಲ್ಲಿ ಆಗಬಹುದಾದ ಕಷ್ಟ ನಷ್ಟಗಳನ್ನು ಸೂಚಿಸುತ್ತವೆ. ಆ ಕಷ್ಟ-ನಷ್ಟಗಳನ್ನು ಹೊಗಲಾಡಿಸಲು ದೈವದ ಮೊರೆಹೋಗುತ್ತಾರೆ.

**ಬದುಕಿಗೆ ಸಂಬಂಧಿಸಿದ ಹೇಳಿಕೆಗಳು :**

ಮನುಷ್ಯ ತನ್ನ ಜೀವಿತಾವಧಿಯಲ್ಲಿ ಹಲವಾರು ಸುಖ-ದುಖದ ಘಟನೆಗಳನ್ನು ಎದುರಿಸುವ ಸಂದರ್ಭ ಒದಗಿ ಬರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಸಂತಾನಭಾಗ್ಯ, ವಿನಯ, ದಾನ, ಧರ್ಮ, ಗುರುವಿನ ಮಹತ್ವ, ಆರೋಗ್ಯ-ಅನಾರೋಗ್ಯ, ಶುಭ-ಅಶುಭ ಹೇಳಿಕೆಗಳು ಕುರುಬರ ಹೇಳಿಕೆಗಳಲ್ಲಿ

ಕಂಡುಬರುತ್ತದೆ. ಪರಂಪರಾಗತ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಸಂತಾನ ಪ್ರಾಪ್ತಿ ಎಂದರೆ ಪುಣ್ಯದ ಫಲ ಎಂದು ಭಾವಿಸುವ ಜನ ಇದ್ದಾರೆ. ಮಕ್ಕಳು ಹುಟ್ಟುವುದು ಒಂದು ಪುಣ್ಯ. ಸಮಾಜ ಒಪ್ಪಿತ ಕೆಲಸಗಳನ್ನು ಕೈಗೊಂಡು ಸ್ವರ್ಗ ಪ್ರಾಪ್ತಿಯಾಗಬೇಕಾದರೆ ಪುತ್ರ ಸಂತಾನವು ಒಂದು. ಒಂದು ವೇಳೆ ಸಂತಾನ ಪ್ರಾಪ್ತಿಯಲ್ಲಿ ವಿಳಂಬವಾದರೆ ದಂಪತಿಗಳು ಗುರುವಿನ ದೈವದ ಮೊರೆಹೋಗುವುದು ಸರ್ವೇಸಾಮಾನ್ಯ ಕ್ರಿಯೆ. ಆಗ ಹೇಳಿಕೆಯವರು ಸಂತಾನ ಪ್ರಾಪ್ತಿಯ ಕುರಿತು ಭವಿಷ್ಯವನ್ನು ನುಡಿಯುವ ಅನೇಕ ಹೇಳಿಕೆಗಳು ಇವೆ.

ಸುತ್ತ ಮೂರು ಗಾವುದ ದಾಟಿ ಸುದ್ದಿ ತಂದಾನ್
ಅಲ್ಲಿಂದ ಕಡೋಲಿ ಇಟ್ಟಪ್ಪ ಬಂದಾನ್
ಭಂಡಾರ ಹಚ್ಚೇನ ಕೌಲ್ ಕೇಳ್ಯಾರ
ಮಕ್ಕಳ ಮರಿ ಆಗತಾವ ಮೂರ ಅಮಾಸಿ
ಬಂದ ಹೋಗಪಾ.[೬೧]

ಮೂರು ಅಮಾಸಿ ಬಂದು ದೇವಸ್ಥಾನದ ಚಾಕರಿ ಮಾಡಿದ್ರ ಮಕ್ಕಳ ಮರಿ ಆಗತಾವ ಅನ್ನುವುದರಲ್ಲಿ ಭಕ್ತರಿಂದ ಭಕ್ತಿಯನ್ನು ಅಪೇಕ್ಷಿಸುವುದು ಇದರಲ್ಲಿ ಇದೆ.

ಅಂಜಬ್ಯಾಡ ತಂಗೀ
ಐದು ಅಮಾಸಿ ನನ್ನ ಗುಡಿಗೆ ಬಾ
ಹೂವು ಹಾರಿಸ್ ಬೆಕ್ಕ್ ಹಿಡಿದ್ ತಂದ್
ನಿನ್ ಕೈಯಾಗ್ ಕೊಟ್ಟೇನ್ ಮಕ್ಕಳ
ಆಗತಾವ ಹಿಡಿ ಭಂಡಾರ.[೬೨]

ಕಣ್ಣೀಲಿ ನೋಡಬಾರದ ಮುತ್ತಿನ ಸೆರಗ ಹಿಡಿದಾರ
ಹೊಟ್ಟಿಮ್ಯಾಲ ಕೈಯಿಟ್ಟು ಪಿಂಡಾಂಡ ನೋಡ್ಯಾನ್
ನಿಂಗ್ ಬೀರಣ್ಣ ಹೇಳಿಕಿ ಹೇಳ್ಯಾನ.[೬೪]

ಇಲ್ಲಿ ಹೊಟ್ಟಿಮ್ಯಾಲ ಕೈಯಿಟ್ಟು ಪಿಂಡಾಂಡ ನೋಡ್ಯಾನ್ ಅಂದ್ರ ಅದೃಶ್ಯ ಶಕ್ತಿಯಿಂದ ತಿಳಿಯುವ ಶಕ್ತಿ ಒಡೆಯರಿಗೆ ಇತ್ತು ಅನ್ನುವುದಕ್ಕೆ ಇದು ಉದಾಹರಣೆ.

ಹೆಂಡತಿ ಒಂದ ಕಡೆ, ಗಂಡ ಒಂದ ಕಡೆ
ಹುಂಜದ ಕಾಳಗ ಹಾಗಲೇಡಿರಲೇ
ಹೊಂದಕೊಂಡ ಹೋಗ್ರಿ.[೬೫]

ಎಲೇ ! ಮಕ್ಕಳಿಲ್ಲದ ಮನೆ ಒಕ್ಕಲಿಲ್ಲದ ಊರು
ಎರಡಕ್ಕಿಂತಲೂ ಕಡೆ ಭಂಡ ಬದುಕು
ಬ್ಯಾಡರಲೇ ಹಿಡಿ ಭಂಡಾರ.[೬೬]

ಇವುಗಳು ಸಂತಾನ ಪ್ರಾಪ್ತಿ ಮತ್ತು ಸಂತಾನ ಕುರಿತ ಹೇಳಿಕೆಗಳು. ದೈವದ ಬಗ್ಗೆ ಅಪಾರ ನಂಬಿಕೆ ಇಟ್ಟುಕೊಂಡು ನಡೆದು ಕೊಂಡರೆ ಭಕ್ತರ ಮನಸ್ಸಿನಲ್ಲಿರುವ ಆಶೆ ಆಕಾಂಕ್ಷೆಗಳು ಈಡೇರುತ್ತವೆ. ಕಷ್ಟ–ನಷ್ಟಗಳು ನಿವಾರಣೆಯಾಗುತ್ತವೆ. ಎಂಬ ದೃಢ ವಿಶ್ವಾಸ ಈ ಹೇಳಿಕೆಯಲ್ಲಿದೆ.

ಲೋಕದಾಗ ಮಾನವಂತರು ಇಲ್ಲಾ,
ದಾನವಂತರು ಇಲ್ಲ ಮಾನ ಹೋಗ್ತಾ ಇದೆ
ಅದಕ ಭೂಮಿಮ್ಯಾಲೆ ಮಳಿ–ಬೆಳಿ
ಕಡಿಮೆ ಆಗ್ತಾಯಿದೆ.[೬೭]

ಮನುಷ್ಯನ ಸಂಪೂರ್ಣತೆಗೆ ದಾನ ಮತ್ತು ಮಾನ ಮುಖ್ಯವಾದವು ಮಾನವೀಯತೆಯಿಂದ ಬದುಕುವುದು ಮನುಷ್ಯನು ದುಡಿದು ಗಳಿಸಿದ ಸಂಪತ್ತಿನಲ್ಲಿ ಇಲ್ಲದವರಿಗೆ ದಾನ ಮಾಡುವುದು ಪ್ರತಿಯೊಬ್ಬನ ಕರ್ತವ್ಯವಾಗಬೇಕು ಎನ್ನುವ ಎಚ್ಚರಿಕೆಯನ್ನು ಹೇಳಿಕೆಗಳ ಮೂಲಕ ಜನತೆಗೆ ನೀಡುತ್ತಾರೆ. ಮನುಷ್ಯನಿಗೆ ಸಿರಿ ಸಂಪತ್ತು ಬಂದಾಗ ಬಡಬಗ್ಗರ ಬಗ್ಗೆ, ದೀನ ದಲಿತರ ಬಗ್ಗೆ, ಮಾನವೀಯತೆಯ ಅಂತಃಕರಣ ಇರಬೇಕು ಎಂಬುದು ಈ ಹೇಳಿಕೆಗಳ ಮೂಲ ತತ್ವವಾಗಿದೆ.

ನರಜನ್ಮಕೆ ಬಂದು ಗರವು ಇರಬಾರದು
ಅರಿವಿನೊಳಗೆ ಅರಿವು ಇರಬೇಕು[೬೮]

ಮನುಷ್ಯನಿಗೆ ಗರ್ವ ಒಳ್ಳೆಯದಲ್ಲ. ತನ್ನ ಗರ್ವ ತನ್ನನ್ನೇ ಸುಟ್ಟು ನಾಶಮಾಡುವುದು. ಅದಕ್ಕೆ ತಿಳಿದು ನಡೆಯಬೇಕೆಂದು ಎನ್ನುವ ಅರ್ಥ. ಮನುಷ್ಯ ತಾಗಿ ಬಾಗಿ ನಡೆಯಬೇಕು ವಿದ್ಯೆಗೆ ವಿನಯವೇ ಭೂಷಣ ಎಂಬ ತತ್ವ ಈ ಹೇಳಿಕೆಯ ಹಿಂದೆ ಇದೆ.

ನನ್ನ ನುಡಿ ಬೀರಪ್ಪನ ನುಡಿ
ಹೇಳುವ ದಿನ ಬಂತು
ಯಾರಿಗೂ ದೀನರಾಗಬೇಡಿ
ದಾನ–ಧರ್ಮ ಮಾಡರಲೇ[೬೯]

ಬಾಳ್ಯಾರು ಬದುಕ್ಯಾರು
ನೀವು ಬದುಕಿ ಉಳಿದವರನ್ನು

ಬದುಕಿಸಿ ಮನಿಗ್ ಬಂದವರಿಗೆ
ಹಿಡಿ ನುಚ್ಚು ಅಂಬಲಿ ಕೊಡ್ರಿ
ಹಂಗ ಕಳಿಸಬ್ಯಾಡ್ರಿ.[೨೦]

ಊರಿಗೆಲ್ಲ ಐತಿ ಬೀರಪ್ಪನ ಕಂಬಳಿ
ಎತ್ತಲಾರದ ಕೊಪ್ಪರಗಿ ಐತಿ
ನಿಮ್ಮ ಮನಸ್ಸಿನಂಗ್ ಕೊಡ್ರಿಲೇ
ಏಳ್ರಿ ಏಳ್ರಿ ಎಣಿಸಲಾರದ ಗೆಜ್ಜಿ ಬರ್ತಾವ್[೨೧]

ಎಲೇ ! ಬಲಗೈಲಿ ಕೊಡುವಾಗ
ಎಡಗೈಗೆ ಕಾಣಬಾರದು
ಕೊಟ್ಟಿದ್ ಹಂಗಸ್‌ಬ್ಯಾಡರಲೇ[೨೨]

ಇವೆಲ್ಲವುಗಳು ದಾನದ ಮಹತ್ವವನ್ನು ಕುರಿತು ಹೇಳುತ್ತವೆ. ಬಲಗೈ ಕೊಟ್ಟದ್ದು ಎಡಗೈಗೆ ತಿಳಿಯಬಾರದು ಅಂದರೆ ಕೊಟ್ಟ ವಿಷಯವನ್ನು ಯಾರಿಗೂ ಹೇಳಬಾರದು ಅಂತ ಅರ್ಥ. ಈ ಹೇಳಿಕೆಗಳು ಮನುಷ್ಯನು ರೂಡಿಸಿಕೊಳ್ಳಬೇಕಾದ ವಿಶಾಲ ಹೃದಯವನ್ನು ಸೂಚಿಸುತ್ತವೆ. ಮನುಷ್ಯ ಜೀವನ ಸ್ಥಿರವಲ್ಲ ಬದುಕಿದಾಗ ಬದುಕಿನದ್ದಕ್ಕೂ ಹೃದಯವಂತರಾಗಿ ಬಾಳಬೇಕು ಎನ್ನುವ ಸೂಚನೆ ಇದೆ.

ಪ್ರತಿಯೊಬ್ಬನ ಜೀವನದಲ್ಲಿ ಗುರು ಪ್ರಮುಖ ಪಾತ್ರವಹಿಸುತ್ತಾನೆ. 'ನಃ ಗುರೋಧಿಕಂ' ಎನ್ನುವ ಪುರಾಣದ ಮಾತು ಸತ್ಯವಾಗಿದೆ. ಗುರುವಿಗೆ ಅಧಿಕವಾದುದು ಈ ಲೋಕದಲ್ಲಿ ಯಾವುದು ಇಲ್ಲ. ಅಜ್ಞಾನವನ್ನು ಹೋಗಲಾಡಿಸಿ ಜ್ಞಾನವನ್ನು ನೀಡುವವನೇ ನಿಜವಾದ ಗುರು. ಅಂತಹ ಗುರುವಿನ ಮಹಿಮೆಯನ್ನು ಸಾರುವ ಹೇಳಿಕೆಗಳು ನಮಗೆ ಇಲ್ಲಿ ಕಾಣಸಿಗುತ್ತವೆ.

ಗುರು ಬೇಕು ಗುರುವಿನ ಹೇಳಿಕೆ ಕೇಳಬೇಕು
ಗುರು ಮರೆತು ಬರೀ ಗರ್ವ ಮಾಡೀ
ಹಾಳಾಗಿ ಹೋಗಬ್ಯಾಡ್ರಿ ಗುರು ಬೀರಪ್ಪಗ ಮರಿಬ್ಯಾಡರೀ.[೨೩]

ಬ್ಯಾಡೋ ಬ್ಯಾಡ ಏ ತಮ್ಮಾ
ಉರಿವ ಕಿಚ್ಚು ಬಂದಾವ್

ಹೋಗಬ್ಯಾಡ ತಡಕೊಂಡಷ್ಟು
ಸುಃಖ ಐತಿ ಚಿಂಚಲಿ ಮಾಯವ್ವ ಹೇಳ್ಯಾಳ.[೭೪]

ಅಂತು ಇಂತು ಅನ್ನಬ್ಯಾಡರೀ
ಹುಚ್ಚಸೂಳೀ ಮಕ್ಕಳು ನೀವು
ಹೊತ್ತ ಕಳದ ವ್ಯಾಳೆ ಹಾಳ್ ಮಾಡಿ
ಅಂತರಂಗ ತಿಳಿಲಿಲ್ಲ.[೭೫]

ದೀವಿಗೆ-ದೀಪದ ಕುಡಿಹಂಗ
ದಿನಮಾನ್ ಬಂದಾವು ಗೊತ್ತು ನೋಡಿ
ಹೊತ್ತು ಹೇಳಬೇಕು.[೭೬]

ಮೇಲಿನ ಹೇಳಿಕೆಗಳನ್ನು ಅನುಲಕ್ಷಿಸಲಾಗಿ ಜೀವನದಲ್ಲಿ ಒದಗಬಹುದಾದ ಶುಭ-ಅಶುಭ ಘಟನೆಗಳು ಮನುಷ್ಯನ ಜೀವನದ ಮೇಲೆ ಬೀರಬಹುದಾದ ಪ್ರಭಾವವನ್ನು ತಿಳಿಸಿಕೊಡುತ್ತವೆ. ತಡಕೊಂಡಷ್ಟು ಸುಖ ಐತಿ ಎನ್ನುವ ಚಿಂಚಲಿ ಮಾಯವ್ವನ ಮಾತು, ಜೀವನದಲ್ಲಿ ವೇಳೆ ಅತ್ಯಂತ ಮಹತ್ವದ್ದು ಎನ್ನುವ ಇನ್ನೊಂದು ಮಾತು, ದಿನಮಾನ ನೋಡಿ ಜೀವನ ಮಾಡುವುದು ಎನ್ನುವ ಎಚ್ಚರಿಕೆಗಳು ಬಹಳ ಅರ್ಥಪೂರ್ಣವಾದವುಗಳು. ಚಿಕ್ಕವರು ತಪ್ಪು ಮಾಡಿದಾಗ ಗುರುಗಳು ಅದನ್ನು ಎತ್ತಿ ತೋರಿಸಿ ಸರಿ ಪಡಿಸಬೇಕು. ಗುರು ಜ್ಞಾನಿ ಆಗಿರುವುದರಿಂದ ಶಿಷ್ಯರನ್ನು ಜ್ಞಾನಿಯಾಗಿ ರೂಪಿಸಬೇಕು.

ಹೇಳಿಕೆಗಳು ಹೊಂದಿರುವ ವಿಷಯ ವಸ್ತುಗಳು ಭಿನ್ನ ಮತ್ತು ವಿಶೇಷ. ಮನುಷ್ಯ ಜೀವಿಯನ್ನು ತೀರ ತೊಂದರೆಗೆ ಈಡು ಮಾಡುವ ಮತ್ತೊಂದು ವಿಷಯವೆಂದರೆ ಆರೋಗ್ಯ. ಆರೋಗ್ಯ ಇಲ್ಲದಿದ್ದರೆ ಏನೂ ಮಾಡಲಾಗುವುದಿಲ್ಲ. ಅಂತಹ ಆರೋಗ್ಯದ ಕುರಿತು ಅನೇಕ ಹೇಳಿಕೆಗಳು ಕಾಣಸಿಗುತ್ತವೆ.

ಹುನ್ನ ಎಲ್ಲರಿಗೂ ಬರ್ತದಲೇ ಅದಕ ಅಂಜಬ್ಯಾಡ್ರೀ
ಹುನ್ನ ಗುರು ಬೀರಪ್ಪಗ ಬಿಟ್ಟಿಲ್ ಭಂಡಾರ ಹಾಕರಲೇ[೭೭]

ರಾತ್ರಿ ಮಾಯಾಗಿ ಮಾತ್ರೆ ಬದುಕಾಗಿ
ಮಧ್ಯಾಹ್ನದ ಕೋಳಿ ಕೂಗತೈತಿ[೭೮]

ಹಿಂಡ ದನದಾಗ ನುಗ್ಗಿ
ಕುರಿ ಹಾಲ ಕುಡಿರಿ
ಬಂದ ರೋಗ ಹೊಕ್ಕಾವ
ಇದ ಕರಿ ಭರಮನ ಮಾತ.[೭೯]

ಎಲೇ ! ಮಕ್ಕಳಿರಾ ಮುತ್ತಿನಂತಹ ದ್ಯಾಮವ್ವ ಹೇಳ್ಯಾಳ
ಐದ ಅಮಾಸಿ ನನ್ನ ಗುಡಿಗೆ ಬರಬೇಕು
ನನ್ನ ಅಂಗಳಾ ಸ್ವಚ್ಛ ಮಾಡಬೇಕು
ಬಂದ್ ದೆವ್ವ ಬಂದ ಹಾದೀಲಿ ಹೋಗತೈತಿ
ಏನ್ ಚಿಂತಿ ಮಾಡಬ್ಯಾಡರಿ ಹಾಕರಲೇ ಡೊಳ್ಳು.[೮೦]

**ಸಂಪ್ರದಾಯ ಕುರಿತ ಹೇಳಿಕೆಗಳು :**

ಮನುಷ್ಯನ ಬದುಕಿನಲ್ಲಿ ನಂಬಿಕೆ, ಆಚರಣೆಗಳು ಪ್ರಮುಖ ಪಾತ್ರವಹಿಸುತ್ತವೆ ಆ ಸಂಸ್ಕೃತಿಯೇ ಸಂಪ್ರದಾಯವಾಗಿದೆ. ಬದುಕಿನ ಅರ್ಥವನ್ನು ಅರಿತು ಮಾಡಿದರೆ ಅದು ಶಾಸ್ತ್ರ ಸಂಸ್ಕಾರ. ಸಂಸ್ಕಾರದಿಂದ ಬಂದ ಸಂಪ್ರದಾಯವನ್ನು ನಂಬಿಕೆ ಎನ್ನಬಹುದು. ಅರ್ಥ ಅರಿಯದೆ ಹಿಂದಿನವರನ್ನು ಅನುಸರಿಸಿ, ಅನುಕರಿಸಿಕೊಂಡು ಬಂದಿದ್ದರೆ ಅದು ಸಂಪ್ರದಾಯವೆನಿಸಿಕೊಳ್ಳುತ್ತದೆ. ಸಂಪ್ರದಾಯವು ಅದರ ಮಹತ್ವ ತಿಳಿಯುವವರೆಗೂ ಮೂಢ ನಂಬಿಕೆ ಅಥವಾ ಮುಗ್ಧ ನಂಬಿಕೆ ಆಗಿರುತ್ತದೆ. ಇಂತಹ ಸಂಪ್ರದಾಯಗಳು ಬೇರೆಯೆ ಸಜ್ಜನರ ಮನಸ್ಸನ್ನು ನೋಯಿಸುವಂತಿದ್ದರೆ ಆಚರಣೆಗೆ ಅಸಂಬದ್ಧವಾಗಿದ್ದರೆ, ಅಪಾಯಕಾರಿಯಾಗಿದ್ದರೆ, ಹಿಂಸೆಯಿಂದ ಕೂಡಿದ್ದರೆ ಇವುಗಳನ್ನು ಇಂದಿನ ಕಾಲಕ್ಕೆ ಸರಿಯಾಗಿ ಪರಿಷ್ಕರಣೆ ಮಾಡಿಕೊಳ್ಳುವದಕ್ಕೆ ಅವಕಾಶವಿದೆ. ಇಂತಹ ಸಂಪ್ರದಾಯವನ್ನು ಕುರಿತು ಹೇಳುವವರು ಅನೇಕ ಸಂದರ್ಭಗಳಲ್ಲಿ ಉವಾಚಿಸಿದ್ದು ಇದೆ.

ನಿತ್ಯ ನೇಮಗಳೆಲ್ಲ ಬಟಾ ಬಯಲಾಗಿ ಹ್ವಾದಾವು
ಸತ್ಯ ಬಿಟ್ಟ ನಡದ್ರ ಹ್ವಾದಿ ನರಕಕ್ಕ
ವಟ್ಟ ತಪ್ಪಸಬ್ಯಾಡರಲೇ.[೮೧]

ಕೂಸಿನ ಕಯ್ಯಾಗ ಕಂಬಳಿ ಕರಿ ಕಟ್ಟರೀ
ಕೂಸಿಗಿ ಬಂದ ಕಂಟಕ ಬಯಲಾಗತೈತಿ
ಹಚ್ಚರೀ ಭಂಡಾರ.[೮೨]

ಹೊಳಿಗಿ ಹೋಗಿ ಪೂಜಾ ಮಾಡುದರೊಳಗ
ತಪ್ಪಿಸಿ ಬಿಟ್ಟಾರಲೇ ಭೂತ ಪಿಶಾಚಿ ಹೊಕ್ಕಾಗಿ
ಜುಟ್ಟಾ ಕೈಯಾಗ ಹಿಡದ ಹೊಳ್ಯಾಗ ಒಗಿತಾನ.[೮೩]

ಮೂಲಿಮನಿ ಬ್ಯಾಡ, ಮೂರು ಮೂಲಿ ಬ್ಯಾಡ
ಐದ ಗ್ವಾಡಿ ಇದ್ದ ಮನಿ ಬ್ಯಾಡಾ ದೋಖಾ
ಆಗತೈತಿಲೇ ಡೊಳ್ಳ ಹೊಡಿರಿ.[೮೪]

ಯರಗಟ್ಟಿ ಎರೀ ಮ್ಯಾಲೆ
ಕರಿ ಕುರಿ ಮೇಯುತಿತ್ತ
ತಲಿ ಮ್ಯಾಲ ಕರಿ ನೂಲ
ಆ ನೂಲ ಕೊಳ್ಳಾಗ ಹಾಕರಲೇ
ಆಗುದ್ ಅಕ್ಕೈತಿ ಹೋಗುದು ಹೊಕ್ಕೈತಿ.[೮೫]

ಕೇಡುಗಾಲ ಐತಿ ಐದ ಮೂಲಿ ಮನಿ ಬ್ಯಾಡಾ
ಒಂದ್ಕಡೆ ಬಾಗಲ ಇಲ್ಲ ಬಿಟ್ಟಬಿಡರಲೇ.[೮೬]

ಅಗಲ ಚುಚ್ಚಿ ಹೊಳ್ಯಾಗ ಮಾಳಪ್ಪ
ಬಲಗೈಲಿ ಭಾಷೆ ಕೊಟ್ಟ ಕಳಿಸ್ಯಾನ
ಬಡಕೊಂಡ ದೆವ್ವ ಬಂದ ಹಾದಿಲಿ
ಹೊಕ್ಕೈತಿ ಭಂಡಾರ ಹಾಕರೆಲೇ
ತಪ್ಪದ ಜಾತ್ರಿಗೆ ಬರ್‍ರಲೇ[೮೭]

ಕುರುಡ ಇದ್ದಾವ್ಗ ಕಣ್ಣ ಆಗಬೇಕು
ಕಾಲ ಇಲ್ಲದವ್ಗ ನಡೆಸಿ ಕಲಿಸಿರೋ

ನಾನಾತರ ಬ್ಯಾನಿ ಬಂದಾವ್ರು
ಬಂದ ಮಾಳಪ್ಪ ಭಂಡಾರ ಹಚ್ಚಿಕೊಳ್ಳೊ[೮೮]

ಎಲೇ ಯಾವ ಕೇಳಾವ ಮುಂಗ್ಯೆ
ಹಿಡಿದ್ ಕೇಳರಲೇ ನಾಳೆ ಅಮಾಸಿಗೆ
ನಾಲ್ಕ ಹಕ್ಕಿ ಬರ್ತಾವ ಭೂಮ್ಯಾಗ
ಹಸಿರ ಬಣ್ಣ ಬರ್ತಾವ್[೮೯]

ನಡು ಹಿತ್ತಲದಾಗ ಕಾಗಿ ಮನಿಕಟ್ಟಿದೆ
ಕುಂಬಿ ಮ್ಯಾಗ ಕುಂತ ಕಾಗಿ ಒದರತೈತಿ ತಮ್ಮ
ಹಿಡಿ ಭಂಡಾರ ಬಂದ ಕಾಗಿ ಬಂದ ಹಾದೀಲಿ ಹೊಕ್ಕೈತಿ.[೯೦]

ಮಾವಿನಕಾಯಿ ಹೆಚ್ಚಾದ್ರ
ಕರಿ ಕಂಬಳಿ ಬೀಸಿದ್ರ
ಜೋಕುಮಾರ ಬಂದ್ರ ಮಳಿ ಭಾಳ
ಇದು ಹಿರ್‍ಯಾರ ಶಾಸ್ತ್ರ ಸುಳ್ಳಲ್ಲ.[೯೧]

ಈ ಮೇಲಿನ ಹೇಳಿಕೆಗಳನ್ನೆಲ್ಲ ಗಮನಿಸಿದರೆ ಮನುಷ್ಯ ಜೀವನದಲ್ಲಿ ಸಂಪ್ರದಾಯಗಳು ನಂಬಿಕೆಗಳಾಗಿಯೋ ಅಥವಾ ಮೂಢ ನಂಬಿಕೆಗಳಾಗಿಯೋ ನಮಗೆ ಅರಿವಿಲ್ಲದಂತೆ ಬೆಳೆದು ಬಂದಿರುವದನ್ನು ಕಾಣಬಹುದು. ಈ ಹೇಳಿಕೆಗಳ ಪ್ರತಿಯೊಂದು ಪದದಲ್ಲಿಯೂ ಸಾಂಸ್ಕೃತಿಕ ಆಯಾಮವಿದೆ. ಬದುಕಿನ ಬಗ್ಗೆ ತೀವ್ರವಾದ ಕಳಕಳಿಯಿದೆ. ಮನುಷ್ಯ ಪರಂಪಾರಾಗತವಾಗಿ ಬಂದಿರುವ ನಂಬಿಕೆ ಆಚರಣೆ, ಸಂಪ್ರದಾಯಗಳ ಬಗ್ಗೆ ಒಲವು ಮತ್ತು ಗೌರವ ಇಟ್ಟುಕೊಳ್ಳಬೇಕು ಎಂಬ ಭಾವನೆ ಈ ಹೇಳಿಕೆಗಳು ಅಭಿವ್ಯಕ್ತಿಸುತ್ತವೆ.

**ವ್ಯಾಪಾರ ಮತ್ತು ರಾಜಕೀಯ :**

ವ್ಯಾಪಾರ ಮತ್ತು ಆಡಳಿತ ಒಂದು ಜನಸಮುದಾಯ ಆಗತೈತಿ. ಉತ್ತಮ ವ್ಯಾಪಾರದಿಂದ ರಾಜ್ಯದ ಹಾಗೂ ರಾಷ್ಟ್ರದ ಆರ್ಥಿಕ ಅಭಿವೃದ್ಧಿಗೆ ಸಹಾಯಕವಾಗುತ್ತದೆ. ಕೃಷಿ ಚಟುವಟಿಕೆಯ ಅಂತಿಮ ಪ್ರಯೋಜನ ಪಡೆಯುವವರು ವ್ಯಾಪಾರಸ್ಥರು. ರಾಜಕೀಯದ ಮೂಲಕ ಜನಸಮುದಾಯದ ಆಡಳಿತಕ್ಕೆ ಸಹಾಯವಾಗುವ ಸರಕಾರವನ್ನು ಪ್ರತಿಷ್ಠಾಪಿಸಿ ತಮಗೆ ಬೇಕಾದ ಸಾಮೂಹಿಕ

ಅನುಕೂಲಗಳನ್ನು ಒದಗಿಸಿಕೊಳ್ಳಬಹುದು. ರೈತರು ತಾವು ಬೆಳೆದ ಬೆಳೆಯನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಾರೆ. ವ್ಯಾಪಾರಿಗಳು ಅದನ್ನು ಖರೀದಿಸಿ ಹೆಚ್ಚಿನ ಲಾಭಕ್ಕೆ ಮಾರಿಕೊಳ್ಳುವ, ರೈತರಿಗೆ ದಿನನಿತ್ಯದ ಅಗತ್ಯ ವಸ್ತುಗಳನ್ನು ಕ್ರಯ ನೋಡುವ ಪದ್ಧತಿ ನಮ್ಮಲ್ಲಿದೆ. ಅಂತೆಯೇ ಕುರುಬರ ಹೇಳಿಕೆಗಳಲ್ಲಿ ವ್ಯಾಪಾರ ಮತ್ತು ರಾಜಕಾರಣದ ಕುರಿತ ಅನೇಕ ಹೇಳಿಕೆಗಳು ಕಂಡುಬರುತ್ತವೆ.

ಅಗ್ಗ ಆಗ್ಯಾದಂತ ಹಿಗ್ಗ ಬ್ಯಾಡರಲೇ
ಮಗ್ಗಲ ಎಲುವು ಮುರಿದಾವ ಬಲು ಜ್ವಾಕಿ[೨]

ಲಾಭ ಬಡಕ ವ್ಯಾಪಾರಸ್ಥರನ್ನು ಕುರಿತು ದೈವ ಎಚ್ಚರಿಸುತ್ತಲೇ ಬಂದಿದೆ.

ಹಬ್ಬ ಬಂತು ಅಂತ ಸಾಲಾ ಮಾಡಬ್ಯಾಡರಲೇ
ಸಾಲ ತೀರಸುದೊರಳಗ ಬಾಳೆ ಮೂರಾಬಟ್ಟಿ ಆಗತೈತಿ
ಗುಡಿಗಿ ಬಂದ ಭಂಡಾರ ಹಚ್ಚಕೊಳ್ಳಿರಿ[೩]

ಭಾರತೀಯ ಸಂಪ್ರದಾಯದಲ್ಲಿ ಹಬ್ಬ ಹರಿದಿನಗಳು ಬಂದರೆ ವ್ಯಾಪಾರ, ಬಲು ಜೋರು ಆಗುತ್ತದೆ. ಆಗ ಜನತೆಗೆ ಎಚ್ಚರಿಕೆಯನ್ನು ನೀಡುತ್ತಾರೆ. ಸಾಲ ಮಾಡಿ ಹಬ್ಬ ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲ ಅದ್ದರಿಂದ ನಿಮ್ಮ ಇತಿ ಮಿತಿಯಲ್ಲಿ ಖರ್ಚು ಮಾಡಬೇಕು ಇಲ್ಲವಾದರೆ ತೊಂದರೆ ಅನುಭವಿಸುತ್ತೀರೆಂದು ಹೇಳುತ್ತಾರೆ.

ಕಾಳು-ಕಡಿ ಅಗ್ಗ ಆಗ್ಯಾವ ಅಂತ ಹಿಗ್ಗ ಬ್ಯಾಡರಿ
ಮಗ್ಗಲು ಎಲುಬು ಮುರದೇನ್ ದುಡ್ಯಾಕ ಕಲಿರಿಲೇ[೪]
ಮೇಳಿಯವನ ಬೆನ್ನಿಂದ ಲಾಳಿಯವನು ಹತ್ಯಾನ
ಲಾಳಿಯವನ ಬೆನ್ನಿಂದ ಮೇಳಿಯವನು ಹತ್ಯಾನ್[೫]

ಇಲ್ಲಿ ಮೇಳಿಯವನು ಅಂದರೆ ರೈತ, ಲಾಳಿಯವನು ಅಂದರೆ ವ್ಯಾಪಾರಿ, ರೈತ ಬೆಳೆದ ಬೆಳೆಯನ್ನು ಕಡಿಮೆ ದರಕ್ಕೆ ಖರೀದಿ ಮಾಡಲು ವ್ಯಾಪಾರಿ ಬೆನ್ನ ಹತ್ತವುದು ಸರ್ವೆಸಾಮಾನ್ಯ. ಅಂದರೆ ಬದಲಾದ ಸಂದರ್ಭದಲ್ಲಿ ರೈತನು ತಾನು ಬೆಳೆದ ಬೆಲೆಯನ್ನು ರಕ್ಷಿಸಿ ಹೆಚ್ಚಿನ ದರಕ್ಕೆ ಮಾರಾಟ ಮಾಡುವ ಪದ್ಧತಿಯೂ ಇದೆ. ಅದಕ್ಕೆ ಮೇಳಿಯವನ ಬೆನ್ನಿಂದ ಲಾಳಿಯವನು ಲಾಳಿಯವನ ಬೆನ್ನಿಂದ ಮೇಳಿಯವನು ಅಂತ ಹೇಳಿದ್ದಾರೆ. ಇದು ಒಂದು ಬೆಡಗಿನ ರೂಪದ ಹೇಳಿಕೆ. ರಾಜಕೀಯ ಕೂಡ ಹೇಳಿಕೆಯ ವ್ಯಾಪ್ತಿಯ ಹೊರಗಿಲ್ಲ. ಮನುಷ್ಯ ಜೀವನ ವ್ಯವಸ್ಥಿತವಾಗಿ ನಡೆಯಬೇಕಾಗಿದೆ. ತಾನೇ ನಿರ್ಮಿಸಿಕೊಂಡ ವ್ಯವಸ್ಥೆಯೇ ರಾಜಕೀಯ. ಕಲ್ಲೂರ ಕರಿಸಿದ್ದ

ಹೇಳಿದ ಈ ಕೆಳಗಿನ ಹೇಳಿಕೆಯನ್ನು ಗಮನಿಸಿ ಭಾರತ ಬ್ರಿಟೀಷರ ದಬ್ಬಾಳಿಕೆಯಿಂದ ಮುಕ್ತವಾಗುವ ಸಂದರ್ಭದಲ್ಲಿ ಹೈದರಾಬಾದ್ ನಿಜಾಮನು ನಡೆದುಕೊಂಡ ರೀತಿ ಅವನನ್ನು ನಿಯಂತ್ರಿಸಲು ವಲ್ಲಭಬಾಯಿ ಪಟೇಲ ಅವರ ಸೈನಿಕ ಕಾರ್ಯಾಚರಣೆಯ ಚಿತ್ರಣವನ್ನು ಕಟ್ಟಿಕೊಡುತ್ತದೆ.

ವಿಜಾಪುರ ಅಗಸಿ ಮ್ಯಾಲ ಹಂಗ ಕುಂತ್ಯು
ಕಲಬುರ್ಗಿ ಅಗಸಿ ಮ್ಯಾಲ ಕಾಗಿ ಕುಂತ್ಯು
ಹಂಗಿನ ಬಾಯಿಂದ ಹವಳ ಬಿತ್ತು
ಕಾಗಿ ಬಾಯಿಂದ ರಗುತ ಬಿತ್ತು[೯೬]

ಇದರಲ್ಲಿ ವಿಜಯಪೂರ ದೊರೆಗಳು ಯಾವುದೇ ತಕರಾರಿಲ್ಲದೇ ಭಾರತದ ಒಕ್ಕೂಟದಲ್ಲಿ ವಿಲೀನವಾದೂದನ್ನು ಹಂಗಿನ ಬಾಯಿಂದ ಹವಳ ಬಿತ್ತು ಎನ್ನುವ ಸಾಲುಗಳು ಹಾಗೂ ವಿಲೀನಕ್ಕೆ ಒಪ್ಪದ ಹೈದರಾಬಾದ ನಿಜಾಮಶಾಹಿ ರಕ್ತಪಾತದಿಂದ ನಂತರ ಒಕ್ಕೂಟದಲ್ಲಿ ವಿಲೀನಗೊಂಡದನ್ನು ರಗತ ಬಿತ್ತು ಎನ್ನುವುದನ್ನು ವಿವರಿಸುತ್ತದೆ. ದಿಲ್ಲಿ ಜಗದಾಗ ಕಮಲದ ಹೂ ಅರಳತದ ೨೦೧೩ರಲ್ಲಿ ಹಿರೇಬೂದನೂರು ಗಡಾದ ಇಟ್ಟಪ್ಪನ ಹೇಳಿಕೆ ಮತ್ತೆ ಕೇಂದ್ರದಲ್ಲಿ ನರೇಂದ್ರ ಮೋದಿ ಸರ್ಕಾರ ಅಸ್ತಿತ್ವಕ್ಕೆ ಬರುತ್ತದೆ ಎನ್ನುವುದನ್ನು ಹೇಳಿಕೆ ಮಾಡಿದರು. ಅಂತೆಯೇ ೨೦೧೯ರಲ್ಲಿ ನರೇಂದ್ರ ಮೋದಿ ನೇತೃತ್ವದ ಸರ್ಕಾರ ಅಸ್ಥಿತ್ವಕ್ಕೆ ಬಂದಿತು.

ಅನೇಕ ಹೇಳಿಕೆಗಳು ರಾಜಕೀಯ ಕುರಿತಾಗಿ ಮೂಡಿಬಂದ ಭವಿಷ್ಯದಲ್ಲಿ ಒದಗಬಹುದಾದ ರಾಜಕೀಯ ಗಂಡಾಂತರಗಳನ್ನು ಕುಡಾ ಅವರು ವಿವರಿಸುವ ಹಾಗೂ ಸೂಚ್ಯವಾಗಿ ತಿಳಿಸುವ ಕೆಲಸವನ್ನು ಮಾಡಿದ್ದಾರೆ.

**ಭವಿಷ್ಯ ಕುರಿತು ಹೇಳಿಕೆಗಳು :**

ಕೆಲವು ಹೇಳಿಕೆಗಳು ಮುಂದೆ ಆಗಬಹುದಾದ ಘಟನೆಗಳನ್ನು ಹಾಗೂ ಅದರ ಪರಿಣಾಮ ಮತ್ತು ಪರಿಹಾರಗಳಿಗೆ ಸಂಬಂಧಪಟ್ಟಿವೆ.

ಇದು ಸಿದ್ಧರ ಭೂಮಿ
ಮಾಯಕಾರ ಸಿದ್ಧನ ಆಟ
ಯಾರಿಗೂ ತಿಳಿಯುವುದಿಲ್ಲ
ಅದೃಶ್ಯವೆಲ್ಲ ಬಯಲಾಗುತ್ತೈತ್ರಿ[೯೭]

ಬಂದ ದಾರ್‍ಯಾಗ ಬಂದವರ ಹೊಂದಿ ಹೋಗುವುದಿಲ್ಲ
ಹಂದಿಗೋಳಕ್ಕಿಂತ ಮಂದಿ ಕಡೆ ಆಗುಕಾಲ ದೂರ ಇಲ್ಲ[೯೮]

ಏ ತಮ್ಮಾ ಹಳಹಳಿ ಮಾಡಬ್ಯಾಡ
ಮುಂದಿನ ಬ್ಯಾಸಗಿಗ ಬಾಸಿಂಗ ಬಲ
ಕೂಡಿ ಬರತೈತಿ ಇದು ಬೂದಿಗೊಪ್ಪ
ಮಾಳಿಂಗರಾಯನ ಮಾತ ಹುಸಿ ಹೋಗುದಿಲ್ಲ[೯೯]

ಇಂತಹ ಅನೇಕ ಹೇಳಿಕೆಗಳು ಭವಿಷ್ಯದಲ್ಲಿ ಒದಗಿಬಂದ ಕಷ್ಟ-ನಷ್ಟಗಳನ್ನು ಮುಂದೆ ಆಗಬಹುದಾದ ಕಂಟಕಗಳನ್ನು ಕುರಿತು ಹೇಳಿದ್ದು ಕಂಡುಬರುತ್ತದೆ. ಉಪಶೀರ್ಷಿಕೆಗಳ ಅಡಿಯಲ್ಲಿ ಚರ್ಚಿಸಿದ ಹೇಳಿಕೆಗಳು ವರ್ಗೀಕರಣವನ್ನು ಹೊರತು ಪಡಿಸಿ ಇನ್ನು ಅನೇಕ ರೀತಿಯ ಹೇಳಿಕೆಗಳು ಕಾಣಸಿಗುತ್ತವೆ.

ನರಜನ್ಮಕ್ಕೆ ಬಂದು ಗರುವು ಇರಬಾರದು
ಅರಿವಿನೊಳಗೆ ಅರಿವು ಇರಬೇಕು[೧೦೦]

ಎನ್ನುವ ಹೇಳಿಕೆಯಲ್ಲಿ ಮನುಷ್ಯನಾದವನಿಗೆ ಗರ್ವ ಒಳ್ಳೆಯದಲ್ಲ. ಅವನು ವಿನಯಪೂರ್ವಕವಾಗಿ ಜೀವನದಲ್ಲಿ ನಡೆದರೆ ಜೀವನ ಸುಂದರವಾಗುತ್ತದೆ. ಪ್ರಾಣಿಗಳಕ್ಕಿಂತ ಭಿನ್ನವಾಗಿ ಮನುಷ್ಯ ನಡೆಯಬೇಕೆಂದು ತಿಳಿಸುತ್ತದೆ.

ಐದು ಅಮಾಸಿ
ಉಪ್ಪ-ಹಪ್ಪಳ-ಶ್ಯಾಂಡಗಿ
ತಪ್ಪದ ಎಡಿ ಮಾಡಿರಿ
ನಮ್ಮ ಭರಮಪ್ಪಗ[೧೦೧]

ಬಾಳ್ಯಾರು ಬದುಕ್ಯಾರು
ನೀವು ಬದುಕಿ ಉಳಿದವರನ್ನು
ಬದುಕಿಸಿ ಮನಿಗ್ ಬಂದವನಿಗೆ
ಹಿಡಿ ನುಚ್ಚ ಅಂಬಲಿ ಕೊಡ್ರಿ
ಹಂಗ ಕಳಿಸಬ್ಯಾಡ್ರಿ[೧೦೨]

ಮೇಲಿನ ಹೇಳಿಕೆಯಲ್ಲಿ 'ಭಕ್ತಿ' ಇನ್ನೊಂದರಲ್ಲಿ ದಾನ ಇವುಗಳ ಮಹತ್ವವನ್ನು ಕುರಿತದ್ದಾಗಿದೆ. ದೇವರಿಗೆ ಶ್ರದ್ಧೆ ಭಕ್ತಿಯಿಂದ ನಡೆದುಕೊಳ್ಳಬೇಕು ತೋರಿಕೆಯ ಭಕ್ತಿ ಇರಬಾರದು ಎಂಬುದು ಈ ಹೇಳಿಕೆಯ ಅರ್ಥವಿರಬಹುದು 'ಮೋಸ' ಎನ್ನುವ ಪದ ಬಳಕೆಯಲ್ಲಿ ಬಂದದ್ದು ಮನುಷ್ಯ ಸ್ವಾರ್ಥಿ ಆದಾಗ ತಮ್ಮ ತಮ್ಮ ಅಗತ್ಯತೆಗೆ ತಕ್ಕಂತೆ ಇನ್ನೊಬ್ಬರಿಗೆ ಮೋಸ ಮಾಡಿ ಬದುಕುವ

ಜನ ಸಾಕಷ್ಟಿದ್ದಾರೆ. ಅವರನ್ನು ಕುರಿತು ಹೇಳಿಕೆ ಮಾಡುವವರು ಅನೇಕ ಸಂದರ್ಭಗಳಲ್ಲಿ ಹೇಳಿಕೆ ಮಾಡಿರುವುದು ಕಂಡು ಬಂದಿದೆ.

ಭೂಮಿಮ್ಯಾಲ ನೀಚರು ಹೆಚ್ಚಾಗ್ಯಾರೋ
ಈ ಕೈಕೊಟ್ಟ ಆ ಕೈ ಕೇಳತಾರ
ವಿಚಾರ ಮಾಡಿ ನಡಿರಲೇ[೧೦೩]

ನಂಬಿಕೆಗೆ ಮೋಸ ಮಾಡಬ್ಯಾಡರಿ
ಕೊಟ್ಟ ವಚನ ತಪ್ಪ ಬ್ಯಾಡರಿ
ಕಡಬಿ ಇಟ್ಟಪ್ಪನ ಮಾತ ಸುಳ್ಳಲ್ಲ
ಹಿಡಿರಿ ಭಂಡಾರ[೧೦೪]

ಇದ್ದದ್ದ ಹೇಳ್ರೀ
ಮೆತ್ತಗ ಮಾತಾಡಬ್ಯಾಡ್ರಿ
ಖರೆ ಹೇಳಿದ್ರ ನಮಗ ವಚನ ಕೊಟ್ಟವ
ಸಮುದ್ರ ದಾಟಸತಾನ[೧೦೫]

ಹೇಳಿಕೆಗಳು ಬಳಕೆ ಮತ್ತು ಸ್ವರೂಪದ ದೃಷ್ಟಿಯಿಂದ ಬಹಳ ವಿಭಿನ್ನವಾದವುಗಳು. ಒಂದೊಂದು ಹೇಳಿಕೆಯನ್ನು ಎಷ್ಟು ಸಲ ಓದುತ್ತವೆಯೋ, ಗ್ರಹಿಸುತ್ತೇವೆಯೋ ಅಷ್ಟು ಗಾಢವಾದ ಅರ್ಥವನ್ನು ಅಭಿವ್ಯಕ್ತಿಸುತ್ತವೆ. ಹೇಳಿಕೆಗಳ ಸ್ಥೂಲವಾದ ವರ್ಗೀಕರಣವನ್ನು ಕುರಿತು ಮೇಲಿನಂತೆ ಚರ್ಚೆ ಬೆಳಿಸಲಾಗಿದೆ. ಹೇಳಿಕೆಗಳ ಸಾಂಸ್ಕೃತಿಕ ಆಯಾಮಗಳನ್ನು ಹಾಗೂ ಅವುಗಳ ವೈವಿಧ್ಯತೆಯನ್ನು ಕುರಿತು ಇದೇ ಅಧ್ಯಯನದ ಮುಂದಿನ ಅಧ್ಯಯಗಳಲ್ಲಿ ಆಳವಾಗಿ ವಿವೇಚಿಸಲಾಗಿದೆ.

**ಅಡಿ ಟಿಪ್ಪಣಿ :**

೧. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೧.

೨. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೧.

೩. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೪೩, ಕ್ರಮ ಸಂ: ೧೮೨

೪. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ., ೩೦, ಕ್ರಮ ಸಂ: ೫೧

೫. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೩,೭೪,೭೬,೭೮

೬. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ, ಪು.ಸಂ. ೧೬೭,೧೬೮

೭. ಹಾಲುಮತ ಕಿರಣ, ಅಣ್ಣಪೂರ್ಣಾ ಗೋಸ್ಬಾಳ, ಪು.ಸಂ–೯೮

೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩

೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೫೮

೧೦. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೪

೧೧. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೦, ಕ್ರಮ ಸಂ: ೦೧

೧೨. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ., ೩೬ ಕ್ರಮ ಸಂ: ೮೦

೧೩. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ, ಪು.ಸಂ. ೧೬೭ ಕ್ರಮ ಸಂ: ೦೧

೧೪. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ, ಪು.ಸಂ. ೧೬೮ ಕ್ರಮ ಸಂ: ೦೧

೧೫. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೫೧ ಕ್ರಮ ಸಂ: ೨೮೯

೧೬. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೫೧ ಕ್ರಮ ಸಂ: ೨೯೫

೧೭. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೫೩ ಕ್ರಮ ಸಂ: ೩೩೪

೧೮. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೫೪ ಕ್ರಮ ಸಂ: ೩೫೨

೧೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೫೫ ಕ್ರಮ ಸಂ: ೩೮೧

೨೦.. ಕಡಕೋಳ ಸಿದ್ದರಾಯಜ್ಜನ, ಅಕ್ಬರ ಸಿ. ಕಾಲಿಮಿರ್ಚಿ, ಪು.ಸಂ.೩೮

೨೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೪

೨೨. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೪

೨೩. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೫

೨೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೧

೨೫. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೫

೨೬. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೪

೨೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೫

೨೮. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ., ೪೩ ಕ್ರಮ ಸಂ: ೧೭೬

೨೯. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೬

೩೦. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೬

೩೧. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೬

೩೨. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ., ೩೦ ಕ್ರಮ ಸಂ: ೦೮

೩೩. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೭

೩೪. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೭

೩೫. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೦೧

೩೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೫

೩೭. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೮

೩೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೧

೩೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦

೪೦. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ ಪು.ಸಂ. ೧೬೮ ಕ್ರಮ ಸಂ: ೧೨

೪೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೪

೪೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೦

೪೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧

೪೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೪

೪೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೫

೪೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫೧

೪೭. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೨ ಕ್ರಮ ಸಂ: ೨೩

೪೮. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೭, ಕ್ರಮ ಸಂ: ೯೭

೪೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೧, ಕ್ರಮ ಸಂ: ೧೪೭

೫೦. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೧, ಕ್ರಮ ಸಂ: ೧೫೮

೫೧. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೨, ಕ್ರಮ ಸಂ: ೧೨೨

೫೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೬

೫೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೮

೫೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯

೫೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೬

೫೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೮

೫೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೫

೫೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೪೬

೫೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೪ ಕ್ರಮ ಸಂ: ೪೭

೬೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೧

೬೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭

೬೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೩

೬೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೭

೬೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೯

೬೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫

೬೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೫೧

೬೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೨

೬೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೯

೬೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮

೭೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧

೭೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೮೨

೭೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೧

೭೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨

೭೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೮

೭೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬

೭೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭

೭೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೫

೭೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೩೨

೭೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೩

೮೦. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೮೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦

೮೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೫

೮೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೬

೮೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೭

೮೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೮

೮೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೪

೮೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೧

೮೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೪

೮೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೯

೯೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೦

೯೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೫೬

೯೨. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೭

೯೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭೨

೯೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೧೮

೯೫. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೯

೯೬. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೯

೯೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫೨

೯೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೩೦

೯೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೪

೧೦೦. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೧೯

೧೦೧. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೨೩

೧೦೨. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೪೧

೧೦೩. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೪೫

೧೦೪. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೧೯೮

೧೦೫. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೧೨೧

## ಅಧ್ಯಾಯ–೪.

# ಹೇಳಿಕೆಗಳು : ಅಧ್ಯಯನದ ನೆಲೆಗಳು

೪.೧. ಹೇಳಿಕೆಗಳು : ಸಾಮಾಜಿಕ ನೆಲೆ

೪.೨. ಹೇಳಿಕೆಗಳು : ಧಾರ್ಮಿಕ ನೆಲೆ

೪.೩. ಹೇಳಿಕೆಗಳು : ಮನಃಶಾಸ್ತ್ರೀಯ ನೆಲೆ

೪.೪. ಹೇಳಿಕೆಗಳು : ಭಾಷಿಕ ನೆಲೆ

# ಅಧ್ಯಾಯ–ನಾಲ್ಕು

# ಹೇಳಿಕೆಗಳು : ಅಧ್ಯಯನದ ನೆಲೆಗಳು

**೪.೧ ಸಾಮಾಜಿಕ ನೆಲೆ :**

ಮನುಕುಲದ ವಿಕಾಸ ಆರಂಭವಾದದ್ದೇ ಪಶುಪಾಲಕರಾದ ಕುರುಬರ ಹಟ್ಟಿಗಳಲ್ಲಿ ಎಂಬ ಅಂಶ ಸಂಶೋಧನೆಗಳಿಂದ ದೃಢಪಟ್ಟಿದೆ. ಈ ದೃಷ್ಟಿಯಿಂದ ಹಟ್ಟಿವಾಸಿಗಳಿಂದ ವಿಶೇಷವಾಗಿ ದನಕಾರರಾದ ಕುರುಬ ಸಮುದಾಯದ ಒಡೆಯರ ಅಥವಾ ಪೂಜಾರಿಗಳ ಹೇಳಿಕೆಗಳನ್ನು ಕುರಿತು ಸಮಾಜಶಾಸ್ತ್ರದ ತತ್ವಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಪ್ರಸ್ತುತ ಅಧ್ಯಾಯನದಲ್ಲಿ ವಿಸ್ತಾರವಾಗಿ ವಿವೇಚಿಸಲಾಗಿದೆ. ಸಮಾಜ ಸಂರಚನೆಯಲ್ಲಿ ಕುರುಬರ ಅಲೆಮಾರಿತನವೂ ಒಂದು ಸಾಮಾಜಿಕ ಪ್ರಕ್ರಿಯೆಯಾಗಿ ಕಂಡುಬರುತ್ತದೆ. ಒಟ್ಟು ಸಮುದಾಯದ ಒಂದು ಭಾಷಾ ಪರಿಸರದಿಂದ ಇನ್ನೊಂದು ಭಾಷಾ ಪರಿಸರದಲ್ಲಿ ನೆಲೆಸುವುದು ಅದು ಶಾಶ್ವತವಾಗಿರಬಹುದು ಅಥವಾ ಋತುಮಾನಕ್ಕೆ ತಕ್ಕಂತೆ ಇರಬಹುದು. ಅದಕ್ಕೆ ಹಲವು ಕಾರಣಗಳಿವೆ. ಕುರುಬರ ಅಲೆಮಾರಿತನಕ್ಕೆ ಅವರ ಬದುಕು ಕಟ್ಟಿಕೊಡಲಿಕ್ಕೆ ಒತ್ತಾಸೆಯಾಗಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಅಷ್ಟೇ ಅಲ್ಲ, ಭಾರತದ ಇತರ ಪ್ರದೇಶಗಳ ಕುರುಬರು ಸಹಿತ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಾರೆ.

ಇದರಿಂದ ಕುರುಬ ಸಮುದಾಯದ ಬದುಕಿನಲ್ಲಿ ಹಲವು ಪಲ್ಲಟಗಳಾಗುತ್ತವೆ. ತಾವು ವಲಸೆ ಹೋದ ಸಮುದಾಯದ ಪ್ರಭಾವ ವಲಸೆ ಹೋಗುವ ಕುರುಬರ ಸಂಸ್ಕೃತಿಯ ಮೇಲೆ ಆಗುತ್ತದೆ. ಕರ್ನಾಟಕದ ಕುರುಬ ಸಮುದಾಯದವರು ತಮ್ಮ ಉದರ ಪೋಷಣೆಗಾಗಿ ಕುರಿಗಳ ಸಂಗಡ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುವಾಗ ಆಯಾ ಪರಿಸರದ ಭಾಷೆ, ಸಂಸ್ಕೃತಿ ಅವರ ಮೇಲಾಗುತ್ತದೆ. ವಿಶೇಷವಾಗಿ ಬೆಳಗಾವಿ ಪರಿಸರದ ಕುರುಬರು ಬಳ್ಳಾರಿ, ರಾಯಚೂರು ಮತ್ತು ಕೊಲ್ಹಾಪುರ ಪ್ರದೇಶಗಳ ಕಡೆಗೆ ವಲಸೆ ಹೋದಾಗ ಅವರ ಮೇಲಾಗುವ ಆಯಾ ಪ್ರದೇಶದ ಭಾಷೆ, ಸಂಸ್ಕೃತಿ ಪ್ರಭಾವವು ಸಹಜವಾಗಿ ಆಗುತ್ತದೆ.

ಕುರುಬ ದೈವಗಳ ಮೇಲೆ, ಉದಾ: ಬೀರಪ್ಪ, ಇಟ್ಟಪ್ಪ, ಮಾಳಿಂಗರಾಯ, ಮೈಲಾರಲಿಂಗ ಉದ್ದವ್ವ, ಮಾಯವ್ವ ಮುಂತಾದ ದೈವಗಳು ಕುರುಬರು ವಾಸಿಸುವ ಸ್ಥಳಗಳಲ್ಲಿ ಅಥವಾ ಕೇರಿಗಳಲ್ಲಿ ನೆಲೆಗೊಂಡಿರುತ್ತವೆ. ಅವುಗಳ ಮೇಲೆ ಕುರುಬರು ಸೇರಿದಂತೆ ಅನ್ಯ ಸಮುದಾಯದವರು ಅಂದರೆ ಬೇಡರು, ಲಿಂಗಾಯತರು ಇತರ ಸಮುದಾಯದವರು ಅಪಾರವಾದ ನಂಬಿಕೆ ಮತ್ತು ಶ್ರದ್ಧೆ ಇಟ್ಟುಕೊಂಡಿರುತ್ತಾರೆ. ತಮಗೆ ಸುಖ-ದುಃಖಗಳು ಬಂದಾಗ ಕುರುಬರ ದೈವಗಳಿಗೆ ಮೊರೆಹೋಗುತ್ತಾರೆ. ಕುರುಬರ ಒಡೆಯರರಿಂದ ಪರಿಹಾರ ಕೇಳುತ್ತಾರೆ. ಆ ಪರಿಹಾರಗಳು ಒಡೆಯರರ ಅಥವಾ ಪೂಜಾರಿಗಳಿಂದ ಹೇಳಿಕೆಗಳ ಮೂಲಕ ಅಭಿವ್ಯಕ್ತವಾಗುತ್ತವೆ.

ಕುರುಬರ ಹೇಳಿಕೆಗಳಿಗೆ ತನ್ನದೇ ಆದಂತಹ ಗುರಿ-ಉದ್ದೇಶಗಳು ಇರುತ್ತವೆ. ಅವು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಜನತೆಯಲ್ಲಿ (ಸಮುದಾಯ) ನಂಬಿಕೆ, ಶ್ರದ್ಧೆ, ಸಹಕಾರ ಉಳಿಸಲು ಹಾಗೂ ವಿಚಾರ ಶಕ್ತಿ ಬೆಳೆಸಲು ಕುರುಬರ ಹೇಳಿಕೆಗಳು ತುಂಬ ನೆರೆವಾಗುತ್ತವೆ. ಸಮುದಾಯದಲ್ಲಿ ಆರೋಗ್ಯಪೂರ್ಣ ವ್ಯಕ್ತಿತ್ವ ರೂಪಿಸಲು ಜನರ ಕಷ್ಟ, ಸಂಕಷ್ಟ ನಿವಾರಿಸಲು ಅವು ತುಂಬ ನೆರವಾಗುತ್ತವೆ. ಹೇಳಿಕೆಗಳು ಸಮಾಜದ ಪ್ರಗತಿಗೆ ನೆರವಾದರೆ, ಅಲ್ಲಿರುವ ಭಾವನೆಗಳು ಜನತೆಯ ಶ್ರೇಯೋಭಿವೃದ್ಧಿಗೆ ಸಮರ್ಪಕವಾಗಿ ಸಾಗುವಂತೆ ಮಾಡುತ್ತವೆ. ಹೀಗೆ, ಹೇಳಿಕೆಗಳು ಸಮಾಜ-ಸಂಸ್ಕೃತಿ ಎಲ್ಲವೂ ಒಂದು ಇನ್ನೊಂದಕ್ಕೆ ಪರಸ್ಪರ ಅವಲಂಬಿಸಿ ಕಾರ್ಯನಿರ್ವಹಿಸುತ್ತವೆ. ಈ ಎಲ್ಲ ಪ್ರಕ್ರಿಯೆಗಳು ಸಮಾನವಾಗಿ ಸಾಗಿದಾಗ ವ್ಯಕ್ತಿ ದೈಹಿಕವಾಗಿ, ಸಾಮಾಜಿಕವಾಗಿ, ಬೌದ್ಧಿಕವಾಗಿ ವಿಕಾಸಗೊಳ್ಳುತ್ತಾನೆ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ.

ಮೇಲಿನ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಹೇಳಿಕೆಗಳ ಸಾಮಾಜಿಕ ನೆಲೆಗಳನ್ನು ಹಾಗೂ ಅವುಗಳ ಸಾಮಾಜಿಕ ಸ್ವರೂಪವನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚೆ ಬೆಳೆಸಲಾಗಿದೆ. ಹೇಳಿಕೆಗಳು ಜನರ ಗುಂಪಿನಿಂದ ಸಾಮಾಜಿಕ ಸಂಬಂಧ ಬೆಳೆಸುತ್ತವೆ. ಅವರಲ್ಲಿ ಪರಸ್ಪರ ಅರಿವು, ಸಹಕಾರ ಕೊಟ್ಟು ಸಂಬಂಧಗಳನ್ನು ಗಟ್ಟಿಗೊಳಿಸುತ್ತವೆ. ಹೇಳಿಕೆಗಳ ಸಾಮಾಜಿಕ ನೆಲೆಗಳನ್ನು ಈ ಕೆಳಗಿನಂತೆ ಅಧ್ಯಯನದ ಅನುಕೂಲಕ್ಕಾಗಿ ವರ್ಗೀಕರಿಸಲಾಗಿದೆ.

**ಸಂಸಾರ :** ಕುರುಬರ ಬಹುಪಾಲು ಹೇಳಿಕೆಗಳು ಕುಟುಂಬ, ಸಮಾಜ, ಸಂಸ್ಕೃತಿಯ ಸುತ್ತ ಹೆಣೆಯಲ್ಪಟ್ಟಿವೆ. ಅಂದರೆ ಸಂಸಾರದ ಹಲವು ಸಂಗತಿಗಳ ಸ್ವರೂಪ ಮತ್ತು ಪರಿಹಾರ ಆ ಹೇಳಿಕೆಗಳ ಹಿಂದಿರುವ ಆಶಯವಾಗಿದೆ. ಕುಟುಂಬವು ಸಾಮಾಜಿಕ ವ್ಯವಸ್ಥೆಗಳಲ್ಲಿ ಅತ್ಯಂತ ಪ್ರಮುಖವಾದುದು. ಅದು ಸಾಮಾಜಿಕ ಘಟಕಗಳಲ್ಲಿ ಒಂದು. ಕುಟುಂಬಗಳಲ್ಲಿ ಅದೊಂದು ಬಂಧುತ್ವ ವ್ಯವಸ್ಥೆಯು ಹೌದು. ಕುಟುಂಬಗಳಲ್ಲಿ ಹಲವು ಕಷ್ಟ-ನಷ್ಟಗಳು ಕಂಡು ಬರುತ್ತವೆ. ಆಗ ಕುಟುಂಬದ ಸದಸ್ಯರು ದೈವಗಳಿಗೆ ಮೊರೆಹೋಗುತ್ತಾರೆ. ಉದಾ: ಈ ಕುರಿತು ಚಿಂಚಲಿ ಮಾಯವ್ವನ ಮತ್ತು ಕಡಬಿ ಇಟ್ಟಪ್ಪನ ಹೇಳಿಕೆಗಳು ಈ ರೀತಿಯಾಗಿದೆ :

"ಬ್ಯಾಡ ಬ್ಯಾಡ ಏ ತಮ್ಮ ಉರಿ ಕಿಚ್ಚ ಬಿಂದಾವ
ತಡಕೊಂಡಷ್ಟು ಸುಖಾ ಐತಿ ಚಿಂಚಲಿ
ಮಾಯವ್ವ ಹೇಳ್ಯಾಳ"[೧]

"ತಂಗಿ ಚೆಂದಾಗಿ ಕೇಳವ್ವ
ಹಾಲು ಮೊಸರು ಹೈನು
ಗಡಿಗ್ಯಾಗ ಇಲ್ಲ
ಇದು ದೂರದ ಮಾತು ಅಲ್ಲ ಮನಿಗೆ
ಹೋಗಿ ಚಂದಾಗಿ ಬಾಳೆ ಮಾಡು
ಮನಿ ಮನಿ ತಿರಗಬ್ಯಾಡ
ಕಾಲಾಗ ನಾಯಿ ಗೆರಿ ಇರಬಾರದು
ಕಡಿಬಿ ಇಟ್ಟಪ್ಪ ಸಾರಿ ಹೇಳ್ಯಾನ"[೨]

"ಹೆಂಡತಿ ಒಂದ ಕಡೆ, ಗಂಡ ಒಂದ ಕಡೆ
ಹುಂಜದ ಕಾಳಗ ಹಾಗಲೇಡಿರಲೇ
ಜ್ವಾಕಿಲೇ ನಡಿರಿಲೇ
ಅವಕಾಶ ಕೊಡಬ್ಯಾಡರಲೇ
ಹೊಂದಕೊಂಡ ಹೋಗ್ರಿ"[೩]

"ಇದು ನರ ಜನ್ಮ ಗರವು ಇರಬಾರದು
ತಿಳಿದು ನಡಿರಿಲೇ
ಸೆಟದ ಹೋಗಬ್ಯಾಡರಿ
ಬಗ್ಗಿ ಹೋಗರಿ
ಅರಿವಿನೊಳಗ ಅರಿವು ಇರಬೇಕ"[೪]

ಕುಟುಂಬಗಳನ್ನು ಸಾಮಾನ್ಯವಾಗಿ ಅವಿಭಕ್ತ ಮತ್ತು ವಿಭಕ್ತ ಕುಟುಂಬಗಳೆಂದು ವಿಗಂಡಿಸಬಹುದು. ಅಲ್ಲಿ ಗಂಡ-ಹೆಂಡತಿ, ಅತ್ತೆ-ಮಾವ ಮತ್ತು ಮಕ್ಕಳು ಬಂಧು-ಬಾಂಧವರು ಒಂದೇ ಸೂರಿನಡಿ

ವಾಸಿಸಿ, ಜೈವಿಕ ಹಾಗೂ ಸಾಮಾಜಿಕ ಸಂಬಂಧ ಹೊಂದಿರುತ್ತಾರೆ. ಕೆಲವೊಮ್ಮೆ ಸಂಸಾರಗಳಲ್ಲಿ ವಿಘಟನೆ ಕಂಡುಬಂದಾಗ ಸಂಸಾರದಲ್ಲಿ ಏರುಪೇರಾಗುವುದು ಸಹಜ. ಆಗ ಸಂಸಾರದ ಸದಸ್ಯರು ಅವುಗಳ ಪರಿಹಾರಕ್ಕಾಗಿ ದೈವಿಶಕ್ತಿಗೆ ಮೊರೆಹೋಗುತ್ತಾರೆ. ಎಂಬುದನ್ನು ಗಮನಿಸಬೇಕಾದ ಸಂಗತಿ.

ವಿಶೇಷವಾಗಿ ಕುರುಬರ ದೈವಗಳು ಗ್ರಾಮೀಣ ಸಮುದಾಯದ ಬದುಕಿಗೆ ಅನಿವಾರ್ಯ. ಜನತೆಯ ನಡೆ–ನುಡಿ–ಭಾಷೆ–ಸಂಸ್ಕೃತಿ–ನಾಗರಿಕತೆ–ನಂಬಿಕೆ ಆಚರಣೆ–ಆಚಾರವಿಚಾರಗಳು ಇವುಗಳು ವಿಕಾಸಗೊಳ್ಳುವಲ್ಲಿ ಹೇಳಿಕೆಗಳು ಪ್ರಮುಖ ಪಾತ್ರವಹಿಸುತ್ತವೆ. ಸಂಸಾರ ಒಂದು ಬಲೆಯಂತೆ, ಆ ಬಲೆಯೊಳಗೆ ಸಿಕ್ಕ ಇಲಿ ವಿಲಿವಿಲಿ ಒದ್ದಾಡಿ ಸಾಯುವವರೆಗೂ ಅದಕ್ಕೆ ಬಿಡುಗಡೆ ಇಲ್ಲ. ಸಂಸಾರದಲ್ಲಿ ಸ್ವಲ್ಪ ತಪ್ಪು ಮಾಡಿದರೆ ಘನುಷ್ಯ ಸಾಯುವವರಗೆ ಆ ವಿಧಿ ಬಿಡುವುದೆ ಇಲ್ಲ. ಮನಸ್ಸಿಗೆ ತೀವ್ರ ಕಳವಳ ಉಂಟಾಗುತ್ತದೆ. ಆಗ ಒಡೆಯರರು ಸಂಸಾರವನ್ನು ಪ್ರಾಣಿಗಳಿಗೆ ಹೋಲಿಸುತ್ತಾರೆ.

“ಕಪ್ಪಿಹಂಗ ವಟ ವಟ ಮಾಡಬ್ಯಾಡರಲೇ
ಹಿಟ್ಟ ಮಾರಿ ತಿನ್ನಬ್ಯಾಡರಿ
ರಟ್ಟಿ ಮನಿಸಿ ದುಡಿರಿ, ಜ್ವಾಳ ಬೆಳದ ತಿನ್ನರಿ
ಯಾರದು ಅಂಜಿಕಿ ಇಲ್ಲ
ದುಡದ ತಿಂದ್ರ ಯಾರಪ್ಪನ
ಅಂಜಿಕಿ ಇಲ್ಲ
ಶಾಪ ಬರುದಿಲ್ಲ ಸರ್ಪದ ಹುನ್ನ ಮೈಮ್ಯಾಲ
ಆಗುದಿಲ್ಲ”[೫]

ಅಜ್ಞಾನದಿಂದ ಹಾವಿನ ನೆರಳೆಂದು ತಿಳಿಯದೆ ಅದರಲ್ಲಿಯೇ ಆಶ್ರಯ ತೆಗೆದುಕೊಳ್ಳುವ ಅಸಹಾಯಕ ಪ್ರಾಣಿ ಕಪ್ಪೆಯಂತೆ ತಾವು ಈ ಸಂಸಾರಕ್ಕೆ ಬಂದು ಪಶ್ಚಾತಾಪ ವ್ಯಕ್ತಪಡಿಸುತ್ತಾರೆ. ಈ ಸಂಸಾರದ ಕಷ್ಟ, ನಷ್ಟಗಳಿಂದ ಬಿಡುಗಡೆ ಹೊಂದಿ ಕುರುಬರ ದೈವಗಳು ಒಲವನ್ನು ಸಾಧಿಸುವ ಕಿಂಕರಭಾವ ಅವರ ಹೇಳಿಕೆಗಳ ಹಿಂದಿರುವ ತಾತ್ಪರ್ಯವಾಗಿದೆ. ಭಕ್ತ, ದೈವದಲ್ಲಿ ಕಿಂಕರಭಾವದಿಂದ ಮೊರೆಯಿಡುತ್ತಾರೆ.

“ನಾಳೆ ಅಮಾಸಿ ದಿನ ಬರ್‍ರಿ
ನಾ ನುಡಿ ಹೇಳ್ತೀನಿ
ಅದೇನ ಕೇಳತಿರಿ ಕೇಳ್ರಿ ಕೌಲ ಕಟ್ರೀ

ಮನಸ್ಸಿನ್ಯಾಗ ಇದ್ದದ್ದ ಆಗತೈತಿ
ಭಂಡಾರ ತಗೊಂಡು ಮನಿಗಿ ಹೋಗ್ರಿ
ಬಂದ ದುಃಖ ಬಂದ ಹಾದ್ಯಾಗ ಹೊಕ್ಕಾವ[1]

ಸಂಸಾರದ ಕಷ್ಟ, ನಷ್ಟಗಳನ್ನು ಹೋಗಲಾಡಿಸುವ ಪರಿಹರಿಸುವ ಶಕ್ತಿ ಈ ಹೇಳಿಕೆಗಳಲ್ಲಿವೆ. ಮನುಷ್ಯ ಅರಿತು ಅರಿಯದೆಯೋ ಸಂಸಾರದ ಬಲೆಯಲ್ಲಿ ಸಿಕ್ಕಿಕೊಂಡಿರುತ್ತಾನೆ. ಒಂದರ್ಥದಲ್ಲಿ ಅದು ಕಾಲಿಗೆ ಕಟ್ಟಿದ ಗುಂಡು, ಕೊರಳಿಗೆ ಕಟ್ಟಿದ ಬೆಂಡು ಇದ್ದ ಹಾಗೆ. ಸಂಸಾರ ಬಂಧನದಿಂದ ಮುಕ್ತರಾಗಲು ಹೇಳಿಕೆಗಳ ಮೇಲಿನ ಶಬ್ದ ಚಿತ್ರಣಗಳನ್ನು ನೆನಪಿಸಿಕೊಳ್ಳಬಹುದು. ಮನುಷ್ಯ ಇಕ್ಕಟ್ಟಿಗೆ ಸಿಲುಕಿದಾಗ ದೈವದಿಂದಲೇ ಸಾಧ್ಯವೆಂಬುವುದು ಜನತೆ ನಂಬಿರುವುದು ಕಂಡುಬರುತ್ತದೆ. ಸಂಸಾರದ ಮೋಹ, ಮಾಯೆಗಳ ಒಂದು ಭ್ರಮಾತ್ಮಕ ಕಲ್ಪನೆ ಆದರೆ ಅವು ಒಮ್ಮೊಮ್ಮೆ ಪ್ರಾಣಸಂಕಟಕ್ಕೂ ಕಾರಣವಾಗುತ್ತವೆ. ತಾವು ಸಿಲುಕಿಕೊಂಡ ಕಷ್ಟಗಳನ್ನು ಭಕ್ತ ದೇವರಲ್ಲಿ ನಿವೇದಿಸಿಕೊಳ್ಳುತ್ತಾನೆ. ಉದಾಹರಣೆಗೆ:

"ಕದಲ ಬದಲ ಕಂಚಿ ಬದಲ
ಮ್ಯಾಲಿಂದ ಮಾಯಣ್ಣ ಕಾಣತಿದ್ದ
ಬೆಂಕಿ ಮಜಲ ಸುಟ್ಟ ಹೋಗಬ್ಯಾಡರಲೇ
ಹಿಂದ ಸರಿದು ಮಾತನಾಡಿರಿ
ದೀಪಾ ಆರಸರಿ[2]

ಸಂಸಾರವನ್ನು ಮಾಯದ ದೀಪಕ್ಕೆ ಹೇಳಿಕೆಕಾರ ಹೋಲಿಸಿದ್ದಾನೆ. ಅತ್ಯಂತ ಸಂವೇದನಾಶೀಲ ರೂಪಕವಿದು. ಮನುಷ್ಯನ ಕ್ಷಣಿಕ ಗುಣವನ್ನು ಸಮರ್ಥವಾದ ಭಾಷೆಯಲ್ಲಿ ಹೇಳಿರುವುದು ಭಾವತೀವ್ರತೆಗೆ ಹೆಚ್ಚು ಒತ್ತು ಕೊಟ್ಟಿದೆ. ಭಾವ ಪೂರ್ಣತೆ ತುಂಬಿದ (ಹೇಳಿಕೆ ಸಂದರ್ಭದಲ್ಲಿ) ಒಡೆಯರರು ಹೃದಯ ಸ್ಪಂದನಗಳಿಗೆ ಅವರು ಬಳಸಿದ ಭಾಷೆ, ಜೀವ ತುಂಬುತ್ತದೆ. ಆಗ ಡೊಳ್ಳಿನ ಸಪ್ಪಳ ಮುಗಿಲು ಮುಟ್ಟಿರುತ್ತದೆ. ಅವರ ಮಟ್ಟಿಗೆ ಆ ಸನ್ನಿವೇಶ ಭಾವಾವೇಷದ ಅತಿರೇಕವಾಗಿರುತ್ತದೆ. ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ. ಸಂಸಾರ ವೆಂಬುದು ಹಾವು ಮತ್ತು ಹಾವಡಿಗರ ಸ್ನೇಹದಂತೆ ಸಂಸಾರದ ಆಕರ್ಷಣೆ ಕೇವಲ ಹಾವು ಮತ್ತು ಹಾವಾಡಿಗರ ಸ್ನೇಹದಷ್ಟು ಕ್ಷಣಿಕ.

"ಸಂಸಾರದ ಅಡವಿಯಲ್ಲಿ ಹುಲಿ ಇದೆ, ಕರಡಿ ಇದೆ
ಕುರಿ ಇದೆ, ಆಡಿದೆ, ತಿಳಿಕೊಂಡ ಹೋಗ್ರೀ
ಗಿಡದಾಗ ಕುಂತ ಬಡ್ಡಿ ಕಡಿಕ್ಯಾಕ ಹತ್ತಿರೋ
ಮಡ್ಡ ಮಕ್ಕಳ್ರ್ಯಾ, ಕೊಡ್ಲಿ ಬಿಟ್ಟ ಹಣ್ಣ ಹರಕೊಳ್ಳಿರಿ"[3]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ ಗಿಡ, ಬಡ್ಡಿ, ಬೇರು, ಚಿಗುರು, ಹುತ್ತ, ಕಾಡಿನ ಚಿತ್ರಗಳು ಒಡೆಯರ ಹೇಳಿಕೆಗಳಲ್ಲಿ ಬದುಕಿನ ಘೋರತೆಯನ್ನು ಎದುರಿಸಿ ಯಶಸ್ವಿಯಾಗಿ ನಿಲ್ಲುವವನೇ ನಿಜವಾದ ಮನುಷ್ಯ ಎಂಬ ಮನೋಭಾವದಲ್ಲಿ ಅವನ ವ್ಯಕ್ತಿತ್ವದ ಗಟ್ಟಿತನವನ್ನು ನಿರ್ಭಯ ವ್ಯಕ್ತಿತ್ವದ ಮಹೋನ್ನತ ಚಿತ್ರಣವನ್ನು ಕಾಣುತ್ತೇವೆ. ಸಂಸಾರವೆಂಬುದು ಒಂದು ಬಲೆಯಂತೆ, ಘೋರ ಅರಣ್ಯದಂತೆ, ಸಮುದ್ರದಂತೆ, ಅಲ್ಲಿ ಸುಖ, ಸಂತೋಷಗಳು ಎರಡೂ ಅಡಗಿರುತ್ತವೆ. ಅವುಗಳನ್ನು ಮನುಷ್ಯ ಎಚ್ಚರಿಕೆಯಿಂದ ನಿಭಾಯಿಸಬೇಕಾಗುತ್ತದೆ. ಎಂಬುದು ಆ ಹೇಳಿಕೆಗಳ ಹಿಂದಿರುವ ತಾತ್ಪರ್ಯವಾಗಿದೆ.

**ಸಿರಿತನ-ಬಡತನ :** ಸಮಾಜದಲ್ಲಿ ಮನುಷ್ಯ ಸಂಬಂಧಗಳು ಒಂದು ಇನ್ನೊಂದಕ್ಕೆ ಬೆಸೆದುಕೊಂಡಿರುತ್ತವೆ. ಮನುಷ್ಯ ಹುಟ್ಟಿನಿಂದ ಸಾಯುವವರೆಗೆ ಸಮಾಜದಲ್ಲಿ ಇರಬೇಕಾಗುತ್ತದೆ. ಆದಕಾರಣ ಸಮಾಜದ ಆಗು ಹೋಗುಗಳಿಗೆ ಸ್ಪಂದಿಸಬೇಕು. ಸಮಾಜದಲ್ಲಿ ಹಲವು ಪ್ರಕ್ರಿಯೆಗಳು ಇರುತ್ತವೆ. ಸ್ಪರ್ಧೆ, ಸಂಘರ್ಷ, ಹೊಂದಾಣಿಕೆ, ಸಹಕಾರ ಇವು ಸಮಾಜದಲ್ಲಿ ಇರುತ್ತವೆ. ಇವುಗಳಲ್ಲಿ ಸ್ವಲ್ಪ ಏರು-ಪೇರು ಕಂಡುಬಂದಾಗ ಭಿನ್ನಾಭಿಪ್ರಾಯಗಳು ಗೋಚರಿಸಿದಾಗ, ಸಮಾಜದ ಸದಸ್ಯರು ದೈವಗಳಿಗೆ ಮೊರೆಹೋಗುತ್ತಾರೆ. ಕುಟುಂಬದಲ್ಲಿ ಸಿರಿತನ, ಬಡತನ ಬರುವುದು ಸಹಜ. ಸಿರಿತನ ಬಂದಾಗ ಹಿಗ್ಗಬಾರದು; ಬಡತನ ಬಂದಾಗ ಕುಗ್ಗಬಾರದು ಎಂಬ ಜನಪದ ಗಾದೆ ಎಲ್ಲರಿಗೂ ಎಲ್ಲ ಕಾಲಕ್ಕೂ ಅನ್ವಯವಾಗುತ್ತದೆ. ಎಂಬುದು ನಿತ್ಯ ಸತ್ಯವಾಗಿದೆ. ಇದಕ್ಕೆ ಕುರುಬರ ಹೇಳಿಕೆಗಳಲ್ಲಿ ಸಾಕಷ್ಟು ಪುರಾವೆಗಳು ಸಿಗುತ್ತವೆ. ಉದಾಹರಣೆ:

"ಸಂಸಾರವೆಂಬುದು ಬಲು ಕಷ್ಟ
ಇದು ಮೂರು ದಿನದ ಸಂತೆ
ಸೂಳೆ ಮಕ್ಕಳಿರ್‍ಯಾ ನೋಡಿ ನಡಿರ್‍ರೆ
ಒಮ್ಮೆ ಸಿಕ್ಕರೆ ಹೊಳ್ಳಿ ಬರ್ರುದಿಲ್ಲ
ಕಳಕೊಂಡ ಹುಡಕ್ಯಾಡಬ್ಯಾಡ್ರಿ
ಒಮ್ಮೆ ಹ್ವಾದದ್ದು ಮತ್ತ ಬರೊದಿಲ್ಲ
ತಿಳಕೊಂಡ ನಡಿರ್ರಿಲೆ, ಮೂರು ದಿನ ಆಗೇತಿ
ಮೂರು ದಿನ ಹೋಗೈತಿ, ಮೂರು ದಿನ ಉಳಿದೈತಿ
ಇದ್ದದ್ದ ಕಳಕೊಂಡ ಜ್ವಾಕಿಲಿ ಹೋಗ್ರಿ"

ಈ ಹೇಳಿಕೆಯನ್ನು ಗಮನಿಸಿದಾಗ ಬದುಕಿನ ಬಗೆಗೆ ತೀವ್ರ ಎಚ್ಚರಿಕೆ ಇದೆ. ಬಡತನ ಮತ್ತು ಸಿರಿತನಗಳು ಶಾಶ್ವತ ಅಲ್ಲ. ಸುಖ-ದುಃಖಗಳು ಬದುಕಿನಲ್ಲಿ ಹೆದ್ದೊರೆಯಾಗಿ ಬರುತ್ತವೆಯೇ ಹೊರತು ಸುಮ್ಮನೆ ಇಲ್ಲದಕ್ಕೆ ಆಸೆ ಮಾಡಿ, ಅಶಾಂತಿಯನ್ನು ಸೃಷ್ಟಿಸಬಾರದು ಎಂಬ ಆರೋಗ್ಯಕರ

ನಿಲುವನ್ನು ಬೆಳೆಸಿದ ಒಡೆಯರರ ವ್ಯಕ್ತಿತ್ವ ಅವರ ಹೇಳಿಕೆಗಳ ಸಾಂಸ್ಕೃತಿಕ ಮಹತ್ವ ಅನುಕರಣೀಯವಾದುದು. ಶ್ರೀಮಂತಿಕೆಯನ್ನು ಪಡೆಯುವುದುಕ್ಕಿಂತ ಬೀರಪ್ಪನ ಅಂದರೆ ಹಾಲುಮತ ದೈವಗಳ ಕೃಪೆ ಯಾವಾಗಲೂ ಬೇಕೆಂದು ದೈವತ್ವದ ನಿಲುವಿಗೆ ಏರುವುದು ಶ್ರೇಷ್ಟ ಹಾಗೂ ದೈವತ್ವದ ಮೂಲಕ ಬದುಕಿಗೆ ಎಲ್ಲವೂ ಸಾದ್ಯ. ಆಗ ಅಂದರೆ ನಂಬಿಕೆ ಇಟ್ಟಾಗ ಕೊರತೆಗಳು ತಾನಾಗಿಯೇ ನಿವಾರಣೆಯಾಗುತ್ತವೆ. ಎಂಬ ಸರ್ವಕಾಲಿಕ ತತ್ವಗಳನ್ನು ಕುರುಬರ ಹೇಳಿಕೆಗಳು ಬಿಂಬಿಸುತ್ತವೆ.

“ಬೀರಪ್ಪನ ಜ್ಯಾತ್ರ್ಯಾಗ ಆಳು ಮಕ್ಕಳು ಉಂಡ ಮನ್ಯಾಗ
ಹಾಲಿನ ಹೊಳಿ ಸುರಿತತಿ ಹಾಲಹರವಿ ತುಂಬತೈತಿ
ಅಡಕೀಲ ಗಡಿಗ್ಯಾಗ ಅನ್ನ
ಬೀಳತ್ರೈತಿ
ಹೆಂಗರ್ರೆ ಜ್ಯಾಕೀಲಿ ನಡಿರಿ”[೧೦]

“ಮನ್ಯಾನ ದೇವರ ಮರಗತೈತಿ ಗುಡ್ಡದ ದೇವರಿಗೆ
ಕಾಯಿ ಒಡಿತಿರಿ, ಊರಾನ ದೇವರ ಮರತಿರಿ
ಮೊದಲ ನಾಕ್ ಮಂದ್ಯಾಗ ಬೇಕಾಗರಲೇ
ಸೆಟದ್ ನಡಿಬ್ಯಾಡರಿ
ಊರ ಮರಿಬ್ಯಾಡ್ರಿ, ಸಮಾಜ ಮರಿಬ್ಯಾಡ್ರಿ
ಗೊರಗುದ್ದಿ ಇಟ್ಟಪ್ಪ ಹೇಳ್ಯಾನ”[೧೧]

ದೇವರ ಕೃಪೆ ಕಡಗಣಿಸಿ ‘ನಾನು’ ಎಂಬ ಅಹಂಭಾವ ಇರಬಾರದು. ಮನುಷ್ಯ ಸಮಾಜದಲ್ಲಿ ಇರಬೇಕು. ಸಮಾಜ ಶಾಸ್ತ್ರಜ್ಞರು ಹೇಳುವಂತೆ ಮಾನವ ಸಮಾಜ ಜೀವಿ. ಸಮಾಜದಲ್ಲಿ ಹುಟ್ಟಿ ಸಮಾಜದಲ್ಲಿ ಬೆಳೆದು ಅಲ್ಲಿಯೇ ಅಂತ್ಯ ಕಾಣುವುದು. ಈ ಸಂದರ್ಭದಲ್ಲಿ ವಿವಿಧ ಪ್ರಕ್ರಿಯೆಗೆ ಒಳಗಾಗುವುದು ಕೆಲವು ವೇಳೆ ಕ್ರಿಯಾಶೀಲ ವ್ಯಕ್ತಿಯಾಗಿ ಕಾಣಿಸಿಕೊಂಡರೆ ಮತ್ತೆ ಕೆಲವು ವೇಳೆ ನಿಷ್ಕ್ರೀಯನಾಗುವನು. ಆಂತರಿಕ ತುಮುಲಕ್ಕೆ ಒಳಗಾದಾಗ ಸ್ಪರ್ಧೆ ಹಾಗೂ ಸಂಘರ್ಷಕ್ಕೆ ಒಳಗಾಗುವನು. ಸಂತೋಷದಿಂದ ಇದ್ದಾಗ ಪರಿಸರಕ್ಕೆ ಹೊಂದಿಕೊಂಡು ಅಂದರೆ ಸಮಾಜಕ್ಕೆ ಹೊಂದಿಕೊಂಡು ತನ್ನ ದೈವದ ಮುಂದೆ (ಊರ ಹಿರಿಯರ ಒಂದು ಸಮೂಹ) ಹಂಚಿಕೊಳ್ಳಬೇಕು. ತನ್ನ ಸಹಕಾರ, ಸೌಜನ್ಯ, ಹೊಂದಾಣಿಕೆ ಉದ್ದಕ್ಕೂ ದೈವದೊಡನೆ ತೋರ್ಪಡಿಸಬೇಕು. ಆ ಶ್ರದ್ಧೆ ಒಳಗಿನಿಂದ ಬರಬೇಕು. ಹೀಗೆ ಸಮುದಾಯದ ವ್ಯಕ್ತಿ ಸಮಾಜದಲ್ಲಿ

ವ್ಯಕ್ತಪಡಿಸುವ ಕ್ರಿಯೆಗೆ ಒಳಗಾಗಿ ವಿವಿಧ ರೂಪಗಳಲ್ಲಿ ಭಾವನೆ ವ್ಯಕ್ತಪಡಿಸುವ ಕ್ರಮ ಹೇಳಿಕೆಗಳಲ್ಲಿ ಅಡಗಿರುತ್ತದೆ.

"ಶ್ರೀಮಂತಿಕೆ ಬಂದ್ಯೆತಂತ ಗುರು ಹಿರ್‍ಯಾರನ
ಮರಿಬ್ಯಾಡ್ರಿ, ತಂದೆ ತಾಯಿ ಮರಿಬ್ಯಾಡ್ರಿ
ಶ್ರೀಮಂತಿಕೆ ಬಡತನ ಮಗ್ಗಲ ಮುಳ್ಳ
ಇದ್ದಾಂಗ ನೆಳ್ಳ ಬಿಸಿಲ ಇದ್ದಂಗ
ಬಿಸಿಲು–ಬೆಳದಿಂಗಳು
ಶಾಶ್ವತವಲ್ಲ
ಏರಿದ ಹೊತ್ತ ಇಳ್ಯಾಕ ಬೇಕು ಜ್ವಾಕೀಲಿ
ನಡಿರ್‍ರೇ"[೧೨]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ 'ತುಂಬಿದ ಹರವಿಗೆ ಕಲ್ಲು ಒಗೆದ ಹಾಗೆ' ಸುಖ ದುಃಖಗಳು ಬಟಾ ಬಯಲಾಗುತ್ತವೆ. ನೀರೆಲ್ಲ ಚೆಲ್ಲಿ ಸೇರಿ ಹೋಗುತ್ತವೆ. ಶ್ರೀಮಂತಿಕೆಯೂ ಸಹ ಕೈಬಿಟ್ಟು ಹೋಗುತ್ತದೆಂಬ ಶಾಶ್ವತ ಸತ್ಯವನ್ನು ಸಾರುವುದರ ಮೂಲಕ ಜನರು (ಸಮುದಾಯದವರು) ಶ್ರೀಮಂತಿಕೆಗೆ, ಹಣಕಾಸಿನ ವ್ಯಾಮೋಹಕ್ಕೆ, ಸಾಮಾಜಿಕ ಸ್ಥಾನಮಾನಕ್ಕೆ, ಚಿಂತೆ ಮಾಡಿ ಒದ್ದಾಡುವುದಕ್ಕಿಂತ ದುಡಿಮೆಯಿಂದ ತಾನು ಸಂಪಾದಿಸಿದರಲ್ಲಿ ಸಂತೃಪ್ತವಾಗಿ ಇರಬೇಕು. ಹೆಚ್ಚಿನ ಆಶೆ ಇಲ್ಲದಿದ್ದುರು ಕೂಡ ಕೆಲವೊಮ್ಮೆ ಸಾಮಾಜಿಕ ಸ್ಥಾನ ಮಾನಗಳಾಗಿ ವೃಥಾ ಚಿಂತಿತರಾಗದೆ ತೃಪ್ತಿ ಕಾಣುವ ಮನೋಭಾವ ಬೆಳೆಯಬೇಕು.

"ನೀರಾಗ ಬತ್ತಿ ಉರಿತೈತಿ
ಒಂದ ಹೋಗಿ ಒಂಭತ್ತ ಆಗತೈತಿ
ಅಡಿಗಿ ಮನ್ಯಾಗ ಕುಂತೈತಿ
ನಡಮನ್ಯಾಗ ಮೆಣಸ ಅರಿಬ್ಯಾಡರಲೇ
ಇಟ್ಟಪ್ಪನ ನಂಬಿ ಬಾಳೆ ಮಾಡರಿ
ಹುಶ್ಯಾರದಿಂದ ನಾಕ ಮಂದಿಗೆ ಬೇಕಾಗಿ
ಬಾಳೆಮಾಡರಿ"[೧೩]

"ರೊಕ್ಕದಾಗ ರುಚಿ ಇಲ್ಲ
ರೊಕ್ಕ ಬಾಳ ಇದ್ರ ಎಲ್ಲರಿಗೂ

ಅಳುಕಿ ನಡಿತೀರಿ ನಿಧಾನ ತಪ್ಪಿ
ಕೌಳಹತ್ತಿ ಬೀಳ್ತಿರಿ ನಿರಾಸೆ
ನಿರ್ಭಯದಿಂದ ಇರಬೇಕರೆಲೆ
ಆಗ ಮನಸಿನ್ಯಾಗ ಇದ್ದದ್ದ ಆಕ್ಕೈತಿ"[೧೪]

"ಸೋಸಿ ನಡಿರಿಲೆ ಸಮಾಜ ಬಿಡಬ್ಯಾಡ್ರಿ
ಧರ್ಮ ಬಿಡಬ್ಯಾಡ್ರಿ, ನೀತಿ ಮರಿಬ್ಯಾಡ್ರಿ
ತುತ್ತ ಕೊಟ್ಟ ತಾಯಿನ ಮರಿಬ್ಯಾಡ್ರಿಲೇ
ಬೆಳಸಿದ ತಂದಿ ಮರಿಬ್ಯಾಡರಿ
ಕಲಿಸಿದ ಗುರುವಿನ ಮರಿಬ್ಯಾಡರಿ
ಶ್ರೀಮಂತಿಕೆ ಬಡತನ ಬೆಳದಿಂಗಳ ಇದ್ದಾಂಗ
ಇಂದ ಹೊಕ್ಕತಿ ನಾಳೆ ಬರತೈತಿ[೧೫]

ಮೇಲಿನ ಹೇಳಿಕೆಗಳು ಬದುಕಿನ ಅದರಲ್ಲಿಯೂ ಶ್ರೀಮಂತಿಕೆ, ಬಡತನದ ಸ್ವರೂಪವನ್ನು ಅರ್ಥಪೂರ್ಣವಾಗಿ ಹೇಳಿವೆ. ಸಮಾಜದಲ್ಲಿ ಕೆಲವರಿಗೆ ತಿಳವಳಿಕೆ ಇದ್ದಾಗಲೂ ಬೇರೆಯವರಿಗೆ ತಿಳಿಯದಂತೆ ಹಣ ಬಂದರೆ ಬರಲಿ ಎನ್ನುವ ನೀರಿಕ್ಷೆಯನ್ನು ಇಟ್ಟುಕೊಂಡಿರುತ್ತಾರೆ. ಹೇಳಿಕೆಗಳು ಅಂತವರ ಅಂತರಂಗವನ್ನು ಎಚ್ಚರಿಸುವಂತೆ ತೀಕ್ಷ್ಣವಾಗಿ ನುಡಿಯುತ್ತಾರೆ.

"ಬೀರಪ್ಪ ಖರೆ ಹೇಳತಾನ
ಬೀರಪ್ಪನ ಮಾತ ಗಚ್ಚಿನ್ಯಾಗ ಗೂಟ ಬಡಿದಂಗ
ಮೊದಲ ನಾವು ಶುದ್ಧ ಇದ್ದ ಇನ್ನೊಬ್ಬರಿಗೆ
ಹೇಳಬೇಕ, ಬೆಳ್ಳಿ ಬಟ್ಲ ಒಡೀತದ
ಮುತ್ತಿನ ರಾಗಿ ಒಡಿತದ ಊರ ಕೆಟ್ಟ
ಹೊಕ್ಕತೈ ಮೂರು ಮೂಲಿ ಕೂಡಿ ಬರುದರೊಳಗ
ಬಂದ ಹೋಗರಿಲೇ[೧೬]

ಜನರು ಸಿರಿತನ ಮತ್ತು ಬಡತನ ಬಂದಾಗ ಸಮತೋಲನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳಬೇಕು. ಅಸಗತ್ಯವಾಗಿ ಸಮಸ್ಯೆಗಳನ್ನು ಮೈಮೇಲೆ ಹಾಕಿಕೊಳ್ಳಬಾರದು. ಭಯವೂ ಇರಬೇಕು. ಆಗ ಮಾತ್ರ ಮನುಷ್ಯ ದೈವಕ್ಕೆ ಶರಣನಾಗುತ್ತಾನೆ ಎಂಬ ನಿಲುವನ್ನು ಹಾಗೂ ಸಮಾಜದಲ್ಲಿ ಹೊಂದಿಕೆ ಬಾಳನ್ನು ಹೇಳಿಕೆಗಳು ಸ್ಪಷ್ಟಪಡಿಸುತ್ತವೆ.

"ಅಪ್ಪಗ ಅಪ್ಪಾ ಅನ್ನರಿಲೇ
ಕಾಲಮಾನ ಕೆಟ್ಟತಿ
ಶ್ರೀಮಂತಿಕೆ ಬಂದೈತಿ ಅಂತ
ಕಣ್ಣ ನೆತ್ತಿಮ್ಯಾಲ ಬರಬಾರದು
ಹಾದಿ ಬಿಟ್ಟ ನಡಿಬ್ಯಾಡರಲೇ
ಬದುಕಿನ್ಯಾಗ ಸುಖ ಇಲ್ಲ[೧೭]

ಇಂತಹ ಹೇಳಿಕೆಗಳ ಹಿಂದೆ ನಿರ್ಧಿಷ್ಟವಾದ ಆಲೋಚನಾಕ್ರಮ ಇದೆ. ಹೇಳಿಕೆಗಳು ಬದುಕಿನ ಪ್ರಾಮಾಣಿಕತೆಯ ಪ್ರತೀಕಗಳಾಗಿವೆ. ದೈವದ ಸ್ವರೂಪವನ್ನು ನೆಲದ ಮರೆಯಲ್ಲಿ ಯಾರಿಗೂ ಕಾಣದಂತೆ ಇದ್ದರೂ ಅತ್ಯಂತ ಬೆಲೆಬಾಳುವ ನಿಧಿಯಂತೆ ನಿಧಾನವಾಗಿ ಅವುಗಳ ಮಹತ್ವ ಗೊತ್ತಾಗುತ್ತದೆ. ಹೇಳಿಕೆಗಳ ಅಂತರಂಗದ ನಿಲುವನ್ನು ಅರ್ಥಮಾಡಿಕೊಂಡು ಹೋಗಬೇಕಾಗುತ್ತದೆ. ಹೇಳಿಕೆಗಳು ಸಮಾಜದಲ್ಲಿ ವಿಶೇಷವಾಗಿ ಸಿರಿತನ ಮತ್ತು ಬಡತನ ಬಂದಾಗ ವ್ಯಾಪಕವಾಗಿ ಕಂಡುಬರುತ್ತವೆ. ವ್ಯಕ್ತಿ-ವ್ಯಕ್ತಿಗಳ ನಡುವೆ ಸಂಘರ್ಷ ಕಂಡು ಬಂದಾಗ ಹಲವು ರೀತಿಯಲ್ಲಿ ಹಾನಿವುಂಟಾಗುತ್ತದೆ. ಅದನ್ನು ತಪ್ಪಿಸುವ ವ್ಯವಸ್ಥೆಯೇ ಹೊಂದಾಣಿಕೆ. ಸಂಘರ್ಷ ಇಲ್ಲದಿದ್ದರೆ ಹೊಂದಾಣಿಕೆಯ ಅಗತ್ಯ ಇರುವುದಿಲ್ಲ. ಇದನ್ನೇ ಹೇಳಿಕೆಕಾರರು ಈ ರೀತಿಯಾಗಿ ಹೇಳಿದ್ದಾರೆ.

"ತಲಿಬಾಗಿ ನಮಸ್ಕಾರ ಮಾಡರಲೇ
ತಲಿ ಎತ್ತಿ ಬ್ಯಾಡ ಗಚ್ಚಿನ ಕಣದೊಳು
ಹೆಪ್ಪು ಹಾಲಿಗಿಟ್ಟಂಗ ಮಾತಾಡಬ್ಯಾಡ್ರಿ
ಎತ್ತಿನ ಕುಲ ತೊಳೆದ ತುಳಿಸಿ
ಬೆಣ್ಣಿ ಹಚ್ಚಿ ಪೂಜೆ ಮಾಡಬೇಕರಲೇ
ಸಾದ ಎತ್ತ ಅಂತ ಒಂದ್ ಪೆಟ್ಟ ಜಾಸ್ತಿ
ಹೊಡಿಬಾರದ ಎಳ್ದ ಎಳ್ದ ಹೊಡಿಬ್ಯಾಡರಲೇ
ಹೊಳ್ಳಿ ತಿರುಗಿ ನೋಡಬ್ಯಾಡರಲೇ
ನೋಡಿ ನಡಿರಿಲೇ[೧೮]

"ಏ ತಮ್ಮ ಟಗರಿನ ಬಾಲ ಮುರಿಬೇಕ
ಕ್ವಾಣದ ಬಾಲಾ ಮುರಿಬ್ಯಾಡ್ರಿ

ಎದುರಿಗೆ ಬಂಟ ಬಂದ್ರೂ ಹಿಂದ ಸರಿತಾನ
ತಂಗೀ ನಿನ್ನ ಗಂಡಗ ಬಡತನ ಬಂದೈತಿ
ಮರಗಬ್ಯಾಡಾ ರೆಟ್ಟಿ ಮುರದ ದುಡಿಯಂತ
ಹೇಳ, ನಾಳಿ ಅಮಾಸಿ ಒಳಗ ಮೂರು ಮೂಲಿ
ಜಾಗಾದಾಗ ಅಂಬಲಿ ಕಿಚಡಿ ಇಟ್ಟ ಹಿಂದ್
ಹೊಳ್ಳಿ ನೋಡಬ್ಯಾಡ್"[೧೯]

ಇಂತಹ ಹೇಳಿಕೆಗಳ ಹಿಂದೆ ಬದುಕಿನ ಕಠೋರ ವಾಸ್ತವವಿದೆ. ಬದುಕಿನಲ್ಲಿ ಮಳೆ, ಗಾಳಿ, ಚಳಿ ಬಂದೇ ಬರುತ್ತವೆ. ಅವುಗಳನ್ನು ತಡೆದುಕೊಳ್ಳುವ ಶಕ್ತಿ ಜನರಿಗೆ ಇರಬೇಕು. ಅದರಿಂದ ಜನ ಬದುಕುತ್ತಾರೆ. ಇಂತಹ ಸಂದರ್ಭದಲ್ಲಿ ಹೊಂದಾಣಿಕೆ ಎನ್ನುವುದು ಬಹಳ ಮುಖ್ಯ. ಮಾನವ ತನ್ನ ಪರಿಸರದೊಂದಿಗೆ. ಸಾಮರಸ್ಯವನ್ನು ಸಾಧಿಸುವ ಪ್ರಶ್ನೆಯೇ ಇದಾಗಿದೆ. ಇದು ಬಲಪ್ರಯೋಗದಿಂದಲೋ, ಒಪ್ಪಂದದಿಂದಲೋ ಬರುವಂತದ್ದಲ್ಲ. ಪರಸ್ಪರ ಅರಿವಿನಿಂದಲೋ, ಮಾನಸಿಕ ಪರಿವರ್ತನೆಯಿಂದಲೋ, ಉದಾತ್ತ ಭಾವನೆಯಿಂದಲೋ ಬರುತ್ತದೆ. ಅದನ್ನೇ ೧೨ನೇ ಶತಮಾನದ ಶರಣರು ಹೇಳುತ್ತಾರೆ. 'ಹಾವು ತಿಂದವರ ನುಡಿಸಬಹುದು, ಗರ ಹೊಡೆದವರ ನುಡಿಸಬಹುದು, ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ! ಬಡತನವೆಂಬ ಮಂತ್ರವಾದಿ ಹೋಗರೊಡನೆ ನುಡಿವರಯ್ಯ' (ಬಸವಣ್ಣ ವಚನ ೧೩೨) ಅಂದರೆ ಶ್ರೀಮಂತರಿಗೆ ಬಡತನ ಬಂದಾಗ ಅವರಿಗೆ ಅದರ ಅರಿವು ಗೊತ್ತಾಗುತ್ತದೆ. ಕುರುಬರ ಹೇಳಿಕೆಗಳು ಪರೋಕ್ಷವಾಗಿ ಇದನ್ನೇ ಸೂಚಿಸುತ್ತವೆ. ಅಲ್ಲಿ ನೀತಿಯಿದೆ, ತತ್ವವಿದೆ.

"ರೊಕ್ಕ ಇದ್ದಾಗ ತಗ್ಗಿ ಬಗ್ಗಿ ನಡೀರಲೇ
ನಾಲಿಗೆಗೆ ಎಲುವು ಇಲ್ಲ ಆಕಾಶಕ್ಕೆ ಕಂಬ ಇಲ್ಲ
ಅರಿತು ನಡಿರಿ, ಅರಿತು ನಡಿರಿ ಇದು
ಗೊರಗುದ್ದಿ ಇಟ್ಟಪ್ಪನ ಮಾತು"[೨೦]

"ಹಸದ ಬಂದವನಿಗೆ ಅನ್ನ ಹಾಕರೋ
ಸುಣ್ಣ ಹಾಕಬ್ಯಾಡರಿ ಹಿಂದಾಗಡೆ ಒದ್ದಾಡಿ ಸತ್ತಿರಿ
ಹೊತ್ತಿನ್ಯಾಗ ಆದವರ ನೆನಸಿರೀ[೨೧]

ಇಂತಹ ಹೇಳಿಕೆಗಳು ಸಿರಿತನ, ಬಡತನಗಳ ಸ್ವರೂಪವನ್ನು ಹೇಳುತ್ತವೆ. ಸಿರಿತನ ಬಂದಾಗ ದಾನ ಮಾಡುವ ಗುಣ ಇರಬೇಕು. ಬಡವರಿಗೆ ಸಂಕಟಬಂದಾಗ ನೆರವಾಗಬೇಕು. ಆಗ ದೈವತ್ವದ ಪ್ರಕ್ರಿಯೆಯಾಗುತ್ತದೆ ಎಂಬುದನ್ನು ಹೇಳಿಕೆಗಳು ಮತ್ತೆ ಮತ್ತೆ ಸ್ಪಷ್ಟೀಕರಿಸುತ್ತವೆ.

**ಕುಟುಂಬ ಸಂಬಂಧಿ ಸಂಗತಿಗಳು :** ಕುಟುಂಬದಲ್ಲಿ ಹಲವಾರು ಸಂಗತಿಗಳು ಅಡಕವಾಗಿರುತ್ತವೆ. ಹಲವು ಬಗೆಯ ವಾತಾವರಣವೂ ಅಲ್ಲಿರುತ್ತವೆ. ಅವುಗಳ ನಿವಾರಣೆಗೆ ಹೇಳಿಕೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಮನೆಯ ಕೆಲಸಗಳಿಗೆ ಸಂಬಂಧಿಸಿದಂತೆ ಹೇಳಿಕೆಗಳ ಗ್ರಹಿಕೆ ಮತ್ತು ಅವಲೋಕನ ಆಸಕ್ತಿಪೂರ್ಣವಾಗಿದೆ. ದಿನನಿತ್ಯದ ಬದುಕಿನ ಚಿತ್ರಗಳ ಮೂಲಕ ಮಹತ್ವದ ಅಂಶಗಳು ಇಲ್ಲಿವೆ.

“ಮಂಗ್ಯಾಗೇನು ಗೊತ್ತ್ರೋ ಮಾಣಿಕ್ಯದ ಮಹತ್ವ
ಕತ್ತಿಗೇನು ಗೊತ್ತ್ರೋ ಕಸ್ತೂರಿ ನಾತ
ಮನುಷ್ಯರು ನೀವು ತಿಳಿದ ನಡಕೋರೋ
ನೀವು ಯಾರು ಏನು ಅಂತ
ಅದಕಾಗಿ ಜ್ವಾಕೀಲಿ ಹೋಗ್ರಿ
ಸಂತರು ಹೇಳ್ತಾರೆ ಮಾನವ
ಜಲುಮ ದೊಡ್ಡದಂತ ಸುಳ್ಳಲ್ಲ
ಮನುಷ್ಯಾಗಿ ಹುಟ್ಟುದು ಅಪರೂಪ
ನೋಡಿ ಹೋಗ್ರಿ”[೨೨]

“ಎಲ್ಲಾರೂ ದುಡಿಬೇಕ್ರೋ ಒಬ್ಬರ ದುಡದರ
ಮನಿ ಸಾಗೊದೆಂಗ್ ನಾಳಿ ಸ್ವಾತಿ ಮಳೆ
ಸುರು ಆಕ್ಕತೆ ಮೊದಲ ಹಳ್ಳದ ಹೊಲ
ಹರಗರಿ, ಮೂಡಲ ದಿಕ್ಕಿಗಿ ಮಳಿರಾಜ
ಬೋರ್‍ಯಾಡಕತನ ಮನಸ ಕೊಟ್ಟ
ದಗದಮಾಡರಲೇ[೨೩]

ಇಂತಹ ಹೇಳಿಕೆಗಳಲ್ಲಿ ದೈವದ ಸಂಕಲ್ಪ ವಿಧಿಯ ಪ್ರಕ್ರಿಯೆಗಳು ನಡುವೆ ಕುಟುಂಬದಲ್ಲಿ ನಡೆಯುವ ಸಂಘರ್ಷವನ್ನು ನೋಡಬಹುದು. ಕುಟುಂಬದಲ್ಲಿ ಎಲ್ಲರೂ ದುಡಿಯಬೇಕು. ಎಲ್ಲರೂ ಸಹಕಾರದಿಂದ ಬದುಕಬೇಕು. ಸಹಕಾರವು ಸಮಾಜ ಜೀವನದ ಮುಖ್ಯ ವಾಹಿನಿಯಾಗಿದೆ. ಸಹಕಾರ ವಿಲ್ಲದೆ, ಸಮಾಜ ವಿಲ್ಲದೆ ನೆಮ್ಮದಿಯಿಂದ ಬದುಕಲು ಸಾಧ್ಯವಿಲ್ಲ. ಇದಕ್ಕಾಗಿ ಕುಟುಂಬದ ಪರಿಸರ ಸಹಕಾರದಿಂದ ಬದುಕುವುದನ್ನು ಕುರುಬರ ಹೇಳಿಕೆಗಳು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತವೆ.

“ಭೂಮಿ ಬಿತ್ತುದರೊಳಗ ಇದಿಮಾಯಿ ಬರಬಾರದು
ಮನ್ಯಾಗ ಎಲ್ಲರೂ ಕೂಡಿ ಒಂದೊಂದು ದಗದ
ಮಾಡಿದರ ಮುತ್ತಿನ ತೆನಿ ಮನ್ಯಾಗ ಅದಕ್ಕಾಗಿ
ಎಲ್ಲರೂ ಕೂಡಿ ದುಡಿರಿ ಹಿರಿಮಗ ದೊಡ್ಡಂವ ಅಲ್ಲ
ಕಿರಿಮಗ ದೊಡ್ಡಂವ ಅಲ್ಲ ಎಲ್ಲರೂ ಅಷ್ಟ
ನಂಬಿಕೆಗೆ ಮೋಸ ಮಾಡಬ್ಯಾಡರಿ
ಫಳದ ಹೋಗ್ರಿ, ಮಳ್ಳ ಆಗಬ್ಯಾಡರಿ
ಕೊಟ್ಟ ವಚನ ತಪ್ಪ ಬ್ಯಾಡರಿ ಕಡಬಿ ಇಟ್ಟಪ್ಪನ
ಮಾತು ಸುಳ್ಳಲ್ಲ[೨೪]

ಈ ಹೇಳಿಕೆಗಳನ್ನು ಗಮನಿಸಿದಾಗ ಒಟ್ಟು ಕುಟುಂಬದ ಚಿತ್ರಣವೇ ಇಲ್ಲಿದೆ. ಬದುಕಿನ ಅಗು ಹೋಗುಗಳ ಬಗ್ಗೆ ಆಸಕ್ತಿ ಹೊಂದಿದ ಜೀವಂತ ಲವಲವಿಕೆ ಚಿತ್ರಗಳು ಹೇಳಿಕೆಗಳ ಮತ್ತೊಂದು ವೈಶಿಷ್ಟ್ಯ ನೇರವಾಗಿ ಶಬ್ದಗಳಲ್ಲಿ ತೀವ್ರತೆ ಪರಿಣಾಮಕಾರಿಯಾಗುವುದರಿಂದ ಹೇಳಿಕೆಗಳು ಇಂದಿಗೂ ಆಸಕ್ತಿಪೂರ್ಣವಾಗಿವೆ.

“ವಟ ವಟ ಮಾತಾಡಬ್ಯಾಡ್ರ್ಯೋ
ಎಮ್ಮಿ ಉಚ್ಚಿ ಹೋದಾಂಗ ಮಾತಾಡಬ್ಯಾಡ್ರೀ
ಕಂಬಳ್ಯಾಗ ಕನಕ ನಾದಬ್ಯಾಡ್ರೀ
ಅಣ್ಣ ತಮ್ಮ ಇಬ್ಬರ ಅದಿರಿ
ನಾ ಮುಂದ ನೀ ಮುಂದ ಅಂತ ಹೋಗಬ್ಯಾಡ್ರೀ
ಯಾರ ಮುಂದ ಹೋಗುದಿಲ್ಲ, ಯಾರ್ ಹಿಂದ್
ಹೋಗುದಿಲ್ಲ ಈ ಜಲ್ಮ ಮೂರು ದಿನದ ಸಂತಿ
ತಿಳಿದ ನಡಿರಿ
ಐದು ಅಮಾಸಿ ಗುಡಿಗೆ
ಬಂದ್ ಹೋಗರಲೇ”[೨೫]

“ಆಡಿನ ಮಲಿಯ್ಯಾಂಗ ಇಬ್ಬರ
ಅಕ್ಕ-ತಂಗಿ ಆದಿರಿ ತವರು ಮನ್ಯಾಗ

ಪಾಲಾ ಕೇಳಬ್ಯಾಡ್ರೀ, ತವರ ಮನಿಗೆ
ಆಸೆಕೊಟ್ಟ ಹೋಗ್ರೀ ಅಣ್ಣ ತಮ್ಮರಿಗೆ
ಮೂರು ರೊಟ್ಟಿ ಅದಾವ ಇಬ್ರೂ ತಿನ್ನರಿ
ಅಂತ ಹೇಳ್ರಿ ಎಲ್ಲರನೂ ಸಮನಾಗಿ ನೋಡ್ರಿ
ವರುಷಕ್ಕೊಮ್ಮೆ ಬಂದ ಹೋಗ್ರೀ
ತವರಮನಿ ಸೀರೆ, ಇಳಕಲ್ ಜರಿ ಅಂತ ತಿಳಕೋರಿ
ಬಾಳ ಆಸೆ ಮಾಡಬ್ಯಾಡರಿ
ನನ್ನ ಗುಡಿಗೆ ಬಂದ ಹೋಗ್ರಿ"[೨೬]

ಇಂತಹ ಹೇಳಿಕೆಗಳು ಒಟ್ಟು ಕುಟುಂಬದ ಸಹಕಾರವನ್ನು ಮತ್ತು ಸಹಬಾಳ್ವೆಯನ್ನು ತೋರಿಸುತ್ತವೆ. ಅಂದರೆ ಮನುಷ್ಯ ಉದಾಸೀನ ಮಾಡಿದರೆ ಇಹಲೋಕವೂ ಇಲ್ಲ, ಪರಲೋಕವೂ ಇಲ್ಲ ನರಕ ಸಮಾನವಾಗುತ್ತದೆ, ಬದುಕು. ಜಂಗಮಸೇವೆ, ದಿನದಲಿತರ ಸೇವೆ, ಮಾಡುವವರು ಅದರಲ್ಲಿ ಸಂಪೂರ್ಣ ಮನಸ್ಸನ್ನು ತೊಡಗಿಸಿ ಮಾಡಬೇಕು ಎಂದು ಮಾನಸಿಕ ದೃಢತೆ ಮತ್ತು ಏಕಾಗ್ರತೆಯನ್ನು ಹೇಳಿಕೆಗಳು ಬೇರೆ ಬೇರೆ ಸಂದರ್ಭದಲ್ಲಿ ಸ್ಪಷ್ಟಪಡಿಸುತ್ತವೆ. ಹೇಳಿಕೆಗಳು ಸಂದಿಗ್ಧವಾದುದಲ್ಲ ಸರಳವಾಗಿರುತ್ತವೆ. ಶುಭದ ಕಾರ್ಯದಲ್ಲಿಯೂ ಅಶುಭಕಾರ್ಯದಲ್ಲಿಯೂ ಸಮಾನವಾದವನ್ನು ಅವು ತೋರಿಸುತ್ತವೆ. ಕಷ್ಟ ಕಾಲದಲ್ಲಿ ದೈವ ಭಕ್ತರನ್ನು ಕೈ ಬಿಡುವುದಿಲ್ಲ.

"ಎಲ್ಲೈ ನಂಬಿಗಿ ಇಟ್ಟ ನಡಿರಿಲೇ
ನಿಮ್ಮ ಮನಿ ಅರಮನಿ ಆಕೈತಿ
ಕರಿ ಹೊಲದಾಗ ಕಾಲ ಹಾದಿ ಮಾಡ್ರ್ಯೋ
ಒಯ್ಯುವಾಗ ಹೊತಗೊಂಡ ಹೋಗ್ರೀ
ಹುಚ್ಚರ ಹಾಗೆ ಮಾತನಾಡ ಬ್ಯಾಡರಿ[೨೭]

ಎಂಬ ಬದುಕಿನ ಬಗೆಗಿನ ನಂಬಿಕೆ ಈ ಹೇಳಿಕೆಯಲ್ಲಿದೆ. ಈ ರೀತಿಯ ಕುಟುಂಬದಲ್ಲಿ ಕುಟುಂಬದ ಸದಸ್ಯರೆಲ್ಲರೂ ಪ್ರತ್ಯೇಕವಾಗಿ ಆಗಲಿ ಪರೋಕ್ಷವಾಗಿ ಆಗಲಿ ಸಹಕಾರದಿಂದ ಇರಬೇಕು ಈ ಅಂಶ ಹೇಳಿಕೆಗಳಲ್ಲಿ ಇದೆ.

**ಸಹಕಾರ ಮತ್ತು ಹೊಂದಾಣಿಕೆ :** ಸಾಮಾಜಿಕ ಅಂತರ್‌ಕ್ರಿಯೆಯಲ್ಲಿ ಏರ್ಪಡುವ ವಿಶಿಷ್ಟ ವಿಧಾನಗಳನ್ನು ಸಾಮಾಜಿಕ ಪ್ರಕ್ರಿಯೆ ಎನ್ನುವರು. ಈ ಸಾಮಾಜಿಕ ಪ್ರಕ್ರಿಯೆಯಲ್ಲಿ ಹಲವು ಅಂಶಗಳು ಪ್ರಭಾವ ಬೀರುತ್ತವೆ. ಸಮಾಜದಲ್ಲಿ ಉತ್ತಮ ಕಾರ್ಯನಿರ್ವಹಿಸುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅಲ್ಲಿಯೆ ಎಲ್ಲ ಜನರು ಅನ್ಯೋನ್ಯತೆಯಿಂದ ಬದುಕನ್ನು ರೂಢಿಸಿಕೊಳ್ಳಬೇಕು

ಜನರ ಗುಂಪಿನಿಂದ ಸಾಮಾಜಿಕ ಸಂಬಂಧ ಬೆಳೆಯುವುದು. ಅವರಲ್ಲಿ ಪರಸ್ಪರ ಅರಿವು ಸಹಕಾರ ಕೊಟ್ಟು ತೆಗೆದುಕೊಳ್ಳುವ ಮನೋಭಾವ ಉಂಟಾದಾಗ ಮಾತ್ರ, ಸಾಮಾಜಿಕ ಸಂಬಂಧ ಹೆಚ್ಚುತ್ತದೆ. ಉದಾ: ತಂದೆ–ತಾಯಿ ಹಾಗೂ ಗುರು–ಶಿಷ್ಯ ನೀರು–ಕೆರೆ–ಕಟ್ಟೆ ಸ್ನೇಹಿತರು ಬಂಧು ಬಳಗ ಇತ್ಯಾದಿ.

“ರೊಕ್ಕ ಇರದಿದ್ರೂ ದಿಕ್ಕ ಇರಬೇಕ್ರೋ
ಸತ್ರ ನಾಲ್ಕು ಮಂದಿಬಾಯಾಗ ಇರಬೇಕು
ಹೆಗಲಮ್ಯಾಲ ಕಂಬಳಿ ಹಾಕ್ಕೊಂಡ ಸರಿಹೊತ್ತಿನ್ಯಾಗ
ಹೊಂಟ್ರ ಏಳು ಮಂದಿ ಬರಬೇಕ್ರೋ
ಬಾಳೆ ಮಾಡಿರ ಹಂಗ ಬಾಳೇ ಮಾಡಬೇಕು
ಇರದಿದ್ರ ಬಾಳ ಮಾಡ
ಬ್ಯಾಡರಿ ತಿಳಿಕೊಂಡ
ಹೋಗಿರಿ[೨೮]

“ಕಾಯಿ ಜೋತಾಡುವ ಹೂ ನೇತಾಡುತಾವು
ಊರಾಗಿನ ನಾಯಿ ಓಡಾಡತಾವ
ಮಾಯವ್ವನ ಮರಿಬ್ಯಾಡ್ರೀ[೨೯]

ಈ ಹೇಳಿಕೆಗಳನ್ನು ಗಮನಿಸಿದಾಗ ವ್ಯಕ್ತಿ ವ್ಯಕ್ತಿಗಳಲ್ಲಿ ಪರಸ್ಪರ ಅನ್ಯೋನ್ಯತೆ, ಸಾಮರಸ್ಯತೆ, ಏಕತೆ, ಇರಬೇಕು ಇದರ ಮೂಲಕ ಸಮಾಜ ತನ್ನ ಉದ್ದೇಶ ಹಾಗೂ ಗುರಿಗಳನ್ನು ಈಡೇರಿಸಿಕೊಳ್ಳಲು ಸಾದ್ಯ. ನಂಬಿಕೆ ಇರದಿದ್ದರೆ ಪರಂಪರಾಗತವಾಗಿ ಸಂಸ್ಕೃತಿ ಉಳಿಯದು. ನಂಬಿಕೆಗಳು ಯಂತ್ರದಂತೆ ಕೆಲಸ ಮಾಡುತ್ತವೆ. ಸಮಾಜ ಇರುವವರೆಗೆ ಜೀವಂತವಾಗಿರುತ್ತದೆ. ನಂಬಿಕೆಗಳಿಗೆ ಮರಣ ಇಲ್ಲ. ಅವುಗಳಿಗೆ ಧಾರ್ಮಿಕ ತಳಹದಿ ಇರುತ್ತದೆ. ಕುರುಬರ ಹೇಳಿಕೆಗಳಲ್ಲಿ ಮಾನವನು ಸಮಾಜದ ಕಟ್ಟು ಕಟ್ಟಳೆಗಳಿಗೆ ಒಳಗಾಗಿ ನಡೆದುಕೊಳ್ಳುವುದರಿಂದ ಸ್ನೇಹವಾಗಲಿ, ಸಂಘವಾಗಲೀ ಅವನನ್ನು ಬಿಡಲಿಕ್ಕೆ ಸಾಧ್ಯವೇ ಇಲ್ಲ. ಹೇಳಿಕೆಗಳಲ್ಲಿ ಧಾರ್ಮಿಕ ಪಾವಿತ್ರ್ಯತೆ ಇರುವುದರಿಂದ ಅವುಗಳ ಜೊತೆಗೆ ಅತಿಮಾನುಷ ಶಕ್ತಿಗಳ ಭಯವೂ ಇರುತ್ತದೆ. ನಡೆ–ನುಡಿ ಆಚಾರ–ವಿಚಾರ ಇವುಗಳಲ್ಲಿ ಸಣ್ಣ ತಪ್ಪಾದರೂ ಸಹಿತ ಅನರ್ಥವಾಗಬಹುದು ಎನ್ನುವ ಭ್ರಮೆ ಪ್ರತಿಯೊಂದು ಹೇಳಿಕೆಯ ಒಂದೆ ಇದ್ದೇ ಇದೆ. ಹೇಳಿಕೆಗಳು ಮನುಷ್ಯನ ವರ್ತನೆಯನ್ನು ಬದಲಾಯಿಸಬಹುದು. ಹಾಲುಮತ ಸಮುದಾಯದಲ್ಲಿ ಬಹುತೇಕ ಆಚಾರ, ವಿಚಾರಗಳು, ನಂಬಿಕೆಯ ಮೇಲೆಯೇ, ಹೇಳಿಕೆಗಳು ಶ್ರದ್ದೆಯ ಮೇಲೆಯೇ ಇರುತ್ತವೆ.

"ಕುರುಬ ಹುಟ್ಟುವ ಕುಲದಲ್ಲಿ ಗೋತ್ರ ಇಲ್ಲ
ಕುರುಬ ಎಲ್ಲಾದಕೂ ಮೂಲ, ಜಾಡ್ಸ ಕಂಬ್ಳಿ
ನಾಡಿಗೆಲ್ಲ ಒಂದ್ ಕಂಬ್ಳಿ ಅಲಕನೂರ ಕರಿಸಿದ್ಧನ ಕಂಬ್ಳಿ
ಒಮ್ಮೆ ಜಾಡಿಸಿದ ಭಾಳ ಮಳಿ ಅಲಕನೂರ ಸಿದ್ಧಗ ನಡಕೋರಿ"
ಕಂಬಳಿ ಮ್ಯಾಲ ಕುಂತ ಹೇಳಿಕೆ ಮಾಡತಾನ
ಅಲಕೂರಿನ ಕರಿಸಿದ್ದ[೩೦]

ಸಮಾಜದಲ್ಲಿ ಒಬ್ಬರನ್ನೊಬ್ಬರು ಗುರುತಿಸಲು ಭಿನ್ನತೆ ಅಗತ್ಯ. ಆ ಭಿನ್ನತೆಯನ್ನು ಲಿಂಗ, ರೂಪ, ವಯಸ್ಸು, ಜಾತಿ, ಮತ, ಧರ್ಮಗಳಲ್ಲಿ ಕಾಣುತ್ತೇವೆ. ಹಾಗೆಯೇ ಬದುಕಿನ ಆಸಕ್ತಿ, ಅಭಿರುಚಿ, ಬುದ್ಧಿಶಕ್ತಿ, ಭಾವನೆಗಳಲ್ಲಿಯೂ ಭಿನ್ನತೆ ಇರುತ್ತದೆ. ಆ ಭಿನ್ನತೆ ಸಮುದಾಯದ ಒಳಿತಕ್ಕೆ ಸ್ಪಂದಿಸಬೇಕು.

"ಹನ್ನೆರಡು ವರ್ಷ ಭಯಂಕರ ತಪಸ್ಸು ಮಾಡಿ
ಆ ಮ್ಯಾಲ ಭರಮ್ಯಾ ಬಂದಾ ನೋಡಿ
ಏನ ಬೇಡತಿ ಬೇಡಲೆ ಎಲ್ಲಾ ಕೊಡತಿನಿ
ನಿನ್ನ ಭಕ್ತಿ ನೋಡಿ"[೩೧]

ಇದನ್ನು ಗಮನಿಸಿದಾಗ ಶಿಷ್ಯರ ನಿಷ್ಠಾವಂತ ಭಕ್ತಿಯನ್ನು ನೋಡಿ ಗುರು, ಶಿಷ್ಯನನ್ನು ಮಗನಂತೆ ದಯಪಾಲಿಸುತ್ತಾನೆ. ಇದರಿಂದ ಗುರು-ಶಿಷ್ಯರ ನಂಬಿಕೆ ಮುಖ್ಯವಾಗುತ್ತದೆ. ಬೀರಪ್ಪನು ಮಾಳಿಂಗರಾಯನ ಸಾಹಸ ಶೌರ್ಯವನ್ನು ಜನತೆಗೆ ತೋರಿಸಲು ಹುಲಿ ಗಿನ್ನವನ್ನು ತರುತ್ತೇನೆ. ಆ ನಿಷ್ಠೆ ಇರಬೇಕೆಂದು ಹೇಳಿಕೆಗಳು ಸ್ಪಷ್ಟಪಡಿಸುತ್ತವೆ.

"ತುಂಬಿದ ಕೆರ‍್ಯಾಗ ಕೆಂದೆತ್ತು ನೀರು ಕುಡಿತು
ಈ ವರ್ಷ ಬೂದಿಗೊಪ್ಪ ಮಾಳಿಂಗರಾಯ
ಜಾತ್ರಿ ಭಾರಿ ಆತು. ಮಾಳಿಂಗರಾಯನ
ಹುಲಿ ಹಾಲ ತಗೊಂಡ ಗುರುವಿನ ಸೇವಕ
ಬಂದಾನ ಮಾಳಪ್ಪ ಗುರು ಬೀರಪ್ಪಗ
ಹಾಲ ಹರವಿ ತಂದಾನ"[೩೨]

ಇಂತಹ ಹೇಳಿಕೆಗಳು ಆಯಾ ಗ್ರಾಮದ ವೈಶಿಷ್ಟ್ಯವನ್ನು ಹೇಳುವುದರೊಂದಿಗೆ ಗುರು-ಶಿಷ್ಯರ ಮಹತ್ವವನ್ನು ಹೇಳುತ್ತವೆ. ಜೊತೆಗೆ ಬದುಕಿನ ವಾಸ್ತವತೆಯನ್ನು ಗುರುತಿಸುತ್ತವೆ. ಸಮಾಜವು ಸಹಕಾರ ತತ್ವದಿಂದಲೇ ರೂಪಿತವಾದದ್ದು. ಒಬ್ಬರು ಒಬ್ಬರನ್ನು ಬಿಟ್ಟು ಇರಲಿಕ್ಕೆ ಸಾಧ್ಯವೂ ಅಲ್ಲ.

ಇರಬಾರದು ಕೂಡಾ ಒಬ್ಬರ ಕಷ್ಟದಲ್ಲಿ ನೆರವಿಗಾಗುವುದು, ಸಹಾಯ ಮಾಡುವುದು, ಅವಕಾಶ ತೋರಿಸುವುದು ಹೀಗೆ ಹೊಂದಾಣಿಕೆ ಮತ್ತು ಸಹಕಾರದಿಂದ ಸಮಾಜ ನಿರ್ಮಾಣವಾಗುತ್ತದೆ.

"ಮನಸ್ಸು ಕಲ್ಲ ಮಾಡಕೋಬಾರದು
ಹೂವಿನಂಗ ಮೆತ್ತಗ ಇರಬೇಕು
ನಾಲ್ಕು ಜನರಿಗೆ ಬೇಕಾಗಬೇಕು
ಉಗುಳನುಂಗಿ ಬದುಕುವುದನ್ನು ಕಲಿಬೇಕ
ತಾಳಿದಾವ ಬಾಳತಾನ
ಹಿಂಡ ದನದಾಗ ನುಗ್ಗಿ ಕುರಿ ಹಾಲ
ಹಿಂಡಿ ಬಂದರೋಗ ಹೊಕ್ಕಾವ
ಇದು ಕರಿ ಭರಮನ ಮಾತು[೩೩]

ಕಲ್ಲು ನೀರಿನಲ್ಲಿ ಇದ್ದರೂ ಅದರಲ್ಲಿ ಪರಿವರ್ತನೆ ಕಾಣಲಾರದು ಎಂಬ ಹತಾಸೆಯ ಭಾವನೆಯನ್ನು ಆಡಂಬರದ ಭಾವನೆಯವರು ಎಷ್ಟು ಕಾಲವಾದರೂ ಸತ್ಯವನ್ನು ಅರಿಯಲಾರದೇ ಹೋಗುತ್ತಾರೆ. ಅಲ್ಲ ಎಂಬ ನಿರಾಸೆ ಇಲ್ಲಿ ತುಂಬಿದೆ. ಮನುಷ್ಯ ಕಠಿಣವಾಗಬಾರದು ಸಂದರ್ಭಕ್ಕೆ ತಕ್ಕಂತೆ ಬದಲಾವಣೆ ಆಗಬೇಕು ನೀರಿನಲ್ಲಿ ನೆನಸಿದ ಕಲ್ಲಿನಂತೆ ಆಗಬಾರದು. ಆನೆಯಂತಹ ಬೃಹತ್ ಗಾತ್ರದ ಪ್ರಾಣಿ ಅಂಕುಶದ ಚಿಕ್ಕ ಕುಡಿಗೆ ಹೆದರುತ್ತದೆ. ಶ್ರೀಮಂತಿಕೆ ಇರಲಿ, ಬಡತನ ಇರಲಿ, ಜ್ಞಾನಕ್ಕೆ ಜ್ಯೋತಿಗೆ ಹೆದರಬೇಕು ಅಂಕುಶ, ಜ್ಯೋತಿ, ಜ್ಞಾನ ಇವು ಹೇಳುವ ಅರ್ಥವ್ಯಾಪ್ತಿ ಅಗಾಧವಾದುದ್ದು. ಮಹತ್ವಪೂರ್ಣವಾದದ್ದು.ಬದುಕಿನಲ್ಲಿ ಹಲವಾರು ತೊಂದರೆಗಳು ಬರುತ್ತವೆ. ಅವುಗಳನ್ನು ಸಹಿಸಿಕೊಂಡು ಹೋಗಬೇಕು. ಎಂದು ಹೇಳಿಕೆಗಳು ಹಲವಾರು ಶಬ್ದಚಿತ್ರಗಳ ಮೂಲಕ ಮಾರ್ಮಿಕವಾಗಿ ಭವಿಷ್ಯವಾಣಿಯನ್ನು ಹೇಳಿವೆ.

"ಕಾಳಕಡಿ ಅಗ್ಗ ಆಗ್ಯಾವಂತ ಹಿಗ್ಗ ಬ್ಯಾಡರಲೆ
ಮಗ್ಗಲ ಎಲವು ಮೂರದಾವ ದುಡ್ಯಾಕ ಕಲಿರಿ"[೩೪]

"ಕಣ್ಣ ನೆತ್ತಿಮ್ಯಾಲ ಬರಬಾರದು ಎತ್ತಿದರ
ಎರಡ ಹೋಳ ಆಗತೈತಿ
ಹುಷ್ಯಾರಾಗಿ ಹೋಗ್ರಿ"[೩೫]

ಬದುಕಿನ ಸಹಜ ಸ್ವಾಭಾವಿಕತೆಯನ್ನು ಹೃದಯ ಅರಳುವಂತೆ ಈ ಹೇಳಿಕೆಯಲ್ಲಿ ಜನತೆ ತಮ್ಮ ಬದುಕನ್ನು ಉತ್ತಮ ಪಡಿಸಿಕೊಳ್ಳಲು ಕಷ್ಟ-ಸುಖ ಹಂಚಿಕೊಳ್ಳಲು ಬೇಡಿಕೆಯನ್ನು

ಈಡೇರಿಸಿಕೊಳ್ಳುಲು ಪರಸ್ಪರ ಅವಲಂಬಿಸುವರು. ನಾಗರೀಕತೆ ಬೆಳೆದಂತೆ, ವೈವಿದ್ಯತೆ ಹೆಚ್ಚಿದಂತೆ, ಪರಸ್ಪರ ಅವಲಂಬನೆ ಹೆಚ್ಚಾದಂತೆ ಹೋಗುತ್ತದೆ. ಇದು ನಿಸರ್ಗದ ನಿಯಮವಾಗಿದೆ.

"ಬಂಜಿಗೇನು ಗೊತ್ತರ್‍ರ್ಯೋ ಹಡಿಯುವ ಬ್ಯಾನಿ
ಬಂಜಿಯ ಮಾತ ಅಲ್ಲ:ಕೋಳತುತಲ್ಲ
ಕಳ್ಳನಿಗೇನು ಗೋತ್ತರ್‍ರ್ಯೋ ಖರೆ ಮಾತು
ಅಂತಹವರ ಮಾತು ನಂಬಿದರ ಕೆಟ್ಟ
ಹೋಗತಿರಲೇ ಅಲಗ ಚುಚ್ಚಿ ಹೇಳ್ಯಾನ
ಮಾಳಪ್ಪ ಬಲಗೈಲಿ ಭಾಷೆ ಕೊಟ್ಟ
ಕಳಿಸ್ಯಾನ ಬಡಕೊಂಡ ದೆವ್ವ ಬಂದ
ಹಾದಿಲೇ ಹೊಕ್ಕೈತಿ"[೩೬]

"ಎಲ್ಲೈ ಕುಂತ ಮಾತಾಡ್ರೀ ನಿಂತ ಮಾತಾಡಬ್ಯಾಡ್ರಿ
ಕೂಸಿನ ಬ್ಯಾನಿ ತಿಳ್ಯಾಕ ಹಡದವ್ವಗ ಗೊತ್ತ
ಬಂಜಿಗೇನು ಗೊತ್ತರಲೇ"[೩೭]

ಈ ಹೇಳಿಕೆಗಳು ಬುದುಕಿನ ವಾಸ್ತವವನ್ನು ತಿಳಿಸುತ್ತವೆ. ಪ್ರತಿಯೊಂದು ಸಮಾಜವು ತನ್ನದೇ. ಆದಂತಹ ಸಂಸ್ಕೃತಿಯನ್ನು ಹೊಂದಿರುತ್ತದೆ. ಆ ಸಮಾಜದಲ್ಲಿಯ ವಾಸ್ತವವನ್ನು ಅಲ್ಲಿಯ ದೈವಗಳು ತಿಳಿಸುತ್ತವೆ. ಬಂಜೆಗೆ ಹೆರಿಗೆ ಬೇನೆ, ಬಡವನಿಗೆ ಶ್ರೀಮಂತಿಕೆಯ ಸುಖ, ಶ್ರೀಮಂತರಿಗೆ ಬಡವರ ದುಃಖ ತಿಳಿಯಲಾಗದು. ಇವುಗಳನ್ನು ಹೇಳಿಕೆಗಳು ಅರ್ಥಪೂರ್ಣವಾಗಿ ಬಿಂಬಿಸಿವೆ. ಬದುಕಿನ ಎಲ್ಲ ಬಗೆಯ ಚಿತ್ರಗಳೂ ಸಂದರ್ಭಕ್ಕೆ ತಕ್ಕಂತೆ ಹೇಳಿಕೆಗಳಲ್ಲಿ ಸೇರಿ ಹೋಗಿವೆ.

ಬೀದಿಯಲ್ಲಿ ಬಿದ್ದ ಶಿಶು ತಾಯಿಯ ಹತ್ತಿರ ಬಂದಂತೆ ಕಳೆದುಕೊಂಡ ಆಕಳು ಕರು ತನ್ನ ತಾಯಿಯನ್ನು ಹುಡುಕುವಂತೆ ಭಕ್ತಿ ಮಾರ್ಗವು ಸ್ವಾರ್ಥ ಸುಖದಿಂದ ಕೂಡಿಲ್ಲ. ಇದನ್ನು ಹೇಳಿಕೆಗಳ ಸ್ಪಷ್ಟವಾಗಿ ಅಭಿವ್ಯಕ್ತಿಸಿವೆ. ಮುಗ್ದ ಮನಸ್ಸಿನ ಎಳೆಯ ಮಗುವಿಗೆ ಹಾವು ಮತ್ತು ಕಿಚ್ಚು ಭೇದಗೊತ್ತಿಲ್ಲ. ಭಯದ ಭಾವನೆಯೂ ಅದಕ್ಕೆ ಗೊತ್ತಿಲ್ಲ. ಭಗವಂತನು ಅವರನ್ನು ನಿರಾತಂಕವಾಗಿ ರಕ್ಷಿಸುತ್ತಾನೆ. ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಹೀಗೆ ಆಶ್ವರ್ಯ, ಆರೋಗ್ಯ, ಆಶ್ರಯ ಈ ಎಲ್ಲ ಭಾವನೆಗಳನ್ನು ಹೇಳಿಕೆಗಳು ಬಿಂಬಿಸುತ್ತವೆ. ಒಡೆಯರರು ಕುರುಬ ಸಮುದಾಯದಲ್ಲಿ ಪ್ರತ್ಯೇಕ ಗುಂಪಾದರೂ ಸಾಮಾಜಿಕವಾಗಿ ಹೆಚ್ಚಿನ ಸ್ಥಾನದಲ್ಲಿದ್ದರೂ ಅವರಲ್ಲಿ ಅಹಂ ಇರುವುದೇ ಇಲ್ಲ. ಎಲ್ಲ ಸಮುದಾಯದವರನ್ನು ಒಂದೇ ರೀತಿಯಾಗಿ ಕಾಣುತ್ತಾರೆ

ಎಂಬುದು ಬಹಳ ಗಮನಾರ್ಹವಾದ ಸಂಗತಿಯಾಗಿದೆ. ಅವರೇ ಹೇಳುವಂತೆ 'ಯಾಂವ ಕೇಳಾವ ಅಂಗೈ ಹಿಡಿದ ಕೇಳಬ್ಯಾಡರೀ ಮುಂಗೈ ಹಿಡದ ಕೇಳ್ರೀ' ಎಂಬ ಮಾತು ಅವರ ಎಲ್ಲ ಹೇಳಿಕೆಗಳಲ್ಲಿಯೂ ಸ್ಪಷ್ಟವಾಗಿ ಬರುತ್ತದೆ. ಸಮುದಾಯಪರ ನಿಲುವು ಅವರದಾಗಿದೆ.

**ಸಾಮಾಜಿಕ ನೆಲೆಯ ಇತರ ಸಂಗತಿಗಳು :** ಸಮುದಾಯದಲ್ಲಿನ ರೀತಿ–ನೀತಿ, ಆಚಾರ, ವಿಚಾರ, ನಡೆ–ನುಡಿ ಇತರ ಇಂತಹ ಸಂಗತಿಗಳ ಬಗ್ಗೆ ಹೇಳಿಕೆಗಳು ಪ್ರತಿಬಿಂಬಿಸುತ್ತವೆ. ಸಮಾಜದಲ್ಲಿ ಸದಸ್ಯರು ಕೆಲವು ರೀತಿ–ನೀತಿ ಹಾಗೂ ಆದರ್ಶಗಳನ್ನು ಪಾಲಿಸುತ್ತಾರೆ. ಇವುಗಳನ್ನು ಪೂರ್ವಜರು ಅವರ ಅನುಭವದ ಆಧಾರದ ಮೇಲೆ ರೂಪಿಸುತ್ತಾರೆ. ಇಂತಹವುಗಳನ್ನು ಸಾಮಾಜಿಕ ನೆಲೆಯಲ್ಲಿ ಗುರುತಿಸಬಹುದು. ಮನುಷ್ಯನಿಗೆ ಅಹಂಕಾರ ಬರಬಾರದು ವಿನಯ, ವಿಧೇಯಕತೆ, ಆಜ್ಞಾಧಾರಕತೆ ಇರಬೇಕು. ಇವು ಹೇಳಿಕೆಗಳಲ್ಲಿ ವ್ಯಕ್ತವಾಗುತ್ತವೆ.

"ಎಷ್ಟು ಹೇಳಿದರೂ ಕರಿತಲಿ ಮಾನವಗ
ಸೊಕ್ಕ ಮುರಿಲಿಲ್ಲ ಮುಂಗಾರಿ ನಾಕಾಣೆ
ಹಿಂಗಾರಿ ಎಂಟಾಣೆ ನನ್ನಂತೆ ನಡೆದ್ರ
ಬಸವಗ ಬಾಲಗ ಹಿಡಿ ಹೊನ್ನ ಕೊಟ್ಟು
ದಂಡೀಗಿ ಹಚ್ಚೇನಿ"[೩೮]

"ಎಲ್ಯೆ! ಎತ್ತ ನೋಡಿದ್ರೂ ಮಾನವ ಜಲ್ಮಕ್ಕ
ಕತ್ತಲು ಕಾಣಿಸ್ತು ಸಮುದ್ರಕ ಜೋಡ ಯಾತಾಳ
ಹೂಡೂದ್ರಾಗ ಬಂದ್ ಮೂಲಿಗಿ ಕಸರ ಕುಂತ್ಯು"[೩೯]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ ಸಂಸ್ಕೃತಿ, ಸಂಪ್ರದಾಯಗಳು, ಬೇಕು–ಬೇಡಗಳು ಇವೆಲ್ಲ ಸಮಾಜದ ಹಿನ್ನೆಲೆಯಲ್ಲಿ ಅರಿತುಕೊಂಡು ಸಾಮಾಜಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತದೆ. ಮನುಷ್ಯ ಹಳೆಯದನ್ನು ಮರೆತು, ಹೊಸದನ್ನು ಕಲಿಯಬೇಕು. ಹಳೆಯದರ ಜೊತೆಗೆ ಹೊಸದರ ಜ್ಞಾನವೂ ಇರಬೇಕು. ದ್ವೇಷವನ್ನು ಮರೆತು ಸ್ನೇಹವನ್ನು ಯಾಚಿಸಬೇಕು. ಎಲ್ಲರೊಡನೆ ಒಂದಾಗಿ ಬೆರೆಯಬೇಕು ಅದನ್ನೇ ಹೇಳಿಕೆಗಳು ಆ ರೀತಿ ಹೇಳಿವೆ.

"ನಾಲ್ಕು ದಿಕ್ಕಿಗೆ ಸೂಸಿ ನೋಡುದ್ರಾಗ
ಗಡಬಡ ಇತ್ತು ಭೂತ್ಯಾನ ಹಚ್ಚಿ
ಸಂಹಾರ ಮಾಡಕೊಂಡ ಹೋಗುದ್ರಾಗ
ಬಂದ್ ದಿಕ್ಕಿಗಿ ಹಸಿರ ನಿಶ್ಯಾನಿ ಏರಿತುಳಂ

“ಮುಂದ ಬಿತ್ತಿದವನು ಮುತ್ತೈದ ಮಗ
ಹಿಂದ್ ಬಿತ್ತಿದವನು ರಂಡೆ ಮುಂಡೆದು ಮಗ”[೪೧]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ ಮನಷ್ಯನ ಹತ್ತಿರ ‘ಸೋಸಿ’ ನಡೆಯುವ ಸ್ವಭಾವ ಅಂದರೆ ತಗ್ಗಿ ಬಗ್ಗಿ ನಡೆಯುವ ಮತ್ತು ತಾಳಿಕೊಳ್ಳುವ ಸ್ವಭಾವ ಇರಬೇಕು. ಎಂತಹ ಕಠಿಣ ಸಂದರ್ಭದಲ್ಲಿಯೂ ಘರ್ಷಣೆ, ಸಂಘರ್ಷ, ದ್ವೇಷ, ಅಸೂಯೆ ಇರಬಾರದು ಇದಕ್ಕೆ ಜೀವ ಮತ್ತು ಚೈತನ್ಯವನ್ನು ನೀಡಬೇಕು. ಹೇಳಿಕೆಗಳ ಉದ್ದೇಶವೇ ವ್ಯಕ್ತಿ ವಿಕಾಸಗೊಳ್ಳುವಂತೆ ಮಾಡುವುದು. ಸಾಮಾಜಿಕ ಸ್ವಾಸ್ಥ್ಯವನ್ನು ಮಾಡುವುದು. ಮನುಷ್ಯ ಮನುಷ್ಯರಲ್ಲಿ ಪ್ರೀತಿ ವಿಶ್ವಾಸ ಮೂಡುವಂತೆ ಮಾಡುವುದೇ ಆಗಿದೆ. ಹೇಳಿಕೆಗಳಲ್ಲಿ ಸಮುದಾಯಪರ ಕಾಳಜಿಯಿದೆ, ಚಿಂತೆಯಿದೆ. ಸಾಮಾಜಿಕ ಜೀವನದಲ್ಲಿ ಮಳೆಯ ಪಾತ್ರ ಬಹು ಮುಖ್ಯವಾದದು ಮಳೆ ಬಂದರೆ ಬದುಕು; ಬದುಕು ಇದ್ದರೆ ಸಮಾಜ.

“ಹಂಡ ಹವಳ ಕೂರಿಗಿ ಹೂಡಿನಿ ಒಕ್ಕಲ್ಯಾ
ಮನೀಗಿ ಹನ್ನೊಂದು ದಿನಸಿನ ಬೀಜಾ
ಕೊಟ್ಟು ಬಡದಾಡಿ ಬಿತ್ತೂದ್ರಾಗ ತಂಗಿ
ಬಂದು ಇದಿರಿಗಿ ನಿಂತ್ಳು ಭೂತ್ಯಾನ ಹಚ್ಚಿ
ಕಡಿದು ಪೈಸಲ್ಮಾಡಿ ಮುದ್ದಿ ನಿಚ್ಚ
ತಕ್ಕೊಂಡ ಒಕ್ಕಲಿಗ್ಯಾನ ಬೆನ್ನ ಹತ್ತಿನಿ”[೪೨]

“ಎಲೇ! ಸ್ವಾತಿ ಮಳಿ ಬರ್ತ್ತಾದಂತ ನಗಬ್ಯಾಡ್ರಿ
ಯಾಕಂದ್ರ ಸಾತವ್ವ ಬಂದ್ರ ನೂತವ್ವ
ಹೋಗತಾಳ ಹುಷೇರಿ”[೪೩]

ಸಮಾಜದಲ್ಲಿ ಸದಸ್ಯರು ಸುಖವಾಗಿ ನೆಮ್ಮದಿಯಿಂದ ಬದುಕಬೇಕೆಂದರೆ ಮಳೆಯ ಪಾತ್ರ ಅಗಾಧವಾಗಿದೆ. ಮಳೆಯೇ ಅವರ ಬದುಕಿನ ಜೀವ ಜಲ ಮಳೆಯಿಂದ ಬೆಳೆ; ಬೆಳೆಯಿಂದ ರೈತನ ಬದುಕು. ಮೋಡವನ್ನು ರೈತರು ‘ಗುಡ್ಡದೊಳಗಿನ ಹುಲಿ’ ಎಂದು ಭಾವಿಸುತ್ತಾರೆ. ಅದು ನಿಜವೂ ಹೌದು. ಅಂತಹ ಮೋಡದ ಮೇಲೆ ತನಗೆ ನಿಯಂತ್ರಣವಿದೆ ಎಂದು ಇಲ್ಲಿನ ದೈವ ಭಾವಿಸುತ್ತದೆ. ಆ ಕುರಿತು ಹೇಳಿಕೆಗಳು ಇವೆ.

“ಎಲೇ! ಎಷ್ಟು ಹೇಳಿದ್ರೂ ಕರಿತಲಿ ಮಾನವಗ
ಸಮಾಜ ಆಗಲಿಲ್ಲ ಈ ಸಾಲಿನ ಮಳಿ ಬೆಳಿ
ಜೋಡ ನಿಶಾನಿ ಹಚ್ಚಿಸಿ”[illegible]

"ಎಲೇ ಆಗಸದ ಅಡಿವ್ಯಾಗ ನೀರಿನ ಕೊಡ
ಕಾಣಸ್ತಾವ ಇಂದಿಲ್ಲ ನಾಳೆ ನಾಳೆ ಇಲ್ಲ ನಾಡದ
ಸರ್ವಮಳೆ ಕೊಡತನ ಅಂತಾನ"[೪೫]

"ಗುಡ್ಡದಾನ ಹುಲಿ ಗಡಬಡಿಸಿ ಹೊರಗ
ಬರೂದ್ರಾಗ ನನ್ನಂತೆ ನಡದ್ರ ಐದ
ದಿನದಾಗ ಹೊರಗ ತರತೇನಿ
ಇಲ್ಲದಿದ್ರ ಚಿತ್ತ ಇದ್ದು ಟಪ್ ಹೋಡಿತಿನಿ[೪೬]

ಅಮೋಘಸಿದ್ಧ ಪರಂಪರೆಯ ಅನೇಕ ಸಿದ್ಧರಲ್ಲಿ ಮಳೆಗಾಲ ಸಿದ್ಧರು ಎಂಬ ಹೆಸರಿನ ಇವರೆಲ್ಲ ಕಂಬಳಿ ಬೀಸಿ ಕ್ಷಣಾರ್ಧದಲ್ಲಿ ಮಳೆ ತರಿಸಿದರೆಂಬ ಪ್ರತೀತಿ ಇದೆ. ಹೀಗಾಗಿ ವರ್ಷದಲ್ಲಿನ ಯಾವ ಯಾವ ಮಳೆ ಎಷ್ಟೊಂದು ಪ್ರಮಾಣದಲ್ಲಿ ಬರಲಿದೆ ಎಂದು ಕರಾರುವಕ್ಕಾಗಿ ಹೇಳಿಕೆಗಳು ಮಾಡುತ್ತವೆ.

"ಮಿರಗ ಅರ್ಧ ಆರಿದ್ರ ಅರ್ಧ
ಪುಶ್ಯ ಪುನರಕ್ಷುಕ ಕೂರಿಗಿ ಸಾಗಮಾಡಬೇಕ
ಅನ್ನೂದರಾಗ
ಇದಿಮಾಯಿ ರಂಡಿ ಇದಿರಿಗಿ ಬಂದ್ಲು
ಭೂತಾನ ಹಚ್ಚಿ ಮೂರ ತುಕಡಿ ಮಾಡದ್ರಾಗ
ಚಾರಣೆ ಕಸರ ಕುಂತಾವ ಅಂದ"[೪೭]

ಇಂತಹ ಹೇಳಿಕೆಗಳಲ್ಲಿ ರೈತರ ಬದುಕಿನ ಸುಖ-ದುಃಖ ಮಾಗಿದ ಮಳೆರಾಯನ ಕೃಪೆಯನ್ನು ಅವಲಂಬಿಸಿದೆ. ಯಾವುದೇ ಸಂದರ್ಭದಲ್ಲಿ ರೈತರು ಆತ್ಮಸ್ಥೈರ್ಯ ಕಳೆದುಕೊಳ್ಳಬಾರದು ಎನ್ನುವ ನಿಲುವು ಈ ಹೇಳಿಕೆಗಳ ಹಿಂದಿದೆ. ಎಂಬುದು ಗಮನಾರ್ಹ ಸಂಗತಿ. ಬಹುಪಾಲು ಹೇಳಿಕೆಗಳು ಜನಮುಖಿಯಾಗಿವೆ. ಜನ ಬದುಕಬೇಕೆಂದು ಅವು ರಚನೆಗೊಂಡಿವೆ. ಅವುಗಳ ಉದ್ದೇಶ ಕೃಷಿಕರು ಮತ್ತು ಕೃಷಿ ಸಮುದಾಯದ ಸಮಾಜದಲ್ಲಿ ಮುಂದೆ ಆಗುವ ಭವಿಷ್ಯದ ಸೂಚನೆ. ಬಹುಪಾಲು ಹೇಳಿಕೆಗಳು ಆಯಾ ಸಂದರ್ಭಕ್ಕೆ ತಕ್ಕಂತೆ ಒಡೆಯರರಿಂದ ಮೌಖಿಕವಾಗಿ ರೂಪುಗೊಂಡಿರುತ್ತವೆ. ಒಡೆಯರರು ಭಕ್ತರನ್ನು ಅಪಾರವಾಗಿ ನಂಬಿರುತ್ತಾರೆ. ಭಕ್ತರೂ ಸಹಿತ ಒಡೆಯರರ ಮೇಲೆ ಮತ್ತು ಅವರ ಹೇಳಿಕೆಗಳ ಮೇಲೆ ಅಪಾರ ಶ್ರದ್ಧೆ ಇರುತ್ತದೆ. ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ.

"ನಂಬಿಗಿ ಇಟ್ಟ ನಡದರ
ಅರಸನ ಅರಮನ್ಯಾಗ ಇಡತೀನಿ
ಅಪನಂಬಿಕೆ ಮಾಡದರ
ಪಾತಾಳಕ ತುಳೀತಿನಲೇ ಗಾಣಮಿಣಿ[೪೮]

ಒಡೆಯರರು, ಸಮಾಜ ಮತ್ತು ದೈವದ ಮಧ್ಯವರ್ತಿಯಾಗಿ ಕೆಲಸ ಮಾಡಿರುತ್ತಾರೆ. ಸಮಾಜದ ಆದರ್ಶಗಳನ್ನು ನಂಬಿಕೆ, ತತ್ವಗಳನ್ನು ಭಾವೀ ಜನಕ್ಕೆ ವರ್ಗಾಯಿಸುವುದು. ಸಮಾಜವಾದರೂ ತನ್ನ ಆದರ್ಶಗಳನ್ನು ಸದಸ್ಯರು ಪಾಲಿಸುವಂತೆ ಮಾಡಲು ಹೇಳಿಕೆಗಳನ್ನು ಬಳಸಿಕೊಳ್ಳುತ್ತಾರೆ. ಹೀಗೆ ಸಮಾಜವನ್ನೇ ತನ್ನ ಅಸ್ಥಿತ್ವದ ಮೂಲವಾಗಿಟ್ಟುಕೊಂಡು ಅದರ ಪ್ರಗತಿಗೆ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಭಾವೀ ಜನಾಂಗವನ್ನು ಸಮಾಜ ಜೀವಿಗಳನ್ನಾಗಿ ಮಾಡಲು ಕುರುಬರ ಹೇಳಿಕೆಗಳು ಪ್ರೇರೇಪಿಸುತ್ತವೆ. ಜನಮುಖಿಯಾದ ಅವರ ಹೇಳಿಕೆಗಳು ಸಮುದಾಯದ ಮೇಲೆ ಗಾಢ ಪ್ರಭಾವ ಬೀರುತ್ತವೆ. ಎಂದ ಮೇಲೆ ಹೇಗೆ ಮಾತಿನ ಸತ್ಯವನ್ನು ತಾವೇ ಹೇಳಿಕೊಳ್ಳುತ್ತಾ ಮಳೆಗಳ ಹೆಸರುಗಳನ್ನು ಹೇಳುತ್ತವೆ. ಬೆಳೆಗಳ ಹೆಸರುಗಳನ್ನು ಹೇಳುತ್ತವೆ. ವಿವಿಧ ವಿಷಯಗಳನ್ನು ಹೊಂದಿದ ಹೇಳಿಕೆಗಳು ಹೀಗಿವೆ.

"ಬಾಜಾರದಾಗಿನ ಸೇಲಗಿ
ಪಾತಾಳಕ್ಕ ತುಳಿಯುದರಾಗ,
ಆಕಾಶಕ್ಕ ಜಿಗಿತು"[೪೯]

ಬೆಲೆ ಏರಿಕೆಯ ಸಂಕೇತ ಈ ಹೇಳಿಕೆಯಲ್ಲಿದೆ.

"ಅಗ್ಗ ಆಗೇದಂತ ಹಿಗ್ಗಬ್ಯಾಡ್ರಲೇ
ಮಗ್ಗಲೆಲವು ಮುರಿದೇನು"[೫೦]

ಒಳ್ಳೆಯ ಪ್ರಾಸಬದ್ಧವಾಗಿ ಹೇಳಿದ ಈ ಹೇಳಿಕೆಗಳು ಸಮಾಜಕ್ಕೆ ಎಚ್ಚರಿಕೆಯ ಮಾತನ್ನು ತಿಳುವಳಿಕೆಯನ್ನು ಜನತೆಗೆ ನೀಡುತ್ತವೆ.

"ಬಡವನ ಕುರುಪಿಗೆ ಬಂಗಾರ ಅಣಸ ಹಾಕೇನಿ"[೫೧]

ಎಂಬ ಮಾತಿನಲ್ಲಿ ದುಡಿಮೆಗಾರರು ಕೂಲಿ ಹೆಚ್ಚಾಗುವುದರ ಸಂಕೇತ ಇಲ್ಲಿದೆ. ಮಳೆ ಸಕಾಲಕ್ಕೆ ಒದಗಿ, ಹುಲುಸಾಗಿ ಬೆಳೆದು, ಬಿಡುವಿಲ್ಲದೇ ಕೆಲಸ ಕೈಗೆ ದೊರಕುತ್ತದೆಂಬ ಭಾವ ಇಲ್ಲಿದೆ.

"ವಿಜಾಪುರ ಅಗಸಿಮ್ಯಾಲ ಹಂಗ ಕುಂತ್ಯು
ಕಲಬುರ್ಗಿ ಅಗಸಿ ಮ್ಯಾಲ ಕುಗಿ ಕುಂತ್ಯು
ಹಂಗಿನ ಬಾಯಂದು ಹವಳ ಬಿತ್ತು
ಕಾಗಿ ಬಾಯಂದು ರಗುತ ಬಿತ್ತು"[೫೨]

ಎಂಬ ಹೇಳಿಕೆ ಅಂದಿನ ರಾಜಕೀಯ ಸ್ಥಿತ್ಯಂತರವನ್ನು ಬಿಂಬಿಸುತ್ತದೆ. ೧೯೪೭ರಲ್ಲಿ ನಮ್ಮ ಭಾರತದೇಶ ಸ್ವಾತಂತ್ರ್ಯ ಪಡೆಯುವುದರ ಜೊತೆಗೆ ಕೆಲವು ಸ್ಥಾನಿಕ ದೊರೆಗಳು ತಮ್ಮ ಅಧಿಕಾರ ಸ್ವಾತಂತ್ರ್ಯ ಕಳೆದುಕೊಂಡರು ಕಲಬುರ್ಗಿ ಅಗಸಿ ಮ್ಯಾಲ ಕಾಗಿ ಕುಂತು, ಅದರ ಬಾಯಿಂದ ರಗುತ ಬಿತ್ತು. ಎಂಬ ಹೇಳಿಕೆಯಲ್ಲಿ ನಿಜಾಮನ ಆಡಳಿತ ಕೊನೆಗೊಂಡಿತೆಂಬುದೇ ಈ ಹೇಳಿಕೆಯ ಗೌಪ್ಯತೆಯಾಗಿದೆ. ಒಡೆಯರರಿಗೆ ರೈತರು, ಮಕ್ಕಳು ಎಂದರೆ ಬಲು ಪ್ರೀತಿ. ಒಮ್ಮೊಮ್ಮೆ ಸಲುಗೆಯಿಂದ ಪ್ರೀತಿಯಿಂದ ಮಾತನಾಡಿಸುತ್ತಾರೆ. ಧೈರ್ಯ ಹೇಳುತ್ತಾರೆ. ಹೆದರಿಸಿ ಗದರಿಸಿ ಜಕ್ಕಿಸುತ್ತಾರೆ. ಅವರೇ ಹೇಳುವಂತೆ ದೂರ

"ಕುಂಡರಬ್ಯಾಡ್ರೀ ಬರ್‍ರೆಲೆ ಗದ್ದಗಿ ಹಂತೇಕ ಕುಂಡರ ಬರ್‍ರಿ
ಭಂಡಾರ ಹಚ್ಚಗೋರಿ, ಗದ್ಗಿ ಮುಟ್ಟರಿ, ಕೌಲ ಕಟ್ರೀ
ಹೂ ಹಾರಸರಿ ನನ್ನ ಹೇಳಕಿ ತಪ್ಪಾಗಿದ್ರ ಈಗ ಹೇಳ್ರಿ
ಇನ್ನೊಮ್ಮೆ ಹೇಳತಿನಿ ಕೇಳ್ರಲೇ ಕೇಳ್ರಲೇ"[೫೩]

ಇಂತಹ ಹೇಳಿಕೆಗಳು ಸಾಮಾನ್ಯವಾಗಿ ಬಳಕೆಯಲ್ಲಿವೆ.

"ಎಲೇ ನಡಗಡ್ಯಾಗ ಹಂದ್ರ ಹಾಕಿ
ಚಪ್ಪನ್ನಾಡ ದೇಶಕ್ಕ ಭಿನ್ನ ಕೊಟ್ಟು
ಬಸವಗ ಶಿಸುವಿನ ತೊಟ್ಟಿಲದಾಗ ಹಾಕಿದ್ಯು
ಕಳಸಗಿತ್ತಿಗಿ ಕಳೆ ಬಂತಲೇ ಗಾಣಮಿಣಿ[೫೪]

ನೆಲ, ಜಲ, ಬದುಕು ಇವುಗಳ ಉಳಿವು ಮತ್ತು ರಕ್ಷಣೆಗೆ ಒಡೆಯರರ ಹೇಳಿಕೆಗಳು ಅಂತರಂಗದಲ್ಲಿ ಮಿಡಿಯುತ್ತವೆ. ರೈತ ದನಕರುಗಳು, ಆಕಾಶ, ಹವಾಮಾನ ಮಳೆ, ಬೆಳೆ ಇವು ಚೆನ್ನಾಗಿದ್ದರೆ ಸಮಾಜದ ಸ್ವಾಸ್ಥ್ಯ ಹಿತಕರವಾಗಿರುತ್ತದೆ. ಎಂಬುದು ಅವರಿಗೆ ಯಾವಾಗಲೂ ಮುಖ್ಯವಾಗುತ್ತದೆ. ಸಾಮಾಜಿಕ ಈ ಹೇಳಿಕೆಗಳ ಅರ್ಥ ತಟ್ಟನೆ ಅರ್ಥ ಆಗುವುದಿಲ್ಲ. ಅವು ಒಗಟಿನ ರೂಪದಲ್ಲಿ ಇರುತ್ತವೆ. ಸಂದೇಹದಿಂದಲೇ ಅವುಗಳನ್ನು ನೋಡಬೇಕಾಗುತ್ತದೆ. ಊಹೆ ಮಾಡಿ ನಿರ್ಣಯಕ್ಕೆ ಬರಬೇಕಾಗುತ್ತದೆ. ಉದಾಹರಣೆಗೆ:

“ಮುಸ್ಸಂಜೆಯಲ್ಲಿ ಗೂಗಿ ಕೂಗ್ಯಾವ”
“ಗಿಡಗಂಟ್ಯಾಗ ಹಕ್ಕಿ ಮರಿ ಮಾಡ್ಯಾವ”
“ಕುರಿಮರಿ ಮುದ್ದಿ ಆಗ್ಯಾವ”
“ಕೆರ‍್ಯಾಗ ಕಪ್ಪಿ ವಟ ವಟ ಮಾಡಾತಾವು”[೫೫]

ಪ್ರಾಣಿಗಳ ಲೋಕವನ್ನು ನೋಡಿದರೆ ಇಂತಹ ಹೇಳಿಕೆಗಳು ಮುಂದೆ ಮಳೆ ಬರುವ ಸೂಚನೆ ಕಂಡು ಬರುತ್ತವೆ. ಹೇಳಿಕೆಗಳು ಶಬ್ದ ಚಮತ್ಕಾರಕ್ಕಾಗಿ ಮೂಡಿ ಬಂದವುಗಳಲ್ಲ. ಅವುಗಳ ಹಿಂದೆ ಅಪಾರವಾದ ನಂಬಿಕೆ, ಆಚರಣೆ ಮತ್ತು ಜೀವನಾನುಭವ ಇರುತ್ತದೆ. ನಿಸರ್ಗದ ಕೂಸಾಗಿ ಜನರ ಏಳ್ಗೆಯ ಪ್ರತೀಕವಾಗಿ ನಿಂತಂತಹ ಹಾಲುಮತ ದೇವರ ಭಕ್ತರ ಇಂತಹ ಮಾತುಗಳಲ್ಲಿ ಸಾಮಾಜಿಕ ಆಶಯ ಇದೆ. ನೀತಿಯನ್ನು ಬದುಕಿನ ಬಗ್ಗೆ ಕಾಳಜಿಯನ್ನು ಹಾಗೂ ಭವಿಷ್ಯದ ಬಗ್ಗೆ ಭರವಸೆಯನ್ನು ಕಾಣುತ್ತೇವೆ. ಒಡೆಯರ ಹೇಳಿಕೆಗಳು ಜನ ಬದುಕಲೆಂದು ಹುಟ್ಟಿವೆ.

“ಬಾಳ ಮೆರಿಬ್ಯಾಡ್ರಿಪಾ
ಅನಗತ್ಯವಾಗಿ ಹಿಂಸೆ ಕೊಡಬ್ಯಾಡ್ರಿ
ಬಡವರ ಕುರುಪಿ ಕಾವ್ ಮುರಿಬ್ಯಾಡ್ರೀ
ಬಡವನ ರೊಟ್ಟಿಮ್ಯಾಲ ಕಲ್ಲ ಹಾಕಬ್ಯಾಡಿರಿ
ಹತ್ತಿ ಸಾಲಾಗ ಹೆಜ್ಜಿ ಎಣಿಸಬ್ಯಾಡ್ರಿ
ಭಾವ ಸುದ್ಧ ಇದ್ರ ಭಾಗ್ಯಕ್ಕೆ ಏನ ಕಡಿಮಿರ‍್ರೆಲೇ”[೫೬]

ಇಂತಹ ಹೇಳಿಕೆಗಳು ಬಡವರ ಮೇಲೆ ಬಲತ್ಕಾರ ಮಾಡಬಾರದು ಎಂಬುದನ್ನು ಕೆಲವು ಸಂಕೇತಗಳ ಮೂಲಕ ಹೇಳಲಾಗಿದೆ. ಬಡವರಿಗೆ ಎಷ್ಟೇ ಮೋಸ ಮಾಡಿದರೂ ಅದು ಮೋಸ ಮಾಡಿದವನಿಗೆ ಹತ್ತುತ್ತದೆ; ವಿನಃ ಬಡವನಿಗೆ ಅಲ್ಲ. ಭಾವ ಶುದ್ಧವಿದ್ದರೆ ಭಾಗ್ಯಕ್ಕೆ ಏನು ಕಡಿಮೆ ಎನ್ನುವ ವಾಕ್ಯ ತುಂಬಾ ಧ್ವನಿ ಪೂರ್ಣವಾಗಿದೆ. ಹೇಳಿಕೆಗಳು ಕೇವಲ ವ್ಯಕ್ತಿಗಳಿಗಷ್ಟೇ ಸೀಮಿತಗೊಳ್ಳದೆ ಸಮಾಜದ ಗತಿಗೂ ನೆರವಾಗುತ್ತದೆ. ಸಮಾಜದಲ್ಲಿಯ ಕೆಲವರ ಲೋಪದೋಷಗಳನ್ನು ಗುರುತಿಸಿ ಅದು ಕುಟುಂಬಕ್ಕೆ ಆಗಿರಬಹುದು, ವ್ಯಾಪಾರ ವಾಣಿಜ್ಯಕ್ಕೆ ಆಗಿರಬಹುದು, ಲೋಕ ವ್ಯವಹಾರಕ್ಕೆ ಆಗಿರಬಹುದು, ಯಾವುದೇ ಆಗಿರಬಹುದು ಇಂತಹ ಲೋಪದೋಷಗಳನ್ನು ಸರಿಪಡಿಸಿ ಆ ಮೂಲಕ ಜನರಲ್ಲಿ ಅರಿವು ಮೂಡಿಸುತ್ತದೆ. ಎಂಬುದು ಬಹಳ ಮುಖ್ಯವಾದ ಸಂಗತಿ ಆಗಿದೆ.

"ಎಪ್ಪಾ ಅಂದ! ರಾಜಕೀಯದೊಳಗ ಬದ್ಲ ಆಯ್ತು
ಒಕ್ಕಲಿಗ್ಯಾಗ ಸುಖ ಸಿಗಲಿಲ್ಲ. ಧಾರಣಿ ಗಗನಕ್ಕೆ ಏರ್ತು
ಎಷ್ಟೇ ಕಷ್ಟ ಬಂದ್ರೂ ಸಂರಕ್ಷಣೆ ಮಾಡ್ತಿನಿ ಅಂದ"[೫೭]

"ಎಷ್ಟ ಹೇಳಿದ್ರೂ ಕರಿತಲಿ ಮಾನವ ಸುಧಾರಸ್ತಿಲ್ಲ
ಮೂರು ಗಳಗಿ ಮೂರು ಕ್ಷಣದಾಗ ಮೂರು ತುಕಡಿ
ಮಾಡೀನೆಲೇ ಗಾಣಮಿಣಿ[೫೮]

ಹೇಳಿಕೆಗಳು ಸಮಾಜದ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಅರಿತುಕೊಳ್ಳುವಂತೆ ಮಾಡುತ್ತವೆ. ಭಕ್ತರು ಸಮಾಜಕ್ಕೆ ನೀಡಬೇಕಾದ ಕೊಡುಗೆಗಳು ಅವುಗಳನ್ನು ಹೇಗೆ ನೀಡಬೇಕು ನೀಡದಿದ್ದರೆ ಆಗುವ ತೊಂದರೆ ಏನು ಎಂಬ ಪರಿಜ್ಞಾನವನ್ನು ಜನತೆಯಲ್ಲಿ ಬೆಳೆಸುತ್ತವೆ. ಭಕ್ತರು ಸಮಾಜದಲ್ಲಿ ಸಂಘಜೀವಿಯಾಗಿ ವರ್ತಿಸುವ ರೀತಿಯನ್ನು ಸಂಘಟನಾತ್ಮಕವಾಗಿ ಮತ್ತು ಜವಾಬ್ದಾರಿಯುತವಾಗಿ ರೂಪುಗೊಳ್ಳಲು ಯಾವ ರೀತಿಯಾಗಿ ವರ್ತಿಸಬೇಕೆಂಬುದನ್ನು ಹೇಳಿಕೆಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನೀಡಿರುತ್ತವೆ. ಮನುಷ್ಯ ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು ಎಂಬ ನೀತಿಯನ್ನು ಅವು ತಿಳಿಸುತ್ತವೆ.

"ಹಿಂಡ ಹೊಲ ಹಿಡಿಯುವುದಕ್ಕಿಂತ
ತುಂಡ ಹೊಲ ಹಿಡಿರಿ[೫೯]

ಕಟ್ಟಲೇ ಕೌದಿ[೬೦]

ಎಲೆ ! ಮತ್ತಿನ ರಥ ಏರಿ
ಮುತ್ಯಾ ಹೇಳ್ಯಾನ ಮುಂದಿನ ದಿನಮಾನ
ಗೊಂಗಡ್ಯಾಗ ನೀರ ತಗೊಂಡ ದೇಶದ
ಮ್ಯಾಲ ಝಾಡಿಸೀನಿ[೬೧]

ಹೇಳಿಕೆಗಳು ಸಮಾಜಕ್ಕೆ ನೈತಿಕ ಪರಿಜ್ಞಾನವನ್ನು ರೂಪಿಸುವಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸಿವೆ. ಭಕ್ತರು ಯಾವಾಗಲೂ ಸಮಾಜ ಜೀವಿಯಾಗಿ, ಸಮಾಜದ ಮೌಲ್ಯಗಳ ರಕ್ಷಕರಾಗಿ ಬದುಕುವಂತೆ ಮಾಡುತ್ತವೆ. ಹೇಳಿಕೆಗಳು ಮನುಷ್ಯನನ್ನು ಉತ್ತಮನನ್ನಾಗಿ ಮಾಡುತ್ತವೆ. ತಂದೆ ತಾಯಿಗಳ ಹಾಗೂ ಹಿರಿಯರ ಆಚಾರ ವಿಚಾರಗಳು, ನಡೆ-ನುಡಿಗಳು, ಧಾರ್ಮಿಕ ನಂಬಿಕೆಗಳು, ಸಂಸ್ಕೃತಿ ಸಂಪ್ರದಾಯಗಳು, ಪ್ರೀತಿ ವಿಶ್ವಾಸ, ಸಹಕಾರ ಸಹಬಾಳ್ವೆ ಬೆಳೆಸಲು ಸಹಾಯವಾಗುತ್ತವೆ.

"ಕಾಡು ಕಾಲ ಹೋಯಿತು, ಚಿಂತಿ ಮಾಡಬ್ಯಾಡ್ರಿ
ನಿಮ್ಮ ಕೆಲ್ಸ ನೀವು ಮಾಡರಲೇ"[೬೨]

"ಪಲ್ಲಕ್ಕಿ ಹೋಗತೈತಿ ಹೂವು ಬೀಳತೈತಿ
ನನ್ನ ಪೌಳ್ಯಾಗ ನ್ಯಾಯದ ಕಟ್ಟಿ ಐತಿ.
ನೋಡಿ ನ್ಯಾಯಮಾಡಿ"[೬೩]

"ದಾನದ ಹುಗ್ಗಿ ಬಾಣದ ಹುಗ್ಗಿ
ಊರಿಗೆಲ್ಲ ಒಂದೇ ಹುಗ್ಗಿ ಬೀರಪ್ಪನ ಹುಗ್ಗಿ
ಬಂದ ಸಂಕಷ್ಟ ಬಂದ ಆಯ್ತು ಹುಗ್ಗಿ
ಉಂಡ ಹೋಗರಲೇ"[೬೪]

ಹೇಳಿಕೆಗಳಿಗೆ ಸಮುದಾಯದ ಹಲವಾರು ಸಮಸ್ಯೆಗಳನ್ನು ಬಿಡಿಸುವ ಸಾಮರ್ಥ್ಯವಿದೆ. ಕುಟುಂಬದಲ್ಲಿ ವ್ಯವಸ್ಥೆ ಸರಿ ಇಲ್ಲದಿದ್ರೆ ಭಕ್ತರಿರಲಿ, ದೈವದವರಿರಲಿ ಬೈದು ಬುದ್ಧಿ ಹೇಳುತ್ತಾರೆ.

"ಎಲೇ ಎಲೇ ಬಡವರನ್ನ ಬಗ್ಗಸ ಬ್ಯಾಡರಿ
ಅವರಿಗೆ ಕೊಡುವುದು ಕೊಡ್ರಿ ಇಲ್ಲದಿದ್ರ
ಬಸವಣ್ಣ ಚಲೋ ಮಾಡೂದಿಲ್ಲ: ಬಾಳೆ ಮುರದ
ಮೂರಾಬಟ್ಟಿ ಆಗತೈತಿ ತಿಳಿದ ನಡಕೋ
ಎಲೇ ಎಲೇ ತಂಗಿ ಏನ ಆಗೂದಿಲ್ಲ ನಾಲ್ಕು ಅಮಾಸಿ
ನನ್ನ ಗುಡ್ಯಾಗ ಇರ್ರಿ ನನ್ನ ಪೌಳಿ ಸೇವಾ ಮಾಡು
ಬಡಕೊಂಡ ಗಾಳಿ, ಧೂಳ, ಪತಾಗಿ ಹೊಕ್ಕೈತಿ ಹಿಡಿಭಂಡಾರ"[೬೫]

"ಎಲೆ ಮಕ್ಕಳಿರ್ಯಾ ಮೆಲ್ಲಕ ಮಾತನಾಡಿರಿ
ಎತ್ತು ಉಚ್ಚಿ ಹೋದ ಹಾಗೆ ಬ್ಯಾಡ
ಉದ್ದಾಗ ಜುಟ್ಟು ಹಿಡಿಬ್ಯಾಡರಲೇ
ಬಿದ್ದಾಗ ಕಾಲ ಹಿಡಿಬ್ಯಾಡರಲೇ ಬಗ್ಗಿ ನಡಿರಲೇ"[೬೬]

"ಎಲೆ! ಇರೋದ ಕಳಕೋಬ್ಯಾಡರಲೇ
ಕಳಕೊಂಡ್ರ ಕೂಡಿಸೋದ ಕಷ್ಟವಾಗತಲೇ
ಹೋಗಿರಲೇ"[೬೭]

ಹೀಗೆ, ಹೇಳಿಕೆಗಳು ಸತ್ಯ ನಿಷ್ಟುರವಾದವು, ವಸ್ತುನಿಷ್ಠವಾದವು, ಸಹಾನುಭೂತಿಪರ ನಿಲುವಿನಿಂದ ಕೂಡಿದವು, ನೀತಿ ಬೋಧನೆಯನ್ನು ಒಳಗೊಂಡವು, ಮಾನಸಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬಂದವು ಮತ್ತು ಸಮುದಾಯದ ಹಲವು ಮುಖಗಳನ್ನು ಒಳಗೊಂಡಿವೆ ಅಂದರೆ  ಸಂಸಾರ, ಗೆಳೆತನ, ಸಿರಿತನ, ಬಡತನ, ನ್ಯಾಯ,ನೀತಿ ಮುಂತಾದ ಎಲ್ಲ ಅಂಶಗಳನ್ನು ಒಳಗೊಂಡಿವೆ. ಅವುಗಳ ಬಗ್ಗೆ ಸಮುದಾಯದ ಸದಸ್ಯರಲ್ಲಿ ನಂಬಿಕೆ ಇದೆ. ಶ್ರದ್ಧೆ ಇದೆ. ಹಾಲುಮತ ದೈವಗಳಲ್ಲಿ ಶ್ರದ್ಧೆ ಬರುವಂತಹ ಸತ್ಯವನ್ನು ಒಡೆಯರರು ಸಾಧಿಸಿಕೊಟ್ಟಿದ್ದಾರೆ. ಅವರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದರೂ ಹೇಳಿಕೆಗಳ ರಚನೆಯಲ್ಲಿ ಅವರದೇ ಮೇಲುಗೈ. ಇದರಿಂದ ಅವರು ಭವಿಷ್ಯವನ್ನು, ಸಾಮಾಜಿಕ ಕಠೋರ ವಾಸ್ತವಗಳನ್ನು ಹೇಳುವ ದೈವೀಶಕ್ತಿಯನ್ನು ಪಡೆದುಕೊಂಡಿರುತ್ತಾರೆ.

ಹೇಳಿಕೆಗಳಲ್ಲಿ ಅವರ ಸ್ಪಷ್ಟ ನಿಲುವು, ಧೋರಣೆಗಳು ಖಚಿತವಾಗಿ ರೂಪುಗೊಂಡಿವೆ. ಒಡೆಯರರು ನಿರೂಪಿಸಿದ ಸಾಮಾಜಿಕ ಹೇಳಿಕೆಗಳಲ್ಲಿ ಅಂದಿನ, ಇಂದಿನ ಮತ್ತು ಮುಂದಿನ ಸಾಮಾಜಿಕ ಸ್ಥಿತಿಗತಿಯನ್ನು ಬಿಂಬಿಸುವುದರೊಂದಿಗೆ ಆದರ್ಶವಾದ ಮತ್ತು ಮಾದರಿಯಾದ ಸಮಾಜ ರಚನೆ ಅವರ ಮುಖ್ಯ ಉದ್ದೇಶವಾಗಿತ್ತು. ಆ ಮೂಲಕ ಹಾಲುಮತ ಸಂಸ್ಕೃತಿಯನ್ನು ಬೆಳೆಸುವ ಮಹತ್ವದ ಮಾರ್ಗವನ್ನು ನಿರೂಪಿಸಿದರು. ವಿನೀತ ಭಾವ ಬದುಕಿನಲ್ಲಿ ನೇರ ನಡೆ ನುಡಿ ಸಹ ಜೀವಿಗಳಲ್ಲಿ ಅನುಕಂಪ ಇವು ಒಡೆಯರರ ಸಾಮಾಜಿಕ ಹೇಳಿಕೆಗಳ ಪ್ರತೀಕವಾಗಿವೆ. ಹೇಳಿಕೆಗಳು ಭವಿಷ್ಯವಾಣಿಗಳಾಗಿವೆ. ಎಲ್ಲ ಸಮುದಾಯದ ಬದುಕಿನ ಬಗ್ಗೆ ಕಾಳಜಿ ಅವುಗಳಲ್ಲಿದೆ. ಸಹಾನುಭೂತಿಪರ ನಿಲುವು ಇದೆ. ಹೇಳಿಕೆಗಳಲ್ಲಿ ಸಾಮಾಜಿಕ ಚಿಂತನೆಯಿದೆ ಅವು ಯಾವಾಗಲೂ ಸಮಾಜಮುಖಿಯಾಗಿವೆ.

**೪.೨. ಧಾರ್ಮಿಕ ನೆಲೆ :**

ಕುರುಬರ ಹೇಳಿಕೆಗಳ ಧಾರ್ಮಿಕ ನೆಲೆಯನ್ನು ಕುರಿತು ವಿವೇಚಿಸುವಾಗ ಅದರ ಹಿಂದಿರುವ ತಾತ್ವಿಕತೆಯನ್ನು ಸಮಾಜೋಧಾರ್ಮಿಕ ನೆಲೆಯ ಕೆಲವು ಅಂಶಗಳನ್ನು ಸ್ಥೂಲವಾಗಿ ಚರ್ಚಿಸಿ ನಂತರ ಕುರುಬರ ಹೇಳಿಕೆಗಳ ಧಾರ್ಮಿಕ ನೆಲೆಯನ್ನು ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಸಮಾಜವು ವ್ಯಕ್ತಿಗಳ ಪರಸ್ಪರ ಸಂಬಂಧಗಳ ಬಲೆ. ವ್ಯಕ್ತಿಗಳ ಸಂಬಂಧಗಳು ವಿವಿಧ ರೀತಿಯಲ್ಲಿ ಬದಲಾವಣೆಯನ್ನು ಹೊಂದುತ್ತದೆ. ಸಾಮಾಜಿಕ ಬದಲಾವಣೆ ಎಂದರೆ ಸ್ಥೂಲವಾಗಿ 'ಸಾಮಾಜಿಕ ಸಂಬಂಧಗಳಲ್ಲಿ ಆಗುವ ಬದಲಾವಣೆಗಳು' ಎಂದು ಹೇಳಬಹುದು. ಸಾಮಾಜಿಕ ಸಂಬಂಧಗಳು ಅನೇಕ ವಿಧವಾಗಿರುತ್ತವೆ. ಈ ಸಂಬಂಧಗಳು ಸಮಾಜದಲ್ಲಿ ಒಂದಕ್ಕೊಂದು ಬಲೆಯಂತೆ

ಹೆಣೆದುಕೊಂಡಿರುತ್ತವೆ. ಯಾವುದಾದರೂ ಒಂದು ಸಂಬಂಧದಲ್ಲಿ ಬದಲಾವಣೆಯಾದರೂ ಸಾಧಾರಣವಾಗಿ ಉಳಿದ ಸಂಬಂಧಗಳಲ್ಲಿ ಹಲವು ರೀತಿಯ ಬದಲಾವಣೆಗಳಿಗೆ ದಾರಿಯಾಗಬಹುದು. ಈ ಬದಲಾವಣೆಗಳು ಸರ್ವವ್ಯಾಪಕವಾದುದರಿಂದ ನಾವು ಸಮಾಜವನ್ನು ನಿತ್ಯ ಪರಿವರ್ತನಶೀಲವೆಂದು ಹೇಳುತ್ತೇವೆ.

ಪ್ರತಿಯೊಂದು ಸಮಾಜವು ಪರಿವರ್ತನಶೀಲವಾದುದು. ಆದರೆ ಹಲವು ಆದಿವಾಸಿ ಸಮಾಜಗಳಲ್ಲಿ ಸಂಪ್ರದಾಯದ ಪ್ರಭಾವವು ಹೆಚ್ಚಾಗಿರುವುದರಿಂದ, ಅವುಗಳಲ್ಲಿ ಯಾವ ಬದಲಾವಣೆಯೂ ಆಗುತ್ತಿಲ್ಲವೆಂಬ ಭಾವನೆಯು ಮೂಡುತ್ತದೆ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವುಗಳಲ್ಲಿಯೂ ಬದಲಾವಣೆಗಳು ಗೋಚರಿಸುತ್ತವೆ. ಅವುಗಳ ತೀವ್ರತೆ ಮತ್ತು ವ್ಯಾಪಕತೆಗಳು ಆಧುನಿಕ ಸಮಾಜದಲ್ಲಿರುವಷ್ಟು ಇರುವುದಿಲ್ಲ. ಇಂದಿನ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳ ವೇಗವೂ ಸಾಮಾಜಿಕ ಪರಿವರ್ತನೆಯೂ ಆಧುನಿಕ ಸಮಾಜದಲ್ಲಿ ಮಾತ್ರ ನಡೆಯುತ್ತಿರುವ ವಿಷಯವೆಂಬ ಭ್ರಾಂತಿಯನ್ನು ಮೂಡಿಸುತ್ತದೆ. ಈ ಅನಂತ ಬದಲಾವಣೆಗಳು ನಮ್ಮನ್ನು ದಿಗ್ಭ್ರಮೆಗೊಳಿಸಿ ಸಮಾಜವು ಗುರಿ ಇಲ್ಲದೆ ಚಲನೆಗೆ ತುತ್ತಾಗಿದೆ ಎಂಬ ಭಾವನೆಯನ್ನು ಮೂಡಿಸುತ್ತದೆ. ಆದರೆ, ಪ್ರತಿಯೊಂದು ಸಮಾಜದಲ್ಲಿ ಬದಲಾವಣೆಯು ಹೇಗೆ ನೈಜವೋ ಹಾಗೆಯೇ ಸ್ಥಿರತೆಯ ಅಂಶ ಅದರ ಜೀವನದಲ್ಲಿ ಹಾಸುಹೊಕ್ಕಾಗಿರುತ್ತದೆ. ಸಮಾಜವು ನಿತ್ಯ ಪರಿವರ್ತನಶೀಲವಾದರೂ ಅದರ ಈಗಿನ ಸ್ಥಿರತೆಯೂ ಅದರ ಅವಿಭಾಜ್ಯ ಅಂಶವಾಗಿರುತ್ತದೆ. ಸಮಾಜವು ವಿವಿಧ ನಿಯಂತ್ರಣ ಸಾಧನಗಳ ಮೂಲಕ ತನ್ನ ಸ್ಥಿರತೆಯನ್ನು ಕಾಪಾಡಿಕೊಂಡು ಬರುತ್ತದೆ. ಸಮಾಜದ ಸಮಸ್ಯೆಗಳು ಚಲನಾತ್ಮಕವಾದುದು. ಅದು ನಿರ್ಜೀವ ವಸ್ತುವಿನ ಜಡ ಸಮಸ್ಥಿತಿಯಲ್ಲ. ಸಮಾಜವು ನಿತ್ಯ ಪರಿವರ್ತನಶೀಲವಾದ ಪ್ರಕ್ರಿಯೆಯಾದುದರಿಂದ ಅದು ಚಲನಾತ್ಮಕ ಸಮಸ್ಥಿತಿಯನ್ನು ಹೊಂದಿರುತ್ತದೆ.

ಸಾಮಾಜಿಕ ಬದಲಾವಣೆಗೂ ಮತ್ತು ನೈಸರ್ಗಿಕ ಬದಲಾವಣೆಗೂ, ಧಾರ್ಮಿಕ ಬದಲಾವಣೆಗೂ ಇರುವ ವ್ಯತ್ಯಾಸವನ್ನು ಇಲ್ಲಿ ಸೂಚಿಸುವುದು ಅಗತ್ಯ. ಬಹುತೇಕವಾಗಿ ಸಾಮಾಜಿಕ ಬದಲಾವಣೆಯು ಮಾನವನು ಬುದ್ಧಿ ಪೂರ್ವಕವಾಗಿ ನಿಯೋಜಿಸಿದುದು. ಅನೇಕ ಸಂದರ್ಭಗಳಲ್ಲಿ ಬದಲಾವಣೆಗಳು ನಾವು ಯೋಚಿಸಿದಷ್ಟು ಸರಳವಾಗಿರದೇ ಇರಬಹುದು ಅಥವಾ ನಾವು ನಿಯೋಜಿಸಿದ ಮಾರ್ಗದಲ್ಲಿ ಹೋಗದೆ ಇರಬಹುದು ಅಥವಾ ನಾವು ಭಾವಿಸಿದುದಕ್ಕಿಂತಲು ಹೆಚ್ಚಾಗಿ ಉತ್ತಮ ಅಥವಾ ಕೀಳು ಅಂಶಗಳಿಂದ ಕೂಡಿರಬಹುದು. ಹಲವು ಸಂದರ್ಭಗಳಲ್ಲಿ ನಮ್ಮ ಊಹೆಗೆ ನಿಲುಕದಂತೆ ಬದಲಾವಣೆಗಳಾಗಬಹುದು. ಯಂತ್ರಗಳ ಮತ್ತು ತಂತ್ರಗಳ ಉಪಯೋಗದಿಂದ ಸಮಾಜದಲ್ಲಾಗಿರುವ ವಿವಿಧ ಬದಲಾವಣೆಗಳು ಇದಕ್ಕೆ ಸಾಕ್ಷಿ. ಸಾಮಾಜಿಕ ಬದಲಾವಣೆಯ ಅಧ್ಯಯನದಲ್ಲಿ ಸಾಮಾಜಿಕ ಮೌಲ್ಯಗಳ ಅರಿವು ಅಗತ್ಯ. ಇಲ್ಲವಾದರೆ ಬದಲಾವಣೆಗಳು ಅರ್ಥವಿಲ್ಲದ ಸಂಗತಿಗಳಾಗುತ್ತವೆ.

ಸಾಮಾಜಿಕ ಮೌಲ್ಯಗಳು ವಿವಿಧ ಕಾಲಗಳಲ್ಲಿ ವಿವಿಧ ಸಮಾಜಗಳಲ್ಲಿ ಭಿನ್ನವಾಗಿರುತ್ತವೆ. ಇದಲ್ಲದೆ ಸಾಮಾಜಿಕ ಮೌಲ್ಯಮಾಪನವೂ ವಿವಿಧ ಸಮಸ್ಯೆಗಳಿಂದ ಕೂಡಿದೆ. ಎಲ್ಲ ಕಾಲ ದೇಶಗಳಲ್ಲಿ ಇರುವ ಮೌಲ್ಯಗಳನ್ನು ಅಳೆಯಲು ಒಂದು ಸಾಮಾನ್ಯ ಮಾಪಕವು ದೊರೆಯುವುದಿಲ್ಲ ಈ ಸಮಸ್ಯೆಗಳ ವಿಶ್ಲೇಷಣೆ ಈ ಅಧ್ಯಯನದ ಉದ್ದೇಶವಲ್ಲ. ಆದರೆ ಸಾಮಾಜಿಕ ಮೌಲ್ಯಗಳ ಅಂತಃಸತ್ವವನ್ನು ಗ್ರಹಿಸಿದಾಗಲೇ, ನಾವು ಸಾಮಾಜಿಕ ಬದಲಾವಣೆಯ ಅರ್ಥವನ್ನು ತಿಳಿಯುವುದು ಸಾಧ್ಯ ಎಂಬ ವಿಚಾರವನ್ನು ನೆನಪಿನಲ್ಲಿಡಬೇಕು ಬದಲಾವಣೆಗಳು ನಿರೂಪಿಸುವಾಗ ಅಧ್ಯಯನಕಾರರು ತಮ್ಮ ಉದ್ದೇಶ ಆಶಯಗಳ ಹಿನ್ನೆಲೆಯಲ್ಲಿ ತುಲನೆ ಮಾಡಬಾರದು.

ಸಮಾಜವು ನಿರಂತರವಾಗಿ ಬದಲಾಗುತ್ತಿರುವ ವ್ಯವಸ್ಥೆಯಾದುದುರಿಂದ ಸಾಮಾಜಿಕ ಪರಿವರ್ತನೆ ಎಂಬ ಪ್ರಕ್ರಿಯೆಯೂ ಯಾವುದಾದರೂ ಒಂದು ಸಮಾಜದಲ್ಲಿ ಕಾಣಸಿಗದೇ ಇರುವಂತಹ ವಿಶೇಷವೆಂದು ಹೇಳುವುದು ಅವೈಜ್ಞಾನಿಕ ಮಾತ್ರವೇ ಅಲ್ಲ ಅವಾಸ್ತವವೂ ಕೂಡ. ಆದುದರಿಂದ ಸಾಮಾಜಿಕ ಪರಿವರ್ತನೆಯೂ ಪ್ರಾಚ್ಯ ಸಮಾಜದಲ್ಲಿಲ್ಲ ಪಾಶ್ಚಾತ್ಯ ಸಮಾಜದಲ್ಲಿದೆ. ಪ್ರಾಚೀನ ಸಮಾಜದಲ್ಲಿಲ್ಲ ಆಧುನಿಕ ಸಮಾಜದಲ್ಲಿದೆ. ಬುಡಕಟ್ಟಿನ ಹಾಗೂ ಗ್ರಾಮೀಣ ಸಮಾಜಗಳಲ್ಲಿಲ್ಲ ನಗರ ಸಮಾಜದಲ್ಲಿದೆ ಎಂದು ಹೇಳುವುದು ತಪ್ಪಾಗುತ್ತದೆ. ಯಾವ ದೇಶದ್ದೇ ಆಗಿರಲಿ, ಯಾವ ಕಾಲದ್ದೇ ಆಗಿರಲಿ ಮತ್ತು ಯಾವ ಪ್ರಕಾರದ್ದೇ ಆಗಿರಲಿ ಮಾನವ ಸಮಾಜವು ಬದಲಾವಣೆಯ ಪ್ರಕ್ರಿಯೆಗೆ ಸಿಕ್ಕಿಕೊಂಡೇ ಇರುತ್ತದೆ. ಅದು ನಿರಂತರ ಚಲನಶೀಲವಾದ ಸಹಸ್ರಮುಖಿ ಚಕ್ರಗಳನ್ನುಳ್ಳ ರಥವಾಗಿ ಉರುಳುತ್ತಲೇ ಸಾಗಿರುತ್ತದೆ.

ಆದರಷ್ಟೆ, ಬದಲಾವಣೆಯು ಪ್ರಮಾಣಗತವಾದ ಪ್ರಕ್ರಿಯೆ. ಅಂದರೆ ಒಂದು ಸಮಾಜದಲ್ಲಿ ತೀವ್ರಗತಿಯಿಂದ ಬದಲಾವಣೆಯು ಕಂಡುಬಂದರೆ ಇನ್ನೊಂದು ಸಮಾಜದಲ್ಲಿಯ ಮಂದಗತಿಯ ಪರಿವರ್ತನೆಯು ಕಂಡುಬರುತ್ತದೆ. ಇಷ್ಟು ಹೇಳಿದರೆ ಎಲ್ಲ ಹೇಳಿದಂತೆಯೂ ಆಗಲಿಲ್ಲ. ಏಕೆಂದರೆ ಒಂದೇ ಸಾಮಾಜದಲ್ಲಿ ಸಾಮಾಜಿಕ ಸ್ತರಗಳಿಗೆ ಅನುಗುಣವಾಗಿ ಪರಿವರ್ತನೆಯ ಪ್ರಮಾಣವು ಭಿನ್ನವಾಗಿರುತ್ತದೆ. ಸಮಾಜವು ಕೇವಲ ಒಂದು ಗುಂಪು ಆಗಿರದೆ ಅನೇಕ ಗುಂಪುಗಳನ್ನು ಒಳಗೊಂಡ ಸಂಕೀರ್ಣ ವ್ಯವಸ್ಥೆಯಾಗಿರುತ್ತದೆ. ಈ ಗುಂಪುಗಳಾದರೂ ಸಮಾನ ಸ್ಥಾನಮಾನಗಳನ್ನು ಹೊಂದಿರದೆ ಏಣಿ ಶ್ರೇಣಿಗತವಾಗಿ ಸ್ತರವಿನ್ಯಾಸಗೊಂಡಿರುತ್ತವೆ. ಅಂದರೆ ಒಂದು ಗುಂಪು ಇನ್ನೊಂದು ಗುಂಪಿಗಿಂತ ಮೇಲಿನ ಮಟ್ಟದಲ್ಲೊ ಅಥವಾ ಕೆಳಗಿನ ಮಟ್ಟದಲ್ಲೊ ಇರುತ್ತದೆ. ಸಮಾನ ಅಂತಸ್ತಿನಲ್ಲಿವೆ ಎಂಬಂತಹ ಗುಂಪುಗಳಲ್ಲಿಯೂ ಸ್ತರಗಳು ಕಾಣಸಿಗುತ್ತವೆ. ಗುಂಪುಗಳು ಪಡೆದಿರುವ ಸ್ತರಗಳಿಗೆ ಅನುಗುಣವಾಗಿ ಪರಿವರ್ತನೆಯ ಪ್ರಮಾಣವು ಪ್ರಕಟವಾಗುತ್ತದೆ. ಮೇಲ್‌ಸ್ತರದವರು ಹೆಚ್ಚು ಶೀಘ್ರವಾಗಿ ಬದಲಾವಣೆಯನ್ನು ಸ್ವೀಕರಿಸಿದರೆ ಕೆಳಸ್ತರದವರ ಪರಿವರ್ತನೆ ನಿಧಾನವಾಗುತ್ತದೆ.

ಸಾಮಾಜಿಕ ಪರಿವರ್ತನೆ ಎನ್ನುವುದು ಒಂದು ಪ್ರತ್ಯೇಕವಾದ ಸಂಗತಿಯೇನೂ ಅಲ್ಲ. ಅದು ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಯಲ್ಲಿ ಕ್ರಿಯಾತ್ಮಕ ರೂಪದಲ್ಲಿ ಅಸ್ಥಿತ್ವದಲ್ಲಿದ್ದೇ ಇರುತ್ತದೆ ಎಂಬುದು ಸಾಮಾನ್ಯರ ಅನುಭವಕ್ಕೂ ಬಂದಿದೆ. ಸಮಾಜಶಾಸ್ತ್ರೀಯ ದೃಷ್ಟಿಗಂತೂ ಬಹುಸ್ಪಷ್ಟವಾಗಿ ಗೋಚರಿಸಿದೆ ಎಂದು ಈವರೆಗಿನ ವಿವರಣೆಯಿಂದ ಅರ್ಥವಾಗುತ್ತದೆ. ಆದರೆ ಬದಲಾವಣೆಯು ತನಗೆ ತಾನೇ ಸಂಚಲಿತವಾಗಿರತಕ್ಕಂಥ ವಿಶೇಷವೇನೂ ಅಲ್ಲ. ಅದಕ್ಕೆ ಅನೇಕ ಕಾರಣ ವಿಶೇಷಗಳಿವೆ. ಅಂತೆಯೇ ಅದು ಅನ್ಯ ವಿಶೇಷಗಳಿಗೆ ಕಾರಣವಾಗಿಯೂ ಮಾರ್ಪಡುತ್ತದೆ. ಹೀಗಾಗಿ ಅದು ಕಾರಣ ಪರಿಣಾಮಗಳೆರಡರ ಲಕ್ಷಣಗಳನ್ನು ಹೊಂದಿದೆ. ಸಾಮಾಜಿಕ ಬದಲಾವಣೆಯು ಸಹಜವಾದುದಾಗಿರಲಿ, ಯೋಜಿತವಾದುದಾಗಿರಲಿ ಅದು ಈ ಎರಡೂ ಗುಣಗಳನ್ನು ಪಡೆದಿದೆ ಎಂಬುದನ್ನು ಮರೆಯುವಂತಿಲ್ಲ.

ಭೌಗೋಳಿಕ ವಿಪರ್ಯಾಸಗಳು, ಜನಸಂಖ್ಯೆಯ ಏರಿಳಿತಗಳು, ಜನಸಂಖ್ಯೆಯ ಸಾಂದ್ರತೆಯ ಪ್ರಮಾಣದಲ್ಲಾಗುವ ವ್ಯತ್ಯಾಸಗಳು, ಜನರ ವಲಸೆಯ ಪ್ರಮಾಣ ದಿಕ್ಕುಗಳು, ಆರ್ಥಿಕ ಅಭಿವೃದ್ಧಿಯ ಅವನತಿಗಳು, ಸಾರಿಗೆ ಸಂಪರ್ಕಗಳ ಹೆಚ್ಚಳ ಅಥವಾ ಇಳಿಮುಖ, ಯಾಂತ್ರೀಕರಣದ, ವಿದೇಶೀ ಸಂಸ್ಕೃತಿಗಳ ಸಂಪರ್ಕ ಸಂಬಂಧಗಳು, ಕಾಯ್ದೆ ಕಾನೂನುಗಳ ಜಾರಿಗೊಳಿಸುವಿಕೆ, ಹಿಂತೆಗೆದುಕೊಳ್ಳುವಿಕೆ, ನಗರೀಕರಣದ ಪ್ರಮಾಣ, ಸಮಾಜಕಲ್ಯಾಣ ಸೇವೆಗಳ ಅನುಷ್ಠಾನ ಸ್ಥಗಿತ, ವಿದ್ಯಾವ್ಯಾಸಂಗದ, ಪ್ರಸಾರದ ಹರವು ಆಕುಂಚನ ಇತ್ಯಾದಿಗಳು ಕಾರಣ ವಿಶೇಷಗಳಾಗಿ ಸಾಮಾಜಿಕ ರಚನೆಯಲ್ಲಿ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಬದಲಾವಣೆಯನ್ನು ಬಿತ್ತುತ್ತವೆ.

ಪರಿವರ್ತನೆಯು ಸಮಾಜದ ಬೆಳವಣಿಗೆಯ ಲಕ್ಷಣವಾಗಿ ಪರಿವರ್ತನೆ ತನ್ನಷ್ಟಕ್ಕೆ ತಾನೇ ಉಂಟಾಗುವುದಲ್ಲ. ಹಲವಾರು ಕಾರಣಗಳು ಪರಿವರ್ತನೆಗೆ ಎಡೆಮಾಡಿ ಕೊಡುತ್ತವೆ. ಮಾನವನ ಅಂತರ್ಗತ ಜೀವನಕ್ಕೆ ಸಂಬಂಧಿಸಿದ ಸಂಗತಿಗಳು ಸಮಾಜದಲ್ಲಿ ಬದಲಾವಣೆ ಉಂಟುಮಾಡಬಹುದು. ಇಲ್ಲವೆ ಬಾಹ್ಯ ಪರಿಸರದ ಯಾವುದೇ ಅಂಶಗಳು ಬದಲಾವಣೆಗೆ ಪ್ರೇರಕವಾಗಬಹುದು. ಕಾರಣಗಳಲ್ಲಿ ಭೌಗೋಳಿಕ ಅಥವಾ ಭೌತಿಕ, ಜೈವಿಕ ಯಂತ್ರಜ್ಞಾನದ ಮತ್ತು ಸಾಂಸ್ಕೃತಿಕ ಅಂಶಗಳು ಪ್ರಾಮುಖ್ಯವಾದುವು. ಆದರೂ ಯಾವುದೇ ಪರಿಣಾಮಕ್ಕೆ ಇದೇ ಕಾರಣ ಎಂದು ಬೆರಳು ಮಾಡಿ ತೋರಿಸುವುದು ಕಷ್ಟಸಾಧ್ಯ. ಅಸಮಂಜಸ ಕೂಡ. ಏಕೆಂದರೆ ಜೀವನವು ಅಖಂಡವಾದುದು ಬದಲಾವಣೆಯೂ ಅಷ್ಟೇ. ಇಂದು ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳಲ್ಲಾದ ಮುನ್ನಡೆಯು ವಿಶ್ವದ ಉದ್ದಗಲಕ್ಕೂ ಹಲವಾರು ತೆರನಾದ ಬದಲಾವಣೆಗಳಿಗೆ ಪ್ರಮುಖ ಕಾರಣವಾಗಿದೆ. ಸದ್ಯ ನಾವು ಭಾರತವನ್ನು ಅನುಲಕ್ಷಿಸಿ ಜನಸಂಖ್ಯೆಯು ಸಾಮಾಜಿಕ ಬದಲಾವಣೆಗೆ ಒಂದು ಮೂಲಕಾರಣವಾಗಿದೆ ಎಂಬ ಬಗೆಗೆ ಮಾತ್ರ ವಿಶ್ಲೇಷಿಸಬೇಕಾಗಿದೆ.

ಸಾಮಾಜಿಕ ಪರಿವರ್ತನೆಯು ಏಕಮುಖವಾಗಿ ಸಾಗುವಂಥದಲ್ಲ. ಇದು ಪಾರಸ್ಪರಿಕ. ಜೈವಿಕ ಅಂಶಗಳು ಸಾಮಾಜಿಕ ಪರಿವರ್ತನೆಗೆ ಎಡೆಮಾಡಿಕೊಡುತ್ತವೆ. ಇದಕ್ಕೆ ಪ್ರತಿಯಾಗಿ ಜೈವಿಕ

ಅಂಶಗಳೂ ಕೂಡ ಸಾಮಾಜಿಕ ಪರಿವರ್ತನೆಯಿಂದ ಮಾರ್ಪಾಡು ಹೊಂದುತ್ತವೆ. ಜನಸಂಖ್ಯೆಯ ಗಾತ್ರ, ಅದರ ರಚನೆ, ಅನುಕ್ರಮವಾಗಿ ಸಾಗುತ್ತಿರುವ ಪೀಳಿಗೆಗಳ ಅನುವಂಶಿಕ ಗುಣಮಟ್ಟ ಮುಂತಾದವು ಜೈವಿಕ ಕ್ರಿಯೆಯ ಅಭಿವ್ಯಕ್ತಿಗಳು. ಇವು ಸಮಾಜದ ಮೇಲೆ ಪ್ರಭಾವ ಬೀರುವುದು ನಿಜ. ಆದರೆ ಜೈವಿಕ ಅಂಶಗಳೂ ಕೂಡ ಸಮಾಜದ ಪ್ರಭಾವಕ್ಕೆ ಹೊರತಾಗಿಲ್ಲ. ಜೈವಿಕ ಅಂಶಗಳು ಸಾಮಾಜಿಕ ಮನೋಭಾವನೆ ಮತ್ತು ಆಸಕ್ತಿಗಳಿಂದ ಚಾಲನೆ ಪಡೆಯುವ ಸಾಧ್ಯತೆ ಇರುತ್ತದೆ. ಏಕೆಂದರೆ ಲೈಂಗಿಕ ಸಂಬಂಧಗಳು, ವಿವಾಹ, ಜನಾಂಗ ಮಿಶ್ರಣ, ಕುಟುಂಬದ ಗಾತ್ರ ಮುಂತಾದವುಗಳು ಸಾಮಾಜಿಕ ಮನೋವೃತ್ತಿ ಮತ್ತು ಆಸಕ್ತಿಗಳ ನಿಯಂತ್ರಣಕ್ಕೆ ಒಳಪಟ್ಟಿರುತ್ತವೆ. ಜೈವಿಕ ಭೇದ, ಜನಸಂಖ್ಯೆಯ ಬಾಹುಳ್ಯ ಅಥವಾ ವಿರಳತೆ, ಫಲವತ್ತತೆಯ ಪ್ರಮಾಣ ಮುಂತಾದುವೆಲ್ಲವೂ ಯಾವುದೇ ಸಮಾಜದ ಸ್ಥಿತಿಗತಿಗಳಿಗೆ ಅನುಗುಣವಾಗಿರುತ್ತವೆ.

ಸಮಾಜದ ಸಂರಚನೆಯಲ್ಲಿ, ಧಾರ್ಮಿಕ ಚಲನೆಯಲ್ಲಿ ಅಲೆಮಾರಿತನವು ಒಂದು ಸಾಮಾಜಿಕ ಪ್ರಕ್ರಿಯೆಯಾಗಿ ಕಂಡುಬರುತ್ತದೆ. ಒಟ್ಟು ಭಾಷಿಕ ಅಥವಾ ಭಾಷಾಸಮುದಾಯದ ಒಂದು ಭಾಷಾ ಪರಿಸರದಿಂದ ಇನ್ನೊಂದು ಭಾಷಾಪರಿಸರದಲ್ಲಿ ನೆಲೆಸುವುದು. ಅದು ಶಾಶ್ವತವಾಗಿರಬಹುದು ಅಥವಾ ಋತುಮಾನಕ್ಕೆ ತಕ್ಕಂತೆ ಇರಬಹುದು. ಅದಕ್ಕೆ ಹಲವು ಕಾರಣಗಳಿವೆ. ಬಡತನ, ವಿದ್ಯೆ, ಉದ್ಯೋಗ, ಅತೀವೃಷ್ಟಿ, ಅನಾವೃಷ್ಟಿ ಇತ್ಯಾದಿ. ಒತ್ತಡ, ಆಕರ್ಷಣೆ ಮತ್ತು ಅನಿವಾರ್ಯತೆ ಇವು ಅಲೆಮಾರಿತನಕ್ಕೆ ಒತ್ತಾಸೆಯಾಗಿ ಕಂಡುಬರುತ್ತವೆ. ಕನಾಟಕದಲ್ಲಿ ಅಷ್ಟೇ ಅಲ್ಲ, ಭಾರತದ ಹಲವು ಸಮುದಾಯದವರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಾರೆ. ಇದರಿಂದ ಅವರ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಬದಲಾವಣೆಗಳಾಗುತ್ತವೆ. ಆಯಾ ಸಂದರ್ಭಕ್ಕೆ ಬರುವ ಹೇಳಿಕೆಗಳಲ್ಲಿ ಕುರುಬ ಸಮುದಾಯದ ಸಂಸ್ಕೃತಿ ಅಡಗಿರುತ್ತದೆ (ನಂಬಿಕೆ, ಆಚರಣೆ, ದೈವತ್ವ ಇತ್ಯಾದಿ). ಪಶುಪಾಲಕರಾಗಿರುವ ಕುರುಬರು ವಲಸೆ ಹೋಗುತ್ತಲೆ ಕೃಷಿ ಆಧಾರಿತ ಜೀವನಕ್ರಮವನ್ನು ಕಂಡುಕೊಂಡರು. ಕುರುಬರು ರೈತರನ್ನು, ರೈತರು ಕುರುಬರನ್ನು ಅವಲಂಬಿಸಿರುತ್ತಾರೆ. ಕುರುಬ ಸಂಸ್ಕೃತಿ ಆಯಾ ಪ್ರದೇಶದ ಕೃಷಿ ಸಂಸ್ಕೃತಿಯೊಂದಿಗೆ ಗುರುತಿಸಿಕೊಂಡಿದೆ. ಕುರುಬರು ಧಾರ್ಮಿಕ ನೆಲೆಯ ಹೇಳಿಕೆಗಳಲ್ಲಿ ಆ ಸಂಸ್ಕೃತಿಯ ಚಹರೆಗಳು ಕಂಡುಬರುತ್ತವೆ.

ಮನುಷ್ಯನ ಬದುಕಿನಲ್ಲಿ ಅಥವಾ ಸಮಾಜದಲ್ಲಿ ಧರ್ಮವು ಪ್ರಮುಖ ಪಾತ್ರವಹಿಸುತ್ತದೆ. ನಡೆ-ನುಡಿ, ಆಚಾರ-ವಿಚಾರ ಹಾಗೂ ಧಾರ್ಮಿಕ ನಂಬಿಕೆಗಳು ನಮ್ಮ ಪೂರ್ವಜರಿಂದ ಬಳುವಳಿಯಾಗಿ ಬರುತ್ತವೆ. ಇವುಗಳಲ್ಲಿ ಉತ್ತಮ ಅಂಶಗಳಿದ್ದು ಅವು ಸಾಮಾಜಿಕ ಮೌಲ್ಯವನ್ನು ರಕ್ಷಿಸುತ್ತವೆ. ಪರಿಸರ, ಕುಲ, ವಾಸಿಸುವ ಸ್ಥಳ ಇವುಗಳಲ್ಲಿ ಇದೆಲ್ಲ ವ್ಯಕ್ತವಾಗುತ್ತವೆ. ಹಾಲುಮತ ಸಂಸ್ಕೃತಿಯು ತನ್ನದೇ ಆದಂತಹ ಸಾಂಸ್ಕೃತಿಕ ಹಿನ್ನೆಲೆಯನ್ನು ಒಳಗೊಂಡಿದೆ. ಅದರ ಸಾಂಸ್ಕೃತಿಕ ಮಹತ್ವ ಅನನ್ಯವಾಗಿದೆ. ಕೃಷಿ ಸಂಸ್ಕೃತಿಯನ್ನು ಕೇಂದ್ರವಾಗಿಟ್ಟುಕೊಂಡ ಕುರುಬರ ಹೇಳಿಕೆಗಳು ಸಮುದಾಯದ ಅಭ್ಯುದಯಕ್ಕೆ ಕಾರಣವಾಗಿವೆ. ವ್ಯಕ್ತಿ ಸಮುದಾಯದ ಒಂದು ಅಂಗ. ಹಲವಾರು ವ್ಯಕ್ತಿಗಳು

ಒಂದು ನಿರ್ದಿಷ್ಟ ಚಟುವಟಿಕೆಗೆ ಏಕ ಅಭಿಪ್ರಾಯದಿಂದ ಕಾರ್ಯ ನಿರ್ವಹಿಸುತ್ತಾರೆ. ಇದರಲ್ಲಿ ಒಂದೇ ಧರ್ಮ, ಭಾಷೆ, ಸಂಸ್ಕೃತಿ, ನಂಬಿಕೆ ಹಾಗೂ ಆಚಾರ ವಿಚಾರಗಳನ್ನೊಳಗೊಂಡಿರುವ ವ್ಯಕ್ತಿಗಳಿರುವುದಿಲ್ಲ. ಆದರೂ ಸಮುದಾಯದ ನೆಮ್ಮದಿಗೆ ಎಲ್ಲರೂ ಸಹಕಾರದಿಂದ ಕಾರ್ಯನಿರ್ವಹಿಸುತ್ತಾರೆ.

ಕುರುಬ ಸಮುದಾಯದ ಒಡೆಯರರ ಹೇಳಿಕೆಗಳಲ್ಲಿ ಸಮುದಾಯದಲ್ಲಿ ಸಾಮರಸ್ಯ ತರಲು ಅನ್ಯೋನ್ಯತೆಯಿಂದ ಕೂಡಿ ಬಾಳುವ ಉದಾತ್ತತೆಯ ಭಾವನೆಯನ್ನು ಒಳಗೊಂಡಿದೆ. ಅವರು ತಮ್ಮ ಅನುಭವ ಮತ್ತು ಶ್ರದ್ಧೆಯಿಂದ ಬದುಕಿನಲ್ಲಿ ಜರುಗುವ ಭವಿಷ್ಯತ್ ಚಿಂತನೆಗಳನ್ನು ಹೇಳಿಕೆಗಳ ಮೂಲಕ ಅಭಿವ್ಯಕ್ತಿಸುತ್ತಾರೆ. ಎಂಬುದು ಗಮನಿಸಬೇಕಾದ ಸಂಗತಿ. ಒಡೆಯರರ ಹೇಳಿಕೆಗಳಲ್ಲಿ ಎಲ್ಲ ಸಮುದಾಯದವರೂ ಒಕ್ಕಟ್ಟಿರಬೇಕೆಂಬುದೇ ಬಯಸುತ್ತಾರೆ. ಹೇಳಿಕೆಗಳು ಯಾವುದೇ ಒಬ್ಬ ವ್ಯಕ್ತಿಯ ಕಲ್ಯಾಣಕ್ಕಾಗಿ ರಚಿತವಾದ ಸಾಹಿತ್ಯವಲ್ಲ. ಇಡೀ ಸಮಾನತೆಯ ಕಲ್ಯಾಣದ ದೃಷ್ಟಿಯಿಂದ ರಚಿತವಾದುದು. ಹೇಳಿಕೆಗಳಲ್ಲಿ ಸಮಷ್ಠಿ ಕಲ್ಯಾಣ ಇರುತ್ತದೆ. ಹೇಳಿಕೆಗಳಲ್ಲಿ ಮತ್ತೆ ಮತ್ತೆ ಕಂಡುಬರುತ್ತದೆ.

ಚಂದಾಗಿ ನಡಿರೇಲೇ ಹಾಳಾಗಿ ಹ್ವಾದಿರಿ
ಬೀರಪ್ಪಗ ಚಂದಗ ನಡಕೋರಿ
ಬೀರಪ್ಪ ಹೇಳಿದ ಮಾತ ಹುಸಿ ಹೋಗುದಿಲ್ಲ.[೬೮]

ಇವುಗಳನ್ನು ಗಮನಿಸಿದಾಗ ಉದಾತ್ತ ಆದರ್ಶ ಎದ್ದು ಕಾಣುತ್ತದೆ. ಕಾಲಾನುಕಾಲದಿಂದ ಮೌಖಿಕವಾಗಿ ಬರುವ ಈ ಹೇಳಿಕೆಗಳು ಕರ್ನಾಟಕ ತಲ ಸಂಸ್ಕೃತಿಯ ಅಂಶಗಳು ಉತ್ತರೋತ್ತರ ಪ್ರಗತಿಪಥದಲ್ಲಿ ಮುನ್ನಡೆಯುತ್ತಿವೆ.

ಅನ್ನ ದಾನಾ ಮಡರಲೇ  ಎಲ್ಲ ದಾನಕ್ಕಿಂತ ಅನ್ನದಾನ ಮುಖ್ಯರಲೇ
ತಿಳಕೊಂಡ ನಡಿರಿ ದೇವರು ದಿಂಡರು
ಮರಿಬ್ಯಾಡ್ರಿ[೬೯]

ಒಡೆಯರರ ಹೇಳಿಕೆಗಳು ಶುಭಾಗಮನವನ್ನು ತಿಳಿಸುತ್ತವೆ. ಧರ್ಮದ ಬಗ್ಗೆ ಅಚಲವಾದ ಶ್ರದ್ಧೆ ಇರಬೇಕೆಂಬುದೇ ಅವರ ಆಶಯವಾಗಿದೆ. ವ್ಯಕ್ತಿ ಸಮುದಾಯದಲ್ಲಿ ಬದುಕುವಾಗ ದೈವತ್ವದ ಪಾತ್ರವೂ ಮುಖ್ಯವಾದುದು. ದೇವರು ದಿಂಡಿರು ಇವು ಯಾವುದೇ ಒಂದು ಕುಲಕ್ಕೆ ಮಾತ್ರ ಸೀಮಿತವಾಗಿಲ್ಲ. ಸಮಾಜದಲ್ಲಿ ವ್ಯಕ್ತಿ ನೆಮ್ಮದಿಯಿಂದ ಬಾಳಲು ಅವನಿಗೆ ಸಮತೋಲನವಾದ ವ್ಯಕ್ತಿತ್ವ ಅಗತ್ಯ. ಆ ವ್ಯಕ್ತಿತ್ವ ರೂಪಗೊಳ್ಳುವುದು ಜಾತ್ಯಾತೀತ ಮನೋಭಾವನೆಯಿಂದ ಎಂಬುದನ್ನು ಒಡೆಯರರು ಮತ್ತೆ ಮತ್ತೆ ಸ್ಪಷ್ಟ ಪಡಿಸಿದ್ದಾರೆ.

ಒಣಾದ ಚಿಂತಿ ಮಾಡಬ್ಯಾಡರಲೇ
ಹೈರಾಣ ಆಗಬ್ಯಾಡ್ರಿ
ಇನ್ನ ಕೇಳರಲೇ ಲೋಕದ ಆಟ ಹಳ್ಳ ಪಳ್ಳಕ್ಕ ಹೋಗಬ್ಯಾಡಿರಲೇ
ಅಂದ ಇಂದ ಅನ್ನ ಬೇಡಿರಲೇ ಧರ್ಮಕ್ಕೆ ಬೆಲೆ ಕೊಡರಲೇ ಇದು
ಗೊರಗುದ್ದಿ ಇಟ್ಟಪ್ಪ ಸಾರಿ ಹೇಳ್ಯಾನ[೨೦]

ಸಮಷ್ಟಿ ಕಲ್ಯಾಣ ಇಂತಹ ಹೇಳಿಕೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಲೌಕಿಕ ಜೀವನದಲ್ಲಿ ಕಂಡುಬರುವ ಆಸೆ, ಆಮಿಸೆ, ಮನಸ್ತಾಪ, ಜಗಳ, ಅನ್ಯಾಯ, ಅತ್ಯಾಚಾರ ಇವುಗಳನ್ನು ಒಡೆಯರರು ಟೀಕಿಸುತ್ತಾರೆ.

ಈ ಕಲಿಯುಗದಾಗ ಧರ್ಮಕ್ಕ ಬೆಲೆ ಇಲ್ಲರಲೇ
ಕರ್ಮಕ್ಕ ಬಾಳ ಬೆಲೆ
ಧರ್ಮ ಬಿಡಬ್ಯಾಡರಲೇ ತಿಳಿಕೊಂಡ ನಡೀರಿ[೨೧]

ಒಡೆಯರರು ಬದುಕಿನಲ್ಲಿ ನಿರಾಸೆಯ ಚಿತ್ರಣವನ್ನು ಕೊಡುದಿಲ್ಲ. ಅವರ ಹೇಳಿಕೆಗಳಲ್ಲಿ ನೇರ ಮತ್ತು ದಿಟ್ಟತನವಿದೆ. ತಮಗೆ ಅನಿಸಿದ್ದನ್ನ ನೇರವಾಗಿ ಹೇಳುತ್ತಾರೆ. ಅಲ್ಲಿಯೂ ಸಹಿತ ಸಮಷ್ಟಿ ಕಲ್ಯಾಣದ ತತ್ವ ಅಡಕವಾಗಿದೆ ಎಂಬುದು ಬಹಳ ಮುಖ್ಯವಾದ ಸಂಗತಿ. ಅವರ ಹೇಳಿಕೆಗಳ ಧಾರ್ಮಿಕ ಆಶಯವೆಂದರೆ ಜನರಲ್ಲಿ ಹುದುಗಿದ ಸೌಹಾರ್ಧ ಭಾವವನ್ನು ಜಾಗೃತಗೊಳಿಸುವುದು. ಹೇಳಿಕೆಗಳು ಯಾವುದೇ ಧರ್ಮವನ್ನು, ಜಾತಿಯನ್ನು, ವ್ಯಕ್ತಿಯನ್ನು, ಟೀಕಿಸಿಲ್ಲ. ಯಾರ ಬಗ್ಗೆಯೂ ಹಿಂಸೆಯ ಮಾತುಗಳನ್ನು ಆಡಿಲ್ಲ. ಎಲ್ಲರಿಗೂ ಒಳ್ಳೆಯದಾಗಲಿ ಎಂಬ ಸಾಮಾಜಿಕ ಪ್ರಜ್ಞೆ ಮತ್ತು ಸಾಮಾಜಿಕ ಸಾಮರಸ್ಯತೆ ಇದೆ.

ಒಕ್ಕಲಿಗ್ಯಾ ಮಗನೀಗಿ ಎಷ್ಟು ಸುಧಾರಿಸಿ ಹೇಳಿದ್ರೂ
ಸಮಜವಾಗಲ್ಲೊಲ್ಲದು
ಹಂಡೆತ್ತ ಬಿಳಿಯೆತ್ತ ಹೂಡಿ ಬಿತ್ತುದ್ರಾಗ
ಹಂಡೆತ್ತ ಒಂದು ಗುಂಜಿ ಮುಂದಾಯಿತಲೇ ಗಾಣಮಿಣಿ[೨೨]

ಎಷ್ಟ ಹೆಳಿದ್ರೂ ಕರಿತಲಿ ಮಾವನಿಗ ಸಮಾಧಾನವಾಗಲೊಲ್ಲದು
ಹವಳ ಮುತ್ತ ತೂಕ ಮಾಡುದ್ರಾಗ ಮುಂಗಾರ ಮೂರು ಗುಂಜಿ
ಕಡಿಮೆ ಆತು, ಹಿಂಗಾರಿ ಮೂರು ಗುಂಜಿ ಹೆಚ್ಚಾತು ಬಸವಗ
ಬಾಲಗ, ಬಗಲಾಗ ಹಿಡಕೊಂಡು ದಂಡೀಗಿ ಹಚ್ಚೇನಿ ಬಸವನ ಚಿಕ್ಕಾ
ದಸರಗಿ ಹರಿದೀನಿ[೨೩]

ಕರಗಸದಂತೆ ಪಕ್ಷಪಾತರಹಿತವಾದ, ನ್ಯಾಯ ನಿಷ್ಟುರ ಗುಣದ ಭಾವವನ್ನು ಅಳವಡಿಸಿಕೊಂಡು ಒಡೆಯರರು ಇಂತಹ ಹೇಳಿಕೆಗಳನ್ನು ಹೇಳುವಾಗ ದೈವತ್ವಕ್ಕೆ ಶರಣಾಗುತ್ತಾರೆ. ಇದೇ ಭಾವನೆಯುಳ್ಳ ಭಕ್ತರೂ ಸಹಿತ ಅವರ ಸಂಗದಲ್ಲಿ ಇರಬಯಸುವವರು ಈ ಬಗ್ಗೆ ಎಚ್ಚರಿಕೆ ತೆಗೆದುಕೊಳ್ಳಬೇಕಾದ ಅಗತ್ಯವನ್ನು ಹಾಗೂ ಸಾಮಾನ್ಯರಿಗೆ ಇದು ಸಾಧ್ಯವಾಗುವ ಸ್ಥಿತಿಯನ್ನು ಸಹ ಅವರು ಭಾವಪೂರ್ಣವಾಗಿ ಹೇಳುತ್ತಾರೆ.

ಭಂಡಾರ ಹಿಡಿರಿಲೇ

ಅಜ್ಜನ ಅಂಬಲಿ ಉಂಡ ಹೋಗರಿಲೇ[೨೪]

ಎಂದು ಹೇಳುವಾಗ ಅವರ ಸಮರ್ಪಣಾ ಭಾವ ಕಂಡಾಗ ಈ ಲೋಕದ ಬಗ್ಗೆ ನಿರಾಸೆ ಮಾಯವಾಗಿ ಹೊಸ ಚೇತನ ಸಿಕ್ಕಿದಂತೆ ಭಾಸವಾಗುತ್ತದೆ. ಒಡೆಯರರು ಎಂದೂ ತಾರತಮ್ಯ ಮಾಡಿಲ್ಲ. ದುಡಿದು ತಿನ್ನು ಎಂಬ ಭಾವನೆ ಅವರ ಎಲ್ಲ ಹೇಳಿಕೆಗಳಲ್ಲಿಯೂ ಇದೆ. ಇನ್ನೊಬ್ಬರು ಕೊಟ್ಟದ್ದು ಶಾಶ್ವತವಲ್ಲ ಎಂಬ ಅರಿವಿನಲ್ಲಿ ಶರಣರಂತೆ ಅವರೂ ಕೂಡಾ ಕಾಯಕ ಸಿದ್ಧಾಂತ ಒಪ್ಪಿಕೊಂಡವರು. ಇರುವುದರಲ್ಲಿಯೇ ಆಳುಮಕ್ಕಳಿಗೆ ದಾಸೋಹ ಹಾಕಿದವರು.

ಹಿಡಿನುಚ್ಚ ಕೊಟ್ಟು
ನಿಮ್ಮ ಹುಚ್ಚ ಬಿಡಿಸ್ತೀನೇಲೇ ಗಾಣಮಿಣಿ[೨೫]

ಕಷ್ಟ ಬಂದದಂತ ಧೈರ್ಯ ಬಿಡಬ್ಯಾಡ್ರಿ ಹಿಂಗಾರಿ ಹಿಡ್ಯಾಗ

ಇಟಕೊಂಡ

ಮುಂಗಾರಿ ಉಡ್ಯಾಗ ಚಲ್ಯಾಡೇನಿ[೨೬]

ಇಂತಹ ಹೇಳಿಕೆಗಳಲ್ಲಿ ಅವರ ಮನಸ್ಸು ಅನಾವಶ್ಯಕ ತೊಳಲಾಟಗಳಲ್ಲಿ ಸಿಲುಕದೇ ಬದುಕಿನಲ್ಲಿ ಎಲ್ಲವನ್ನು ಒಪ್ಪಿಕೊಂಡಾಗಲೇ ಮನುಷ್ಯನಿಗೆ ಬಿಡುಗಡೆಯ ಭಾವ ಮತ್ತು ಸಂಸ್ಕೃತಿ ಇದ್ದೇ ಇದೆ. ಎಂಬುದು ಇಂತಹ ಹೇಳಿಕೆಗಳ ತಾತ್ಪರ್ಯವಾಗಿದೆ.

ತಂಗೀ ಅಂಜಬ್ಯಾಡ ಐದು ಅಮಾಸಿ ನನ್ನ ಗುಡಿಗಿ ಬಾ

ಹೂವು ಹಾರಸ್ ಬೆಕ್ಕಾ ಹಿಡಿದ ತಂದ್ ನಿನ್ನ ಕೈಯಾಗ ಕೊಟ್ಟೇನ್

ಮಕ್ಕಳ ಆಗತಾವ, ಹಿಡಿ ಭಂಡಾರ.[೨೨]

ಭೂಮಿಮ್ಯಾಲ ಕರ್ಮ ಹೆಚ್ಚಾಯಿತು. ಧರ್ಮ ಮುಳುಗ್ತಾಯಿದೆ

ಧರ್ಮಿಗಳ ರಾಜ್ಯ ಲೋಪಾಗಿ ಈ ಕಲಿಯುಗ

ಕರ್ಮಿಗಳದೇ ಆಟ ಆಗ್ತಾಯಿದೆ.[೨೮]

ಒಡೆಯರರು ತಮಗೆ ಅನಿಸಿದ್ದನ್ನು ಯಾವುದೇ ಮರ್ಜಿ ಮುಲಾಜಿಲ್ಲದೇ ನೇರವಾಗಿ ಹೇಳುತ್ತಾರೆ. ಸತ್ಯ ಯಾವಾಗಲೂ ನಿಷ್ಟುರವಾದುದು. ಅಲಗಿನಂತೆ ನೋವುಂಟುಮಾಡುವುದು. ಹೇಳಿಕೆಗಳು ಅದರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ ಇದ್ದಂತೆ ಅದರಿಂದ ದೊರಕುವ ಗೆಲವು ಅಮೋಘವಾದುದು. ಹಾಲುಮತ ದೈವಗಳಾದ ಬೀರಪ್ಪ, ಮಾಳಿಂಗರಾಯ, ಇಟ್ಟಪ್ಪ, ಮಾಯವ್ವ ಇವರನ್ನು ಗೆದ್ದುಕೊಂಡಂತೆ ಅಷ್ಟು ಕೃತಜ್ಞತಾ ಭಾವ ಬರುತ್ತದೆ. ಇಂತಹ ವಾಸ್ತವದ ಅರಿವು ಸತ್ಯ ಸಂಗತಿ ಹೇಳಿಕೆಗಳಲ್ಲಿದೆ. ಇದರಿಂದ ಸ್ಪಷ್ಟ ನಿಲುವು, ದೈವಿಶಕ್ತಿ ಪಡೆದುಕೊಳ್ಳುವುದು ಖಂಡಿತವಾಗಿದೆ.

ಕಪ್ಪಿ ಮಾಸಿನ್ಯಾಗ ಕಾಲ ಇಡಬಾರದಲೇ
ನುಡಿದಂತೆ ನಡೀರಿ ಬೀರಪ್ಪನ ಸಂಗ ಮಾಡಿರಲೇ    ನಿಮಗೆ ತಿಳಿದ ಹಾಗೆ ಮಾಡಬ್ಯಾಡರಿ[೭೯]

ಶುದ್ಧವಾದ ಆಚರಣೆಯನ್ನು ಕಪ್ಪಿ ಮಾಸಿನ ಕಲ್ಲಿಗೆ ಹೋಲಿಸಿ ಅದರಿಂದ ಎಚ್ಚರಿಕೆಯಿಂದ ಇರಬೇಕು, ಜಾಗೃತೆ ತಪ್ಪಬಾರದು ಒಂದು ವೇಳೆ ತಪ್ಪಿದರೆ ಸಮತೋಲನ ತಪ್ಪುತ್ತದೆ. ಎಂಬ ಭಾವ ಇಲ್ಲಿ ವ್ಯಕ್ತವಾಗಿದೆ. ಭಕ್ತಿಯನ್ನು ಮಾಡಬೇಕಾದರೆ ಇಂತಹ ಪರೀಕ್ಷೆಗಳನ್ನು ದೇವರು ಸೃಷ್ಟಿ ಮಾಡಿರುತ್ತಾನೆ. ಒಡೆಯರರ ಹೇಳಿಕೆಗಳು ಕತ್ತಿಯ ಅಲುಗಿನಂತೆ ಇರುತ್ತವೆ. ಅವು ಬದುಕಿನಲ್ಲಿ ನಿರ್ದಿಷ್ಟ, ಉದ್ದೇಶ ಸಾಧನೆಗೆ ನೆರವಾಗುವುದು ಖಚಿತ ಎಂಬ ನಿಲುವನ್ನು ಇಲ್ಲಿ ಕಾಣುತ್ತೇವೆ.

ಹುನ್ನ ಎಲ್ಲರಿಗೂ ಬರ್ತದಲೇ
ಅದಕ ಅಂಜಬ್ಯಾಡ್ರಿ
ಹುನ್ನ ಗುರು ಬೀರಪ್ಪಗ ಬಿಟ್ಟಿಲ್ಲ    ಭಂಡಾರ್ ಹಾಕರಲೇ[೮೦]

ಧಾರ್ಮಿಕ ನೀತಿ ನಿಯಮಗಳ ಪಾಲನೆಯಲ್ಲಿ ಒಡೆಯರರ ಹೇಳಿಕೆಗಳು ಮಹತ್ವದ ಪಾತ್ರ ವಹಿಸುತ್ತವೆ. ಲೋಕದಲ್ಲಿ ಭಕ್ತರಿಗೆ ಸಾಮಾಜಿಕ ನ್ಯಾಯ ಮೂಡಿಸುವುದೇ ಅವರ ಉದ್ದೇಶವಾಗಿದೆ. ಭಕ್ತರನ್ನು ಸದಾಚಾರದತ್ತ ಕೊಂಡೊಯ್ಯುವುದೇ ಅವರ ಮುಖ್ಯ ಧೇಯವಾಗಿದೆ.

ಒಡೆಯರರ ಹೇಳಿಕೆಗಳಲ್ಲಿ ಕ್ರೂರತನವಾಗಲಿ ಹಿಂಸೆಯಾಗಲಿ ಬರುವುದೇ ಇಲ್ಲ. ಅವರು ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಜನರ ಆದರ್ಶ ಸಮಾಜವನ್ನು ಕಟ್ಟ ಬೇಕೆಂದು ಅವರು ಬಯಸುತ್ತಿದ್ದರು. ತಮ್ಮ ವಿಚಾರಗಳನ್ನು ನೇರವಾಗಿ ನುಡಿದು ಜನರ ರೀತಿ ನೀತಿಗಳನ್ನು ಹೇಳಿ ತಿದ್ದುತ್ತಿದ್ದರು. ಒಡೆಯರರ ಹೇಳಿಕೆಗಳ ಪರಮಗುರಿಯಂದರೆ ಭವಿಷ್ಯದ ಜೀವನದಲ್ಲಿ ಕರ್ಮವು ಹೆಚ್ಚಾಗಿ ಧರ್ಮವು ಲಯವಾಗುತ್ತದೆ. ಎಂಬುದನ್ನು ಅರಿತು ಧರ್ಮದ ಉಳಿವಿಗಾಗಿ ನೈತಿಕ ಸಂಘರ್ಷವನ್ನು ನಡೆಸಿದರು. ಆದರ್ಶ ಸಮಾಜದ ಕನಸು ಕಾಣುತ್ತಿದ್ದ ಒಡೆಯರರು

ಸಮಾಜದಲ್ಲಿಯ ಲೋಪದೋಷಗಳನ್ನು ಕಂಡು ಮರಗುತ್ತಿದ್ದರು. ಕೌಟುಂಬಿಕ ಬಲೆಗೆ ಸಿಲುಕಿಕೊಂಡವರ ಬಗ್ಗೆ ಮನಸ್ಸಿನಲ್ಲಿ ತೀವ್ರ ಕಳವಳ, ತಾಪಗಳನ್ನು ಭಾವ ತೀವ್ರತೆಯಿಂದ ವ್ಯಕ್ತಪಡಿಸುತ್ತಿದ್ದರು.

ಎಲೇ! ಎಡಗಿಡ್ಡಾಗ ಹುತ್ತ ಹುಟ್ಟಿತು ಹುತ್ತ ಒಡದ ಮುತ್ತ ತಗದ್ಯಾ
ಮೆತ್ತಗ ಮಾಡಿ ನುಚ್ಚ ಕೊಡಬೇಕು ಅನೂದರಾಗ
ಇದಿಮಾಯಿ ರಂಡಿ ಇದಿರಿಗಿ ನಿಂತಳು[೮೧]

ಎಲೇ ನಡುಗಡ್ಯಾಗ ಹುತ್ತ ಹುಟ್ಟಿತು ಜೋಡ ಬಾರಿನ
ಬಂದೂಕ ತಗೊಂಡ ಹೊಡಿದರ ಪುಸ್ಸಂತ ರಾಮನ ಬಾನ
ಎತ್ತಿ ಹೊಡಿದರ ಬೇಲಿ ಬಿತ್ತು
ಬೇಲ್ಯಾಗ ಒಕ್ಕಲಿಗ್ಯಾ ಮಗನ ಸಂರಕ್ಷಣ ಮಾಡಿನಲೇ ಗಾಣಮಿಣಿ[೮೨]

ಮನಸಾ ಹಾಲಿನಂಗ್ ಬೆಳ್ಳಗ ಇರಬೇಕು ಸಮುದ್ರದಂಗ ದೊಡ್ಡ ಮನಸ್ ಇರಬೇಕು
ಬಂದ ಮನಸ್ಸಿನ್ಯಾಗಿನ ಕೆಲಸ ಆಕ್ತಾವ ಹಿಡಿ ಭಂಡಾರ[೮೩]

ಕೌಟುಂಬಿಕ ಜೀವನವನ್ನು ಸಮುದ್ರಕ್ಕೆ ಹೋಲಿಸಿ ಅದರಲ್ಲಿ ತೇಲಲಾಗದೇ ಮುಳಗಲಾಗದೇ ಮಧ್ಯಂತರದಲ್ಲಿ ಸಿಕ್ಕಿಕೊಂಡಿರುವ ಪರಿಸ್ಥಿತಿಯು ಅತ್ತೂ ಇಲ್ಲ ಇತ್ತೂ ಇಲ್ಲ ಅನ್ನುವಂತಾಗಬಾರದು ಎನ್ನುವ ತೀವ್ರ ಕಳಕಳಿ ಅವರ ಹೇಳಿಕೆಗಳಲ್ಲಿ ಅಭಿವ್ಯಕ್ತವಾಗಿದೆ. ಮನುಷ್ಯನ ಬಾಳು ಹಸನಾಗಿರಬೇಕು. ಯೋಗ್ಯ ಮಾರ್ಗದಲ್ಲಿ ಮುನ್ನಡೆಯಬೇಕು ಇಂತಹ ಸ್ಥಿತಿಯನ್ನು ಪರಿಹರಿಸಲು ಅಥವಾ ಇಂತಹ ಸ್ಥಿತಿಗೆ ದೈವದಿಂದಲೇ ಮತ್ತು ಧರ್ಮದಿಂದಲೇ ಸಾಧ್ಯವೆನ್ನುವುದು ನಂಬಿರುವುದು ಕಂಡುಬರುತ್ತದೆ.

ಹೇಳಿಕೆಗಳಲ್ಲಿ ಗುಡ್ಡ, ಬೆಟ್ಟ, ಬೆಂಕಿ, ಬಿಸಿಲು ಮುಂತಾದ ಪ್ರಾಕೃತಿಕ ಸಂಕೇತವಾದ ಶಬ್ದಚಿತ್ರಗಳು ಧಾರಾಳವಾಗಿ ಕಂಡುಬರುತ್ತವೆ. ಅವು ಬದುಕಿನ ಘೋರತೆಯನ್ನು ವ್ಯಕ್ತಪಡಿಸುತ್ತವೆ. ಬದುಕಿನ ಕಷ್ಟ ನಷ್ಟಗಳನ್ನು ಎದುರಿಸಿ ಯಶಸ್ವಿಯಾದವನೆ ನಿಜವಾದ ಭಕ್ತ ಎಂದು ಅವರು ಸಾರಿಸಾರಿ ಹೇಳಿದ್ದಾರೆ.

– ಗುರು ಇರಬೇಕು
ಗುರುವಿನ ಹೇಳಿಕೆ ಕೇಳಬೇಕು
ಗುರು ಮರೆತು ಬರೀ ಗರ್ವಮಾಡಿ ಹಾಳಾಗಿ ಹೋಗಬ್ಯಾಡ್ರಿ
ಗುರು ಬೀರಪ್ಪಗ ಮರೀಬ್ಯಾಡ್ರಿ[೮೪]

ಹೋಗಿ ಹೋಗಿ   ಹಗಲ ಕಂಡ ಬಾವಿ ರಾತ್ರಿ   ಜಿಗಿ ಬ್ಯಾಡರಲೇ
ಸಂಸಾರದಾಗ ಸಿಲಕಿ ಒದ್ದಾಡ ಬ್ಯಾಡ್ರಿ ಕಡಬಿ ಇಟ್ಟಪ್ಪನ ಮರಿಬ್ಯಾಡ್ರಿ[೮೫]

ಬಲೆಯಲ್ಲಿ ಸಿಲುಕಿದ ಪ್ರಾಣಿ ಎಷ್ಟು ಕಾಲ ಬದುಕಿ ಏನು ಪ್ರಯೋಜನ. ಅನಗತ್ಯವಾಗಿ ಸಮಸ್ಯೆಯನ್ನು ಮೈಮೇಲೆ ಹಾಕಿಕೊಳ್ಳಬಾರದು ಸ್ವತಂತ್ರ ಬದುಕು ಮುಖ್ಯ. ಸಂಸಾರದಲ್ಲಿ ಇದ್ದೂ ಇಲ್ಲದಂತೆ ಇರಬೇಕು ಇನ್ನೊಬ್ಬರಿಗೆ ತೊಂದರೆಯಾಗದಂತೆ ಬದುಕಲು ಕಲಿಯಬೇಕು. ಆ ರೀತಿ ಬದುಕಬೇಕಾದರೆ ನಿರಂತರವಾಗಿ ದೈವೀಶಕ್ತಿಯಲ್ಲಿ ಪ್ರಾರ್ಥನೆ ಸಲ್ಲಿಸಬೇಕು

ಗಾಳಿ ಬಿಟ್ಟಾಂಗ್ ತೂರಿಕೋಬ್ಯಾಡ್ರಿ
ಆದಾವನ್ರ ಆರಹೊತ್ತ ರಾತ್ರ್ಯಾಗ ನೆನಸಬೇಕರಲೇ   ಸುಖ ಬರತತಿ
ಹಿಡಿ ಭಂಡಾರ[೮೬]

ಇಂತಹ ಧಾರ್ಮಿಕ ಚಿತ್ರಗಳು ಸಂಸಾರದ ಅನಿತ್ಯತೆಯನ್ನು ಹೇಳುತ್ತವೆ. ಅನಿತ್ಯವಾದ ಸಂಸಾರವನ್ನು ನೆಚ್ಚಿ ಹಾಳಾಗಬೇಡಿ ಎಂಬ ಎಚ್ಚರಿಕೆ ನೀಡಲು ಸೂಕ್ಷ್ಮ ಸಂವೇದನೆಯ ರೂಪಕಗಳನ್ನು ಒಡೆಯರರು ಕೊಡುತ್ತಾರೆ. ದೈವತ್ವದ ಚಿಂತನೆಯಿಂದ ಮನಸ್ಸಿನಲ್ಲಿ ಪಾಪದ ಭಾವಗಳು ಕರಗಿ ಅಂತರಂಗ ಶುದ್ಧಿಯಾಗುವ ಬಗ್ಗೆ ಒಡೆಯರರು ಸಾರಿ ಹೇಳಿದ್ದಾರೆ. ಎಷ್ಟೇ ಸಿಟ್ಟಿನ ಮನುಷ್ಯ ದೇವರ ಜಗುಲಿಗೆ ಬಂದಾಗ ಅವನ ಸಿಟ್ಟು ಕಡಿಮೆಯಾಗುತ್ತದೆ; ಆಗಬೇಕು. ಅರಗು ಎಷ್ಟೇ ದೊಡ್ಡದಾಗಿರಲಿ ಉರಿಗೆ ತಾಗಿದಾಗ ಒಂದಿಷ್ಟು ಅವಶೇಷ ಉಳಿಯದಂತೆ ಕರಗಿ ಹೋಗುತ್ತದೆ. ಮನುಷ್ಯ ಜನ್ಮಕ್ಕೆ ಬಂದ ಪಾಪ ದೈವಿಕ ಚಿಂತನೆಯಿಂದ ಇಂಗಿ ಹೋಗುತ್ತದೆ.

ಮುರುಗಾನೂರ ಸಿದ್ಧ ಏನ ಹೇಳ್ಯಾನಂದೀರಿ! ಹಿಂಗಾರಿ ನಾಡಕ ಹಿಂಗಾರಿ
ಮುಂಗಾರಿ ನಾಡಕ ಮುಂಗಾರಿ   ಹಿಂಗಾರಿ ಮುಂಗಾರಿ ಕಾಟಾ
ಮಾಡುದು ರಾಗಿ ಜೋಡ ನುಚ್ಚಿನ ಕಟ್ಟಿ ಹಾಕಿನಲೇ ಗಾಣಮಿಣಿ[೮೭]

ಇಂತಹ ಹೇಳಿಕೆಗಳು ದೈವತ್ವವೂ ಒಳಗೊಳ್ಳುವ ಅಂತರಂಗ ಶುದ್ಧಿಯನ್ನು ಸಾಧಿಸಿಕೊಳ್ಳಲು ದಾರಿಯಾಗುತ್ತದೆ. ಎಂಬ ಸೂಚನೆಯನ್ನು ಸಹ ಒಳಗೊಳ್ಳುತ್ತವೆ. ಹೇಳಿಕೆಗಳು ಮನುಷ್ಯನ ಮನಸ್ಸಿನಲ್ಲಿ ಕಂಡುಬರುವ ಆತಂಕವನ್ನು ಬಯಲು ಮಾಡುತ್ತದೆ.

ನೋಡಬಾರದ ನೋಡತಿರಿ
ಕಾಣಬಾರದ ಕಾಣತಿರಿ
ಕಲಿಯುಗದಾಗ ಬಲ್ಲವರಾರು ತಿಳಿದ ನಡಿರಲೇ[೮೮]

ಎಂದು ಹಾಲುಮತದ ದೇವರ ಲೀಲೆಗಳನ್ನು, ಪವಾಡಗಳನ್ನು ಹೇಳುತ್ತಾರೆ. ಮನುಷ್ಯನನ್ನು ಸೃಷ್ಟಿಸಿ, ಪ್ರಪಂಚದಾಟವನ್ನು ನಡೆಸುತ್ತಿರುವ ಭಗವಂತನ ಜೊತೆಗೆ ನಾವು ವಿನಯ ಮತ್ತು

ಧನ್ಯತೆಯಿಂದ ನಡೆದುಕೊಂಡಾಗ ಬೆಟ್ಟದಂತಹ ಸಮಸ್ಯೆಗಳು ಮಂಜಿನಂತೆ ಮಾಯವಾಗುತ್ತವೆ. ಅಂತಹ ದೈವತ್ವದ ಪಾತ್ರ ಬಹಳ ಮುಖ್ಯವಾದುದು.

ಕುರುಬರ ಧಾರ್ಮಿಕ ಆಚರಣೆಗೆ ತಕ್ಕಂತೆ ಹಲವು ದೈವಗಳನ್ನು ಅವರು ಆರಾಧಿಸುತ್ತಾರೆ. ಬೀರದೇವರ ಪಲ್ಲಕ್ಕಿಯಾಗ ದೈವ ಮೈ ತುಂಬುವಾಗ ಅವರ ದೈವಿಭಕ್ತಿಯ ಪರಾಕಾಷ್ಟತೆಯನ್ನು ಮೆರೆಯುವ ಕಾರ್ಯಕ್ರಮವು ತುಂಬಾ ಅರ್ಥಪೂರ್ಣವಾಗುತ್ತದೆ. ದೇವರಸಿ ಅಥವಾ ಒಡೆಯರರ ಹೇಳಿಕೆಗಳ ಹಿಂದಿನ ದಿನ ನಿರಾಹಾರಿ ವ್ರತವನ್ನು ಆಚರಿಸುತ್ತಾರೆ. ಅಂದರೆ ಉಪವಾಸವನ್ನು ಆಚರಿಸುತ್ತಾರೆ. ಅನ್ನ ಆಹಾರ ಸೇವಿಸದೇ ಅಲ್ಪಪ್ರಮಾಣದ ಪ್ರಸಾದ ಸ್ವೀಕರಿಸಿ ದೇವರ ಗದ್ದುಗೆ ಮೇಲೆ ಏಕಾಗ್ರತೆಯಿಂದ ಕುಳಿತಿರುತ್ತಾರೆ. ಹಿಂದಿನ ದಿನ ಎಣ್ಣೆ ಮಜ್ಜನ ಸ್ನಾನ ಮಾಡಿರುತ್ತಾರೆ. ನಂತರ ದೇವರಿಸಿಯನ್ನು ಕರಿ ಕಂಬಳಿ ಹೊತ್ತುಕೊಂಡು ದೇವರ ಸದರಿಗೆ ಬಂದು ಕೂಡ್ರಿಸುತ್ತಾರೆ. ಆಗ ಆಳು ಮಕ್ಕಳು ಬೀರಪ್ಪನ ಅಥವಾ ಹಾಲುಮತ ದೈವಗಳ ಪೂಜೆ ಮಾಡುವಂತೆ ಸೂಚಿಸುತ್ತಾರೆ. ದೇವರಸಿಯೂ ಹಲವು ವಿಧಿ ವಿಧಾನಗಳ ಮೂಲಕ ದೇವರ ಸೇವೆಯನ್ನು ಮಾಡುತ್ತಾರೆ. ಪೂಜೆ ಆದ ನಂತರ ಬಿಳಿಕಂಬಳಿಯನ್ನು ಹೊತ್ತುಕೊಂಡು ಬಲಗೈಯಲ್ಲಿ ಕೋಲನ್ನು ಹಿಡಿದುಕೊಂಡು ದೇವರಸಿ(ಒಡೆಯರರು) ಗುಡಿಯ ಪೌಳಿಗೆ ಬರುತ್ತಾರೆ. ಆಗ ಅವರ ಸುತ್ತಲೂ ಆಳು ಮಕ್ಕಳು ಭಕ್ತರು ಇರುತ್ತಾರೆ. ಅವರಿಗೆ ದೇವರು ಮೈತುಂಬಿ ಬರುವುದರಿಂದ ಅವರ ಮೈಮೇಲೆ ದೇವರು ಬರುತ್ತಾನೆಂಬ ನಂಬಿಕೆ ಇದೆ. ಅವರ ಬಾಯಿಂದ ಬಂದ ಮಾತುಗಳು ಸತ್ಯವಾಗುತ್ತವೆ. ಎಂದು ಜನರು ಏಕಾಗ್ರತೆಯಿಂದ ಧಾರ್ಮಿಕ ಹೇಳಿಕೆಗಳನ್ನು ಕೇಳುತ್ತಾರೆ.

ಕಣ್ಣೀಲಿ ನೋಡಬಾರದು
ಮುತ್ತಿನ ಸೆರಗ ಹಿಡಿರಿ
ಹೊಟ್ಟಿಮ್ಯಾಲ ಕೈ ಇಟ್ಟು
ಪಿಂಡಾಂಡ ನೋಡ್ಯಾನ ನಿಂಗ ಬೀರಣ್ಣ ಹೇಳಿಕೆ ಹೇಳ್ಯಾನ[೯]

ಕೇಳರಲೇ ನ್ಯಾಸರಗಿ ದಾಟಿ
ಪಶ್ಚಿಮ ಸೂರ್ಯ ಮುಳುಗುದರೊಳಗ ಕುರಿ ಹುಲ್ಲ ತಿಂದ ಹಿಕ್ಕಿ ಬಿದ್ದಾವ
ಈ ವರ್ಷ ಆಗಬಾರದ ಆಕ್ಕತಿ ಎಲ್ಲ ಚಲೋನ ಆಕ್ಕತಿ[೧೦]

ಹೀಗೆ, ದೇವರಸಿ ಮೈಮೇಲೆ ಬಂದು ನಿಲ್ಲುತ್ತಾನೆ. ಆಸರೆಗಾಗಿ ತನ್ನ ಎರಡೂ ಕೈಯಿಂದ ಆಳು ಮಕ್ಕಳ ಹೆಗಲ ಮೇಲೆ ಕೈ ಇಟ್ಟಿರುತ್ತಾನೆ. ಕಟ್ಟಿದ ಕೆಂಪು ಮಡಿ(ವಸ್ತ್ರ)ಯನ್ನು ಹಿಡಿದುಕೊಂಡು ಅವರ ಭುಜಗಳ ಸಹಾಯದಿಂದ ದಾಟಿ ಹೋಗುತ್ತಾನೆ.

ಸುಖಾ ಯಾವಾಗ ಐತರಲೇ
ಎಲ್ಲರಿಗೂ ಸುಖಾ ಐತಿ
ಐತಿ ಅಂದ್ರ ಐತಿ, ಇಲ್ಲಂದ್ರ ಇಲ್ಲ
ಅಲಗ ಚುಂಚಿಗೊಂಡ ಈ ಮಾತ ಹೇಳ್ತಿನಿ
ನನ್ನ ಕುದರಿ ಏರಿ ಈ ಮಾತ ಹೇಳ್ತಿನ್ರಿ[೧೧]

ಎಂದು ದೇವರಸಿಯು ಹೇಳುತ್ತಾನೆ. ಆದಿತ್ಯವಾರ ಹಾಲುಮತ ದೇವರಿಗೆ ಪವಿತ್ರ ದಿನ. ಅದು ಆ ಸಮುದಾಯಕ್ಕೂ ಪವಿತ್ರ ದಿನ. ಅಂದು ತಾವು ನಡೆಸುವ ಯಾವುದೇ ವಿಧಿ ವಿಧಾನಗಳಿಗೆ ಕಾರ್ಯಕ್ಕೆ ತಮ್ಮ ದೇವರ ಕೃಪೆ ಇರುವುದೆಂದು ಈ ಸಮುದಾಯದವರು ಭಾವಿಸುತ್ತಾರೆ. ಹಾಲುಮತ ಸಮುದಾಯದವರಿಗೆ ಜಾತ್ರೆ, ಉತ್ಸವ, ಯುಗಾದಿ, ಮಹಾನವಮಿ, ದೀಪಾವಳಿ, ಕಡೆಯ ಸೋಮವಾರ ಇವು ತುಂಬ ವಿಶೇಷ ದಿನಗಳು. ವರ್ಷಕ್ಕೆ ಒಮ್ಮೆ ಜಾತ್ರೆಗಳು ನಡೆಯುತ್ತವೆ. ಕಡಬಿ ಇಟ್ಟಪ್ಪನ ಜಾತ್ರೆ, ಕೊಣ್ಣೂರ ಕರಿಸಿದ್ದೇಶ್ವರ ಜಾತ್ರೆ, ಚಿಂಚಲಿ ಮಾಯವ್ವನ ಜಾತ್ರೆ, ಅಲಕಿನೂರ ಕರಿಸಿದ್ದೇಶ್ವರ ಜಾತ್ರೆ, ಯರಝರ್ವಿ ಕರಿಸಿದ್ದೇಶ್ವರ ಜಾತ್ರೆ ನಡೆಯುತ್ತವೆ. ಜಾತ್ರೆಯ ದಿನ ವಿಶೇಷ ಪೂಜೆಗಳು, ಆಚರಣೆಗಳು ನಡೆಯುತ್ತವೆ. ಸಾಕಷ್ಟು ಪ್ರಮಾಣದ ಭಕ್ತರು ಸೇರಿರುತ್ತಾರೆ. ಆ ದಿವಸ ಇಳಿ ಹೊತ್ತಿನಲ್ಲಿ ಪವಾಡಗಳು, ಹರಕೆಗಳು, ಹೇಳಿಕೆಗಳು ಧಾರಾಳವಾಗಿ ನಡೆಯುತ್ತವೆ. ನಗಾರಿಯ ಸಪ್ಪಳ, ಡೊಳ್ಳಿನ ನಾದ, ಗಂಟೆಗಳ ನಾದ, ಚಾಂಗಬೋಲೋ, ಹರಹರ ಮಹಾದೇವ, ಬೀರಪ್ಪ ನಿನ್ನ ಹಾಲ್ಕ ಉಧೋ ಉಧೋ ಎಂಬ ಉದ್ಘೋಷಗಳು ತಾರಕಕ್ಕೆ ಮುಟ್ಟುತ್ತವೆ. ಸುತ್ತಲೂ ಅಭೂತಪೂರ್ವ ವಾತಾವರಣ ನಿರ್ಮಾಣವಾಗುತ್ತದೆ. ಊರಿನ ಹಿರಿಯರು 'ಬಾಳ ಕಾಡಸಬ್ಯಾಡ ಹೇಳಿಕೆ ಹೇಳು' ಎನ್ನುತ್ತಾರೆ. ಹೇಳಿಕೆ ಹೇಳಿ ನಿನ್ನ ಹೊಟ್ಯಾಗಿಂದ ಬಿಟ್ಟ ಹೇಳ ಎಂದು ಪಲ್ಲಕ್ಕಿ ಮೇಲೆ ಭಂಡಾರ ಹಾಕುತ್ತಾರೆ.

ಮಕ್ಕಳಿರಾ ಈ ವರ್ಷ ನನ್ನ ಜಾತ್ರಿ ಮಾಡಲಿಲ್ಲ
ನನಗೂ ಕೋಪ ತಾಪ ಬಂದೈತಿ
ನನ್ನ ತೇರ ಅರ್ಧಕ್ಕ ನಿಂತತಿ
ಅದು ಮುಗಿಲಿಲ್ಲ ಕಣ್ಣೀಲಿ ನೋಡಿ
ಸುಮ್ಮನ ಆಗತಿರಿ ಮುಂದಿನ ವರ್ಷಕ್ಕಾದ್ರೂ
ನನ್ನ ಜಾತ್ರಿ ಮಾಡ್ರಿ[೧೨]

ಭೂಮಿ ಮ್ಯಾಲ ಕರ್ಮ ಹೆಚ್ಚಾಗತತಿ
ಧರ್ಮ ಮುಳಗತಾಯಿದೆ

ಸತ್ಯವಂತರ ಕಾಲ ಹೋಗಿ
ಕಲಿಯುಗದಾಗ ಕರ್ಮಿಗಳ ಕಾಟ
ಹೆಚ್ಚಾಗೇತಿ
ಭಂಡಾರದಿಂದ ಭಂಡಾರ ಉಳಿತೈತಿ
ಹುಷಾರಿಲೇ ಬದುಕರಲೇ[೯೩]

ಎಂಬ ಹೇಳಿಕೆಗಳು ಅವರ ಧಾರ್ಮಿಕ ಮನೋಭಾವವನ್ನು ಎತ್ತಿ ತೋರಿಸುತ್ತದೆ. ಒಗಟಿನ ರೂಪದ ಇಂತಹ ಹೇಳಿಕೆಗಳು ಸಹಿತ ನಂಬಿಕೆಯಿಂದ ಕೂಡಿದವು. ಜಾತ್ರೆ-ಉತ್ಸವಗಳಲ್ಲಿ ರಾಜಕೀಯ, ಸಾಮಾಜಿಕ, ಐತಿಹಾಸಿಕ ಮತ್ತು ಧಾರ್ಮಿಕ ವಿಷಯಗಳ ಕುರಿತಾಗಿ ಅನುಭವದ ಹಿನ್ನೆಲೆಯಲ್ಲಿ ಹೇಳುವಂತಹ ಹೇಳಿಕೆಗಳೂ ರೂಢಿಯಲ್ಲಿವೆ. ಒಡೆಯರರ ಹೇಳಿಕೆಗಳಲ್ಲಿ ಸಾವಿರಾರು ಜನ ಭಕ್ತರು ಸೇರಿರುತ್ತಾರೆ. ಒಡೆಯರರ ಚುಟುಕಾದ ನುಡಿಗಳಲ್ಲಿ ಭಕ್ತರ ಭವಿಷ್ಯ ಅಡಗಿರುತ್ತದೆ. ಅವನು ಹೇಳುವ ನುಡಿಯಲ್ಲಿ ನಂಬಿಕಿಯೇ ಮುಖ್ಯವಾಗಿರುತ್ತದೆ. ಆರಾಧ್ಯ ದೈವದ ಬಗ್ಗೆ ನಂಬಿಕೆ ಇಟ್ಟುಕೊಳ್ಳಬೇಕು.

ಗುಡ್ಡದಾಗ ಕಳಗೊಂಡ ಆಕಳ ಕರದಂಗ ಕಕ್ಕಾಬಿಕ್ಕಿ
ಆಗಬ್ಯಾಡರಿ ನಿಮ್ಮ ಹಿಂದ
ಕಡಬಿ ಇಟ್ಟಪ್ಪ ಅದಾನ ಅರುಹೊತ್ತಿನ್ಯಾಗ
ಕರಿರಿ ಬರ್ತಾನ ನಿಮ್ಮ ಹಿಂದ್ ನಿಲ್ಲತಾನ
ಇಟ್ಟಪ್ಪನ ನಂಬಿ ನಡಿರಿಲೇ ನಂಬಿದವನಿಗೆ ಭಾಷೆ ಕೊಟ್ಟಾನ್[೯೪]

ಎಂದಾಗ ದೈವದ ಮೇಲಿನ ನಂಬಿಕೆ ಮುಖ್ಯವಾಗಿರುತ್ತದೆ. ಜನತೆಯ ಭವಿಷ್ಯಕ್ಕಾಗಿ ಕೆಟ್ಟ ಕಣ್ಣಿನ ಕಾಟ ಬಾಧಿಸಬಾರದೆಂದು ದೈವದ ಹೇಳಿಕೆ ಹೇಳುತ್ತದೆ. ಮಕ್ಕಳಿಗೆ ಕಾಯಿಲೆಗಳು ಬಂದಾಗ ಬೀರಪ್ಪನ ಪಲ್ಲಕ್ಕಿಯಲ್ಲಿ ಮಲಗಿಸುತ್ತಾರೆ. ಆಗ ಬರುವ ಹೇಳಿಕೆ.

ಕೂಸುಗ ಬಂದ್ ಕಾಯಿಲೆ
ಬಂದ ದಾರಿಲೆ ಹೊಕೈತಿ
ಮೂರುದಾರಿ ಕೂಡುವಲ್ಲಿ
ಅದಕ್ಕ ಬೇಕಾದಂತಹ ಸಿಹಿ ಅಡುಗೆ
ಇಡ್ರಿ, ಒಡಿ ಭಂಡಾರ್[೯೫]

ಬೀರಪ್ಪನ ದೇವರಸಿ ಕೂಸನ್ನು ಕಂಬಳಿಯ ಸಹಾಯದಿಂದ ಆ ಕೂಸಿನ ತಂದೆ-ತಾಯಿಗೆ ಕೊಡುತ್ತಾರೆ. ಕಂಬಳಿಯಲ್ಲಿ ಕೂಸನ್ನು ಹಾಕಿ ದೇವರಸಿ ಎರಡುಸಾರಿ ನಿವಾಳಿಸಿದರೆ ಮಕ್ಕಳಿಗೆ

ಯಾವುದೇ ತೊಂದರೆ ಬರುವುದಿಲ್ಲ. ಎಂಬ ನಂಬಿಕೆಯಿದೆ. ಹುಲಜಂತಿಯಲ್ಲಿ ಪ್ರತಿವರ್ಷ ದೀಪಾವಳಿ ಅಮವಾಸ್ಯೆಯಂದು ಜಾತ್ರೆ ನಡೆಯುತ್ತದೆ. ಆ ಜಾತ್ರೆಯ ವಿಶೇಷವೆಂದರೆ ಅಮವಾಸ್ಯೆಯ ಮಧ್ಯರಾತ್ರಿ ಮಾಳಿಂಗರಾಯನ ಸಮಾಧಿ ಪಕ್ಕದಲ್ಲಿರುವ ಬನ್ನಿಗಿಡ ಮತ್ತು ಗುಡಿಯ ಪಂಚಕಳಸಗಳಿಗೆ ಶಿವನೆ ಬಂದು ಮುಂದಾನ ಹಾಡುತ್ತಾನೆ ಆಗ ಬರುವ ಹೇಳಿಕೆ.

ಒಂದು ಹುತ್ತಕ್ಕೆ ಒಂಭತ್ತು ಬಾಗಿಲು
ಒಂದು ವರ್ಷ ಒಂಭತ್ತು ಕಡೆ ನೋಡೇತಿ
ಹುಷಾರ್ ಆಗಿ ಜಲ್ಮಗಳಿಗೆ ಇದು ಮಾಳಿಂಗನ
ಮಾತ ಹುಸಿ ಹೋಗುದಿಲ್ಲ.[೯೬]

ಸತಿ–ಪತಿ ಹಿತದಿಂದ ಕೂಡಿ ಇರಬೇಕು, ಧರ್ಮ–ರೀತಿ ನೀತಿಯಿಂದ ಕೂಡಿ ಬಾಳೆ ಮಾಡಬೇಕು ದೈವ–ದೇವರನ್ನು ನಂಬಬೇಕು ತಲಿಲೆ ನಡೆದುಕೊಳ್ಳಬೇಕು.

ನೀರ ಹೊರಗಿನ ಮೀನ್
ಬಲಿ ತಪ್ಪಿದ ವರ್ಷದ
ಹಂಗ ಬಾಳೆ ಆಗಬಾರದು
ನೆಲೆ ಕಳಕೊಂಡ ಹುಡಿಕ್ಯಾಡ
ಬ್ಯಾಡರಿಲೇ[೯೭]

ಎಂದು ಎಚ್ಚರಿಕೆ ಕೊಡುತ್ತಾರೆ. ಬೀರಪ್ಪನ ವಾರ ಪ್ರತಿ ರವಿವಾರ 'ನಿಮ್ಮ ಮನ್ಯಾಗ ಇರುವ ಕುರಿ–ಟಗರುಗಳಿಗೆ ಭಂಡಾರ ಹಚ್ಚಿ, ಹೂವಿನ ಹಾರ ಹಾಕಿರಿ ಅಂದರೆ ನಿಮಗ ಬಂದಂತಹ ಎಲ್ಲ ಪೀಡೆಗಳು ಹೊಕ್ಕಾವ್' ನೈವೇಧ್ಯ ಮಾಡಿದ ಅಡುಗೆಯನ್ನು ಕಲಿಸಿ ಹೊಲದ ತುಂಬ ಚೆಲ್ಲುತ್ತಾರೆ. ಇದಕ್ಕೆ ಚರಗ ಚೆಲ್ಲುದು ಎನ್ನುತ್ತಾರೆ. ಚೆರಗ ಚೆಲ್ಲಿದ ರೀತಿಯಲ್ಲಿ ಮುಂದಿನ ವರ್ಷದೊಳಗ ಕುರಿಸಂಖ್ಯೆ ಹೆಚ್ಚಾಗಲಿ ಎಂಬ ನಂಬಿಕೆ ಅಲೆಮಾರಿ ಕುರುಬರಲ್ಲಿದೆ. ಭಕ್ತರು ಕುರಿ ಪೂಜೆ ಮಾಡಬೇಕೆಂಬ ಹಲವು ಧಾರ್ಮಿಕ ಹೇಳಿಕೆಗಳಿವೆ :

ಕುರಿ ಇಳಿದು ಎಂಟು ದಿವಸಾಯಿತು
ಹಟ್ಟಿ ತುಂಬ ಹಿಕ್ಕಿ ಹಾಕೇತಿ
ನಮ್ಮ ಗುಡಿಗೆ ಕುರಿ ಹಾಲ ಬೇಕ್
ಕುರಿ ಹಂಗ ನಿಮ್ಮ ಬಳ್ಳಿ ಹಬ್ಬತೈತಿ[೯೮]

ಹಿಂದ್ ಆಗಬಾರದು ಆಗೇತಿ
ಮುಂದ್ ಆಗಬಾರದು ಆಕೈತಿ
ಬಡಬಗ್ಗರ ಬಂದರ್ ದಾನ-ಧರ್ಮ
ಮಾಡಿರೀಲೆ ಕೊಡುಕೈ ಆಗಬೇಕು
ನಾಲ್ಕು ಮಂದಿ ನೆನೆಸುತಾರ
ನೆನಸು ಹಂಗ ಬಾಳೆ ಮಾಡಬೇಕು[೯೯]

ಇಂತಹ ಹೇಳಿಕೆಗಳಲ್ಲಿ ದಾನ-ಧರ್ಮದ ಮಹತ್ವ ಹೇಳುತ್ತಾರೆ. ಧಾರ್ಮಿಕ ನಂಬಿಕೆ ಇದ್ದರೆ ಪರಂಪರಾಗತ ಸಂಸ್ಕೃತಿ ಉಳಿಯುವುದು ಒಂದು ವೇಳೆ ಮನುಷ್ಯ ಸತ್ತರೂ ಅವನು ದೇವರ ಮೇಲೆ ಇಟ್ಟಿರುವ ನಂಬಿಕೆ ಸಾಯುವುದಿಲ್ಲ. ಹೇಳಿಕೆ ಮಾಡಿದ ದೇವರಿಸಿಗೆ ಭಕ್ತ ಭಂಡಾರ ಹಾಕಿ ನಮಸ್ಕರಿಸುತ್ತಾರೆ. ಪ್ರತಿ ಹುಣ್ಣಿಮೆ, ಅಮವಾಸ್ಯೆ ಮತ್ತು ಆಯಾ ದೇವರದ ನಿರ್ದಿಷ್ಟ ವಾರದಂದು ಹೇಳಿಕೆಗಳಾಗುತ್ತವೆ.

ಮರಕ್ಕೆ ಬಾಯಿ ಬೇರಿಲ್ಲ ಬೇರಿಗಿ ನೀರ ಹಾಕಿದರ್ ಬೆಳಿ ಬರತ್ತದ್
ಮುಂದ್
ಬೇಕಾದ್ ಆಗತತಿ[೧೦೦]

ಎತ್ತ ನೋಡಿದರ ಭರಮಪ್ಪ ಎತ್ತ ನೋಡಿದರ್ ಬೀರಪ್ಪ
ಭಕ್ತಿಲೆ ನಡೆದುಕೊಳ್ಳಿರಿ
ಆಗುವ ಕೆಲಸ ಆಗತ್ಯೆತಿ[೧೦೧]

ಹಾಲುಮತ ಸಂಸ್ಕೃತಿಯಲ್ಲಿ ಅಥವಾ ಜನಪದ ಆಚರಣೆಗಳಲ್ಲಿ ಬಹುತೇಕ ಆಚಾರ-ವಿಚಾರ, ನಡೆ-ನುಡಿಗಳು ಧಾರ್ಮಿಕ ನಂಬಿಕೆಯ ಹಿನ್ನೆಲೆಯಲ್ಲಿ ಮೂಡಿಬಂದಿರುತ್ತವೆ. 'ಕರೀ ಕಟ್ಟುವುದು', 'ವಾರಾ ಬೀಡುವುದು', 'ಕರಿಮರಿ ಹರಿಯುವುದು', 'ಕುರುಬರ ಬೋಣಿಗೆ' ಮುಂತಾದ ಸಾಮಾಜಿಕ ಸಂದರ್ಭದಲ್ಲಿ ಹೇಳಿಕೆಗಳು ಕಂಡು ಬರುತ್ತವೆ. ಅಲ್ಲೆಲ್ಲ ಶ್ರದ್ಧೆ-ನಂಜಿಕೆ ಇರುತ್ತದೆ.

ಹಸಿರು ಗುಡಿಸಲು ಹಾಕಿರಿ
ಭರಮಪ್ಪ ಮೀಸಲು ಅಕ್ಕಿ ಮಾಡಿ ನಿವದಿ ಮಾಡಿರಿ ಆಳು ಮಕ್ಕಳನ್ನು
ಕರೆದುಕೊಂಡು
ಬನ್ನಿರಿ ಹಿಡಿ ಭಂಡಾರ[೧೦೨]

ಹೇಳಿಕೆಗಳು ಮುಗಿದ ನಂತರ ಬೀರದೇವನ ಸೇವೆಗೆ ಒಕ್ಕಲು ಮತ್ತು ಜಾತ್ರೆಗೆ ಬಂದ ಇತರ ದೈವಗಳ ಒಕ್ಕಲಿಗರು ಮೀಸಲು ಒಪ್ಪಿಸುವ ಕಾರ್ಯ ನಡೆಯುತ್ತದೆ. ಅದರಲ್ಲಿ ಬೀರಪ್ಪನ ಒಕ್ಕಲಿಗರು ೧೦ ಸೇರು ಅಕ್ಕಿ ೧೦೧ ರೂ ಗಳ ಕಾಣಿಕೆಯನ್ನು ನೀಡುವರು ಹೊರ ಒಕ್ಕಲಿಗರು (ಅಪರಿಚಿತ ಭಕ್ತರು) ೧೫ ಸೇರು ಅಕ್ಕಿ ಮತ್ತು ೫೦೧ ರೂ ಗಳ ಕಾಣಿಕೆಯನ್ನು ನೀಡುವರು ಹೀಗಾಗಿ ಒಟ್ಟಿದ ಅಕ್ಕಿ ಹಾಗೂ ಹಣವನ್ನು ಬೀರಪ್ಪನ ದೇವಸ್ಥಾನದ ಅಭಿವೃದ್ಧಿಗೆ ಬಳಸಿಕೊಳ್ಳಲಾಗುತ್ತದೆ. ಹೇಳಿಕೆಗಳು ಮುಗಿದನಂತರ ವಾದ್ಯಗಳ ಮೇರವಣಿಗೆ ನಡೆಯುತ್ತದೆ. ಜಾತ್ರೆಗೆ ಬಂದಂತಹ ಎಲ್ಲ ದೇವರುಗಳು ಕಂಬಳಿ ಗದ್ದುಗೆಗಳನ್ನು ತಯಾರಿಸಿ ಕುಳ್ಳಸಿರುವರು

ಬೇವಿನ ಗಿಡಕ್

ಕರಿಗೊಂಗಡಿ ಹಾಕಿ ಈ ವರ್ಷ ಹೊಲದಾಗ ಹೊನ್ನ ಬಿತ್ತೀರಿ[೧೦೩]

ಗುಡ್ಡದ ದಂಡ್ಯಾಗ

ಹೊಳಿದಂಡಿ ಹೊಲದಾಗ ಬೆಳ್ಳಿ ಕೂರಿಗೆ ತುಂಬೆತಿ[೧೦೪]

ಎಂಬ ಹೇಳಿಕೆ ಈ ವರ್ಷ ಫಲವತ್ತತೆ ಆಗುತ್ತದೆ ಎಂಬುದನ್ನು ಒಡೆಯರರು ರೈತರಿಗೆ ಹೇಳುತ್ತಾರೆ. ಆ ರೀತಿ ಆದರೆ 'ಬೇವಿನ ಎಲೆಯಲ್ಲಿ ಎಕ್ಕಿಯ ಎಲೆಯಲ್ಲಿ ಮುತ್ತಿನ ಹುಡಿಯಕ್ಕಿ ಹಾಕಿಕೊಂಡ ಬರ್ರಿ' ಎಂದು ಹೇಳುತ್ತಾನೆ. ಬೀರಪ್ಪನ ದೇವರಸಿ ಇವೆಲ್ಲ ಧಾರ್ಮಿಕವಾಗಿ ಬಹಳ ಮುಖ್ಯವಾಗಿವೆ.

ಒಡೆಯರರು ಪಲ್ಲಕ್ಕಿ ಸೇವೆಯಾಗುವಾಗ ಕೆಲವು ಸಲ 'ಸದರ' ಮೇಲೆ ನಿಂತು ಹೇಳಿಕೆ ಹೇಳುತ್ತಾರೆ. 'ಸದರ್' ಎಂದರೆ ದೇವರ ಗದ್ದುಗೆ ಅಥವಾ ಪೀಠ ಎಂದರ್ಥ. ಅದಕ್ಕೆ ಹಾಲುಮತ ಸಮುದಾಯದಲ್ಲಿ ಮಹತ್ವದ ಸ್ಥಾನವಿದೆ.

ಸದರ್ ಏರಿ ಬೀರಪ್ಪ ಕುಂತಾನ

ಸದರ್ ಮ್ಯಾಲ ಕುಂತ ಹೇಳಿಕೆ

ಹುಸಿ ಹೋಗುದಿಲ್ಲ ತಂಗಿ ತಲಿಮ್ಯಾಲ

ಸೆರಗ ಹಾಕೋ, ತಮ್ಮ ತಲಿಮ್ಯಾಲ

ವಸ್ತ್ರ ಹಾಕೋ ಉಡಕ್ಕಿ ಹಿಡಿಯಿರಿ

ನಿಮ್ಮ ಮನಸ್ಸಿನ್ಯಾಗಿಂದ ಬಿಚ್ಚಿ ಹೇಳಿರಿ[೧೦೫]

ಸದರ ಏರಿ ಕುಂತ ದೇವರಸಿ ಒಡೆಯರ ಮಾತು ಗಟ್ಟಿಮಾತು ಆ ಮಾತು ಕೇಳಲು ಭಕ್ತರಿಗೆ ಬೀರಪ್ಪ ಬೇಡಿದ್ದನ್ನು ಕೊಡುತ್ತಾನೆ. ಎಂಬ ನಂಬಿಕೆ ಇದೆ. ಸದರ್ ಎಂದರೆ ಮೂಲ

ಗದ್ದುಗೆ. ಗಂಡ ಹೆಂಡತಿ, ಅಣ್ಣ-ತಮ್ಮ ಜಗಳಾಡಿದರೆ 'ಬೀರಪ್ಪನ ಸದರ ಮುಟ್ಟ' ಎನ್ನುತ್ತಾರೆ. ಸದರ್ ಎಂದರೆ ನ್ಯಾಯಪೀಠ ಎಂಬ ಭಾವನೆಯೂ ಇದೆ. ದೇವರ ಸದರ್ ಕಟ್ಟುವುದು ಮತ್ತು ಅಲ್ಲಿ ಎಲೆಪೂಜೆ ಮಾಡುವುದು ಒಂದು ಆಚರಣೆಯಾಗಿ ಬೆಳೆದಿದೆ.

ಚೆಂದಂಗಿ ಕೇಳಿಲೇ
ಸದರ್ ಮ್ಯಾಲ ಕುಂತ ಹೇಳತನ್
ಕಂಬಳಿ ಗದ್ದಿಗಿಮ್ಯಾಗ ಕರಿ ಮಲ್ಲಿಗೆ ಏರ್‍ಯಾವ ನಿಂಗ ಬೀರಣ್ಣ ಅಲ್ಲಿ ಸದರ
ಏರತಾನ ಮನಿ ಬೆಳಗತತಿ ಭೂಮಿಮ್ಯಾಗ ಬೆಳಿ ಬೆಳಗತತಿ[೧೦೬]

ಹೀಗೆ, ದೇವರಸಿ ಹೇಳಿಕೆಯಾದಾಗ ಭಕ್ತರು ತಮ್ಮ ಭಕ್ತಿ ಇದಷ್ಟು ಕಾಣಿಕೆ ಕೊಡುವರು ಅಷ್ಟರಲ್ಲಿ ಕಂಬಳಿಯನ್ನು ಹೊತ್ತ ಮುತ್ತೈದೆಯೊಬ್ಬಳು ಕೈಯಲ್ಲಿ ಆರತಿ ಎತ್ತಿಕೊಂಡು ದೇವರಸಿಯ ಬಲಭಾಗಕ್ಕೆ ಬಂದು ನಮಸ್ಕರಿಸುತ್ತಾರೆ. ನಂತರ ವಾಲಗದವರು ವಾಲಗದ ಸೇವೆಮಾಡುತ್ತಾರೆ. ಹಾಲುಮತ ದೈವಗಳ ಮಹತ್ವದ ಕಾರ್ಯ ಸಮುದಾಯ ನಿಯಂತ್ರಣ ಮತ್ತು ಸಮುದಾಯ ರಕ್ಷಣೆ ಜೊತೆಗೆ ಆಧ್ಯಾತ್ಮಿಕ ಮೌಲ್ಯಗಳನ್ನು ತುಂಬುವುದು. ದೇವರು, ದೈವ, ಭಕ್ತಿ ನೈತಿಕತೆಯ ಬಗ್ಗೆ ಉದಾತ್ತತೆಯನ್ನು ಬೆಳೆಸುವುದು ಹಾಲುಮತ ಪೀಠಗಳು ಕಾಲಕ್ಕೆ ತಕ್ಕಂತೆ ಧರ್ಮದ ತಳಹದಿಯ ಮೇಲೆ ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಹಮ್ಮಿಕೊಳ್ಳುತ್ತದೆ. ಈಗಾಗಲೇ ಈ ನಿಟ್ಟಿನಲ್ಲಿ ಹಾಲುಮತ ದೈವದ ಪೀಠಗಳು ಹೆಚ್ಚಿನ ಕಾರ್ಯವನ್ನು ಮಾಡುತ್ತಿವೆ. ಸಮುದಾಯದಲ್ಲಿ ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ಸಮಾಜದ ಒಳಿತಿಗಾಗಿ ಉಪಯುಕ್ತ ಚಟುವಟಿಕೆಗಳನ್ನು ಕೈಕೊಂಡಿವೆ. ಹಾಲುಮತ ದೈವದ ಕೇಂದ್ರಗಳಲ್ಲಿ ತಮ್ಮ ಮತದ ತಿರುಳನ್ನು ಕುರಿತಂತೆ ವಿವಿಧ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಜನತೆಗೆ ಉತ್ತಮ ಚಿಂತನೆಗಳನ್ನು ಉಣಬಡಿಸುತ್ತವೆ. ತಪ್ಪುದಾರಿಗೆ ಹೋಗದಂತೆ ಸತ್ಯ, ನೀತಿ, ಭಕ್ತಿ, ಕರ್ತವ್ಯ ಪ್ರಜ್ಞೆ ಕಾಯಕ ಪಾಲಿಸುವಂತೆ ತಿಳಿಸುತ್ತವೆ.

ನಂಜಿನ ಗಾಳಿ ಬೀಸೇತಿ ಧರ್ಮಕ್ಕ ಬೆಲೆ ಇಲ್ಲ
ಕರ್ಮಕ್ಕ ಬೆಲೆ ಹೆಚ್ಚು ಧರ್ಮದ ಮಾರ್ಗ ಬಿಡಬ್ಯಾಡರಿ
ಮಾಳಿಂಗರಾಯ ಸಾರಿಸಾರಿ ಹೇಳತಾನ[೧೦೭]

ಇನ್ನ ನೋಡ್ರಿ ಜನದ ಹೈರಾಣ
ಸುಳ್ಳಲ್ಲ ಕಳ್ಳ ಜನರ ಬಂದ
ಊರ ಹೊಕ್ಕಾರ ಊರ ಮೂರಾಬಟ್ಟಿ
ಆಕ್ಕತಿ. ಹುಲಿ ಹೋಗಿ ನರಿ ನುಂಗತತಿ
ತಿಳಿಕೊಂಡ ನಡಿರಲೇ[೧೦೮]

ಸತ್ಯದ ದಿನಮಾನ ಒತ್ತೊತ್ತಿ ಬಂದಾವ
ಚಿತ್ತಕೊಟ್ಟ ಕೇಳಿರಿ ಅಮೋಘಸಿದ್ಧ ಬರುವಾಗ
ಮರ್ತ್ಯಲೋಕ ಬಾಯಿ ತೆಗಿತೈತಿ[೧೮೯]

ಇಂತಹ ಹೇಳಿಕೆಗಳು ಸಾಮಾಜಿಕ ಕಾರ್ಯವು ಜನತೆಯ ಶ್ರದ್ಧೆ ಮತ್ತು ಭಕ್ತಿಯನ್ನು ತೋರಿಸುತ್ತವೆ. ಮಾತಿನ ರೂಪದಲ್ಲಿ ಮೌಖಿಕವಾಗಿ ಸಾಗುವ ಈ ಹೇಳಿಕೆಗಳು ಒಂದು ಪರಂಪರೆ ಮತ್ತು ಸಂಪ್ರದಾಯವನ್ನು ಬಿಂಬಿಸುತ್ತವೆ. 'ನುಡಿ' ಹೇಳು ಎಂಬ ಶಬ್ದದಲ್ಲಿಯೇ ಗಟ್ಟಿಯಾಗಿ 'ಸಾರು' ಎಂದರ್ಥ. ಅದನ್ನು ಸಾರಿದ್ದನ್ನು ಉಳಿದವರು ಅಷ್ಟೇ ಏಕಾಗ್ರತೆಯಿಂದ ಮತ್ತು ಗೌರವದಿಂದ ಕೇಳುತ್ತಾರೆ. ಎಂಬ ಅರ್ಥ ಇಲ್ಲಿ ಅಡಕವಾಗಿದೆ. ರಾಜಕೀಯ ಪರಿಭಾಷೆಯಲ್ಲಿ ಹೇಳುವುದಾದರೆ 'ಘೋಷಿಸು' ಎಂದು ಹೇಳಿದರೆ ಧಾರ್ಮಿಕ ಪರಿಭಾಷೆಯಲ್ಲಿ 'ಹೇಳು', 'ನುಡಿ' ಎಂಬ ಶಬ್ದಪ್ರಯೋಗ ಕಂಡುಬರುತ್ತದೆ.

ಸತ್ಯ ಬಿಟ್ಟ ಮಾತಾಡಬ್ಯಾಡರಿ
ಹುಚ್ಚೆದ್ದ ಹೋಗತಿರಿ ಖರೇ ಮಾತಾಡ್ರಿ ಬೀರಪ್ಪ ಒಲಿತಾನ
ಹಿಡಿ ಭಂಡಾರ[೧೧೦]

ಬಿಜಾಪುರ ಅಗಸಿಮ್ಯಾಲ ನಿಂತ     ಕಂಬಳಿ ಬೀಸಿ ಹೇಳ್ತಿನಿ ನಾ
ಮಾತಾಡೂದು     ಖರೆ ಆಕ್ಕೆತಿ ಕುಂಬಿ ಮ್ಯಾಲ ನವಿಲ
ಕುಣಿತೈತಿ ಆಗುದು ಆಗತತಿ ನೋಡಿ ತಿಳಿದು ಕೊಳ್ಳಿರಿ[೧೧೧]

ಇಂತಹ ಸಂದರ್ಭದಲ್ಲಿ ಹೇಳಿಕೆಗಳಿಗೆ ಸಾಮಾಜಿಕ ಆದ್ಯತೆ ದೊರೆಯುತ್ತದೆ. ಸಮುದಾಯದಲ್ಲಿಯ ಇಂತಹ ಧರ್ಮಪೀಠಗಳು ಔಪಚಾರಿಕವಾಗಿ ಜನತೆಗೆ ನೀತಿ ಮಾರ್ಗ ತೋರಿಸುತ್ತದೆ. ಇದು ನಿರ್ದಿಷ್ಟ ಪರಿಸರದಲ್ಲಿ, ಪರಿಮಿತಿಯಲ್ಲಿ, ನಾಗರಿಕರ ಅಥವಾ ಆಳು ಮಕ್ಕಳಿಗೆ ಸಂಸ್ಕೃತಿ ನಡೆ-ನುಡಿ, ಆಚಾರ-ವಿಚಾರ, ನೈತಿಕ ಮೌಲ್ಯಗಳನ್ನು ಮೂಡಿಸುತ್ತವೆ. ಹೇಳಿಕೆಗಳು ಔಪಚಾರಿಕ ಮತ್ತು ಅನೌಪಚಾರಿಕ ಸಂದರ್ಭದಲ್ಲಿ ಮೂಡಿ ಬರುವುದರಿಂದ ಯಾವುದಾದರೂ ಒಂದು ವಿಷಯವನ್ನು ಗಟ್ಟಿಯಾಗಿ ಸ್ಪಷ್ಟ ಪಡಿಸುತ್ತವೆ. ಹೇಳಿಕೆಗಳಲ್ಲಿ ಪದೇ ಪದೇ ಕೇಳುವಿಕೆಗೆ ಪ್ರಥಮ ಸ್ಥಾನ ಕೊಡಲಾಗಿದೆ.

- ಕೇಳರಲೇ ಕೇಳಿರಿ
- ವಿಚಾರ ಮಾಡಿ ನಡಿರಲೇ
- ನನ್ನ ನುಡಿ ಕೇಳ್ರಿ

- ಭಂಡಾರ ತೂರ್‍ರಿ
- ಉಧೋ ಉಧೋ
- ಎಚ್ಚರಿಕೆ ಎಚ್ಚರಿಕೆ
- ಅಮೋಘಸಿದ್ಧ ಬಂದ ಅಮೋಘಸಿದ್ಧ ಬಂದ
- ಮುಂದ ಹೇಳಿರಿಲೇ, ಮುಂದ ಹೇಳ್ರಿ

ಇಂತಹ ಉದ್ಘಾರಗಳಲ್ಲಿ ಬಂದಿರುವ ಕೇಳು, ಹೇಳು ಮುಂತಾದ ಕ್ರಿಯಾರೂಪಗಳು ಧಾರ್ಮಿಕ ಭಕ್ತರನ್ನು ಏಕಾಗ್ರ ಚಿತ್ತರನ್ನಾಗಿ ಮಾಡುತ್ತವೆ. ಜೊತೆಗೆ ಹೇಳಿಕೆಗಳಲ್ಲಿ ಆದ್ಯತೆಯಾಗಿ ಹೇಳಿಕೆಯ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

ಗುರುವಿಗೆ ನಡಕೋರಲೇ ಪುಣ್ಯ ಬರ್‍ತತೆ
ಗುರು ಕೊಟ್ಟದ್ದ ಗುರುವಿಗೆ ಸಲ್ಲಬೇಕು ಗುರುವಿನ ಪಾದಕ್ಕ ಮುಟ್ಟಲಿ
ಅಂದ್ರ ಹಾಲು-ಹೊನ್ನಾಗಿ, ಬೆಳ್ಳಿ-ಬಟ್ಟಲಾಗಿ ತೂಗು-ತೊಟ್ಟಿಲ ಅಕ್ಕತಿ
ಮಕ್ಕಳ ಹೆಚ್ಚಾಗಿ
ಹೊಲದಾಗ ಫಸಲ ಬರ್‍ತತಿ ನಾಳೆ ಗುಡಿಗಿ
ಬಂದ ಹೋಗರೆಪಾ[೧೧೨]

ಕತ್ತಲದಾಗ ಹೆಂಗ ಕುಂತಿರೋ ಸಣ್ಣ ಬೆಳಕ ಕತ್ತಲಾ ನುಂಗತೈತಿ
ಸಣ್ಣ ಕಿಡಿಯೋ ಕತ್ತಲಾ ನುಂಗತೈತಿ ಬೀರಪ್ಪನ ಮಾತ ಅರವು
ತಿಳಿದಕೊಂಡ ನಡೆದ ಹಾಗೆ ನಡೀರಿ ಆಗುವುದು ಆಗತತಿ ಹಿಡಿ ಭಂಡಾರ[೧೧೩]

ಕತ್ತಲು ಎಷ್ಟೇ ದೊಡ್ಡದಾದರೂ ಸಹ ಒಂದು ಸಣ್ಣ ದೀಪದ ಬೆಳಕ ಅದನ್ನು ಇಲ್ಲವಾಗಿಸುತ್ತದೆ. ಎಂತಹ ಕೆಸರನ್ನಾದರೂ ಒಳ್ಳೆಯ ನೀರು ಕಮಲ ತಾಕಿದಾಗ ಶುದ್ಧವಾಗುತ್ತದೆ. ಕತ್ತಲೆಯನ್ನು ನುಂಗುವ ಬೆಳಕಿನಂತೆ ಹೇಳಿಕೆಗಳು ಇರುತ್ತವೆ. ಹೇಳಿಕೆಗಳು ಅನುಭವಿಸುವ ಮನಸ್ಸಿಗೆ ತೃಪ್ತಿಕರವಾಗಿರುತ್ತವೆ.

ಗುರು ಶಿಷ್ಯರ ಸಂಬಂಧ
ಪರಿಮಳವಾಗಿರಬೇಕು
ಕತ್ತಲಾ ಬೆಳಕಿಗಿ ಅಂಜಬಾರದು
ಗುರೂಪದೇಶ ಮಂತ್ರ ಇದ್ದಹಾಗ ಭವರೋಗ ಮನಿಗೆ ಬಂದಾಂಗ[೧೧೪]

ಇಂತಹ ಹೇಳಿಕೆಗಳಲ್ಲಿ ಗುರು–ಶಿಷ್ಯರ ಸಂಬಂಧದಲ್ಲಿ ಇರಬೇಕಾದ ಭಾವಪೂರ್ಣತೆ ಇಲ್ಲಿ ಸುಂದರವಾಗಿ ಮೂಡಿ ಬಂದಿದೆ. ತಂದೆಯ ರೂಪದಲ್ಲಿ ಗುರುವನ್ನು ಕಂಡು ಸಹಜವಾದ ಪ್ರೀತಿ ವಿಶ್ವಾಸಗಳು ಅನುಭವದಲ್ಲಿ ಗುರುವನ್ನು ದೈಹಿಕ ರೂಪಗೊಳಿಸುವ ಒಡೆಯರರು ಕೊಡುವ ಈ ಗುರುವಿನ ಚಿತ್ರ ನಮಗೆ ಬೆತ್ತ ಹಿಡಿದ ಶಾಲಾಮಾಸ್ತರನನ್ನು ನೆನಪಿಸುತ್ತದೆ. ಗುರುವಿನ ಭಕ್ತಿ ಹೃದಯದಿಂದ ಸಹಜವಾಗಿ ಬರಬೇಕೇ ಹೊರತು ಒತ್ತಾಯ ಪೂರ್ವಕ ಅಲ್ಲ. ಎಂಬುದನ್ನು ಒಡೆಯರರ ಹೇಳಿಕೆಗಳಲ್ಲಿ ಅರ್ಥಪೂರ್ಣವಾಗಿ ರೂಪಗೊಂಡಿದೆ. ಅವರು ಭಾವವಿಲ್ಲದ ಭಕ್ತಿಯನ್ನು ಖಂಡಿಸಿದ್ದಾರೆ. ಧಾರ್ಮಿಕ ಶ್ರದ್ಧೆ ಭಕ್ತಿಯಿರುವ ಅವರ ಹೇಳಿಕೆಗಳು ಧಾರ್ಮಿಕ ಮೌಲ್ಯದ ಜೊತೆಗೆ ಸಾಮಾಜಿಕ ಮೌಲ್ಯವನ್ನು ಬಿಂಬಿಸುತ್ತವೆ.

ಹೇಳಿಕೆಗಳಲ್ಲಿ ಧರ್ಮ ನೀತಿಯನ್ನು ಬೋಧಿಸಲಾಗುತ್ತದೆ. ಇಲ್ಲಿ ಮುಖ್ಯವಾಗಿ ಜನಸಾಮಾನ್ಯರ ಬದುಕಿನಲ್ಲಿ ತೀರ ಕಾಳಜಿವಹಿಸಿದೆ: ಅವರ ದಮನಿಯ ಬಡಿತಕ್ಕೆ ಸಾಂತ್ವನ ನೀಡಿದೆ. ಜನರ ಚಾರಿತ್ರ್ಯವನ್ನು ತಿದ್ದಿ ಅವರ ಬದುಕನ್ನು ಮೇಲೆತ್ತುವಲ್ಲಿ ಬಹಳ ಜನಕ್ಕೆ ಸಂಜೀವಿನಿಯಾಗಿವೆ, ಒಡೆಯರರ ಹೇಳಿಕೆಗಳು ದುಷ್ಟರ ದಮನ ಭಕ್ತರನ್ನು ಶಿಷ್ಟರನ್ನಾಗಿಸುವಲ್ಲಿ ಮಹತ್ವದ ಪಾತ್ರ ವಹಿಸಿವೆ.

ಕಳ್ಳ ಜನರು ಇನ್ನೊಬ್ಬರನ್ನು ಸುಲಿದು ವಟವಟ ಮಾಡ್ತಾರ್
ಸುಳ್ಳ ಜನರ್ ಸುಲಿದ ನುಂಗತಾರ  ಕಲಿಯುಗ ಕೆಟ್ಟ ಮೂರಾಬಟ್ಟಿ ಆಗೇತಿ
ಗುರುವಿನ ನಂಬಿ ನಡೀರಿಲೆ[೧೧೫]

/ ಆಕಾಶ ಒದರೀತ
ಭೂಮಿ ನಡುಗೀತ
ಲೋಕಕ್ಕೆ ಮೀರಿದ  ದೊರೆ ಬರ್‍ತಾನ್ ಕೇಳರಿಲೇ ಕೇಳಿಲೇ[೧೧೬]

ಧಾರ್ಮಿಕ ಹೇಳಿಕೆಗಳು ಜನತೆಯನ್ನು ಜಾಗೃತಗೊಳಿಸಿ ಅವರ ಜೀವನವನ್ನು ಹಸನು ಮಾಡುತ್ತವೆ. ಅವರಿಗೆ ಸಾಹಿತ್ಯದ ರುಚಿಗೌಣವಾಗಿದ್ದು ಜನ ಬದುಕಬೇಕೆಂಬುದೇ ಮುಖ್ಯವಾಗಿತ್ತು. ಅನ್ಯ ಧರ್ಮದೊಂದಿಗೆ ಸಾವಯವ ಸಂಬಂಧ ಉಂಟುಮಾಡುವುದೇ ಅವರ ಉದ್ದೇಶವಾಗಿತ್ತು.

/ ಭೂಮಿಮ್ಯಾಲ ನಂಜಿನ ಗಾಳಿ ಬೀಸಿದೆ
ವಿಷಯದ ಬಳ್ಳಿ ಹಬ್ಬಿದೆ   ಈ ಮಾತು ಚಿತ್ತವಿಟ್ಟು ಕೇಳಿರಿ[೧೧೭]

ಈ ಹೇಳಿಕೆಯ ಅರ್ಥ ಭೂಮಿಯ ಮ್ಯಾಲ ಪಾಪ, ಅನ್ಯಾಯ, ಅನೀತಿ ಹೆಚ್ಚಾಗಿದೆ. ಅದಕ್ಕಾಗಿ ದೇವರಿಗೆ ಮೊರೆಹೋಗಬೇಕು ಎಂಬ ಮಾತು ತುಂಬ ಧ್ವನಿಪೂರ್ಣವಾಗಿದೆ.

ವಿಸ್ತಾರವಾಗಿ ಹೇಳಬೇಕಾದುದನ್ನು ಸಂಕ್ಷಿಪ್ತವಾಗಿ ಒಡೆಯರರು ಹೇಳುತ್ತಾರೆ. ಊಹೆಯ ಮೇಲೆ ಅವರ ಹೇಳಿಕೆಯನ್ನು ಬಿಡಿಸಿ ಉತ್ತರಿಸಬಹುದಾಗಿದೆ. ಬೆಡಗು, ಹೇಳಿಕೆಗಳಲ್ಲಿ ಸಾಕಷ್ಟು ಬಳಕೆಯಾಗಿದೆ.

ಬಡವರನ್ನು ಬಗ್ಗಿಸ ಬ್ಯಾಡ್ರಿ
ಆಯ್ದುಕೊಂಡ ತಿನ್ನುವ ಕೋಳಿ ಕಾಲ ಮುರಿಬ್ಯಾಡ್ರಿ ಪಾಪ ಹತ್ತದ್
ಹುಷಾರ್ ಎಲ್ಲವರು ನನ್ನವರೆಂದು ನಡೀರಿ[೧೧೮]

ಖರೆ ಉಳಿತತಿ
ಕೆಟ್ಟತನ ಮಾಡಬ್ಯಾಡ್ರಿ ಸತ್ಯಕ್ ಜಯ ಇದೆ ಹೊಟ್ಟ ಹೋಗಿ ಘಟ್ಟ
ಉಳಿದೀತು[೧೧೯]

ಹಿಂದಕ್ ಹತ್ತು ಮುಂದಕ್ ಹನ್ನೊಂದು ಆಗಬಾರದು[೧೨೦]

ಧರ್ಮ ಮತ್ತು ನೀತಿಗಳು ಒಂದಕ್ಕೊಂದು ಪೂರಕವಾಗಿವೆ. ಒಂದನ್ನು ಬಿಟ್ಟು ಇನ್ನೊಂದಿಲ್ಲ ಎಲ್ಲ ಜಾತಿ, ಧರ್ಮಗಳ ಉದ್ದೇಶವು ನೀತಿ ಪ್ರತಿಪಾದನೆಯೇ ಆಗಿದ್ದು ಅದನ್ನು ಹೇಳುವ ರೀತಿ ಬೇರೆ ಬೇರೆ ಆಗಿದೆ.

ಇದ್ದಕ್ಕಿದಂತೆ ಹೇಳಿದರೆ ಮಾರಿಮ್ಯಾಲ ಬಂದ ಒದ್ದಂತೆ
ಇದು ಕುರಬ್ಯಾಟ ಬೀರನಮಾತ ಸುಳ್ಳಲ್ಲ[೧೨೧]

ಒಡೆಯರರು ತಾವು ಹೇಳಬೇಕಾದುದನ್ನು ನೇರವಾಗಿ ಹೇಳುತ್ತಾರೆ. ಅಲ್ಲಿ ಪ್ರತಿಯೊಬ್ಬರ ಹಿತಚಿಂತನೆಯಿದೆ. ಸಾಮಾಜಿಕ ಮೌಲ್ಯವಿದೆ ಅವರು ಹೇಳುವ ಸಂಗತಿಗಳು, ಹೇಳಿಕೆಗಳು ಕೇವಲ ಮಾತುಗಳಾಗಿರದೆ ಬೀರಪ್ಪನ ಅಥವಾ ಹಾಲುಮತ ದೈವಗಳ ನಿರೂಪಿತವಾಗಿವೆ.

ತಂದಿ-ಮಗ ಹೊಂದಿಕೊಂಡ ಹೋಗರಿಲೆ
ತಂದಿ ಕೊಂದ ಮನಿ ಆಳಬ್ಯಾಡರಿ ಕೇಡಬರತತಿ ಕೇಡಬರತತಿ[೧೨೨]

ಗುರುವಿಗೆ ಶಿಷ್ಯ ತಲಿಬಾಗಬೇಕು
ಶಿಷ್ಯ ಗುರುವಿನ ಮಾತ ಕೇಳಬೇಕು[೧೨೩]

ಹೇಳಿಕೆಗಳಲ್ಲಿ ಗುರು-ಶಿಷ್ಯರ ಸಂಬಂಧದ ಬಗ್ಗೆ ಪ್ರಸ್ತಾಪ ಬಂದಿದೆ. ಆ ಸಂಬಂಧ ಅತ್ಯಂತ ಪವಿತ್ರವಾದುದು. ಆದರೆ ಸದಾಚಾರದ ಅಭಾವದಿಂದಾಗಿ ಈಗ ನೀತಿ ನೆಲೆಗಟ್ಟು ಸಡಿಲಿಸಿ ಜೀವನ ಅಸ್ತವ್ಯಸ್ತವಾಗಿದೆ. 'ಮನ್ಸ್ಯಾನ ಹೆಂಡತಿ ಬಿಟ್ಟ ಬಿಳಿ ಛಾಯೆಗೆ ಮನಸ್ ಮಾಡಬ್ಯಾಡರಿ' ಜನರು

ಪರಸ್ತ್ರೀಯರೊಡನೆ ಸಂಗ ಮಾಡಬಾರದು ಎಂಬ ವಿಷಯ ಈ ಹೇಳಿಕೆಗಳಲ್ಲಿ ನಿರೂಪಿತವಾಗಿದೆ. ಸಾಮಾಜಿಕ ಮೌಲ್ಯಗಳು ಅಪಮೌಲ್ಯ ಆಗಬಾರದೆಂದು ಎಚ್ಚರವಹಿಸಿದ್ದಾರೆ.

ಹಾಲುಮತ ದೈವಗಳಿಗೆ ಸಲ್ಲಿಸಬಹುದಾದ ಅರ್ಪಣಾಭಾವನೆಯನ್ನು ಮರದ ಚಿಗುರಿನಂತೆ ಮತ್ತು ನೀರೆರೆಯುವ ಕ್ರಿಯೆಗಳಿಗೆ ಹಾಗೂ ಆ ಮೂಲಕ ಭಕ್ತ ಭಗವಂತನಿಗೆ ಶರಣಾದಾಗ ಅರ್ಪಣಾಭಾವದಲ್ಲಿ ಆಚರಣೆಗಳನ್ನು ನಡೆಸಿದಾಗ ಬದುಕಿನ ಎಲ್ಲ ಭಾಗಗಳಲ್ಲಿಯೂ ಅದರ ಸತ್ಪರಿಣಾಮ ಕಂಡುಬರುತ್ತದೆ. ಈ ಬಗ್ಗೆ ಸಾದೃಶ್ಯತೆಯ ಮೂಲಕ ಆಚರಣೆಗಳ ಅವಶ್ಯಕತೆ ಇದೆ. ಮತ್ತು ಅದರ ಪರಿಣಾಮದ ಬಗ್ಗೆ ಸ್ಪಷ್ಟ ಧೋರಣೆ ಇದೆ.

ಸದಾಚಾರದಿಂದ ನಡೆದುಕೊಳ್ಳಿರಿ ಭೂಮಿಮ್ಯಾಲ ಸತ್ಯಸುದ್ಧಕಾಯಕದಿಂದ ಇರಿ
ಹೃದಯ ಹೂ ಅರಳಿದಂಗ ಅರೆಳಬೇಕು
ಭೂಮಿಮ್ಯಾಲ ಸೌಖ್ಯ ನೆಮ್ಮದಿ ಬರ್ತತಿ
ನಿತ್ಯ ಭಂಡಾರ ಸೇವೆ ಆಗಬೇಕು   ನಿತ್ಯ ಪಲ್ಲಕ್ಕಿ ಸೇವೆ ಮಾಡಬೇಕು
ಬೀರಪ್ಪ ಹೇಳ್ಯಾನ[೧೨೪]

ಕ್ರಮವಾದ ಪೂಜಾ ವಿಧಾನದಲ್ಲಿ ಆಚರಣೆಗಳ ಜೊತೆಗೆ ಹೃದಯದ ಭಾವನೆಗಳನ್ನು ಬೆಸೆಯಬೇಕಾದ ರೀತಿಯನ್ನು ಒಂದು ಸುಂದರ ಭಾವಗೀತಾತ್ಮಕವಾಗಿ ಈ ಹೇಳಿಕೆಗಳಲ್ಲಿ ಬಂದಿರುವುದು ಗಮನಿಸಬೇಕಾದ ಸಂಗತಿ. ಒಡೆಯರರು ಜಿಡ್ಡುಗಟ್ಟಿದ ಮಡಿವಂತಿಕೆಯನ್ನು ಟೀಕಿಸಿದ್ದಾರೆ. ಧರ್ಮವನ್ನೇ ಮಡಿ ನೀರಿನ ರೂಪದಲ್ಲಿ ಆಧರಿಸಿ ಸದಾಚಾರ ಕ್ರಮಗಳನ್ನು ಭೂಮಿಯನ್ನಾಗಿ ಮಾಡಿಕೊಂಡು ಅದರೊಳಗೆ ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು ಮಾಡಿದ್ದಾರೆ. ಭಕ್ತನಿಗೆ ಲೇಸನ್ನೇ ಉಂಟುಮಾಡುವುದೇ ಅವರ ಧಾರ್ಮಿಕ ನಂಬಿಕೆಗಳ ಆಶಯವಾಗಿದೆ.

ಆಚಾರವೆಂಬುದು ಇದ್ದವರಿಗೆ ದುಡಿದು ತಿನ್ನುವುದು ಬಲ್ಲವರಿಗೆ ಭಾವ ತಪ್ಪಿದ
ಮ್ಯಾಲ ದೇವರ ಧ್ಯಾನ ಇರಬೇಕು[೧೨೫]

ಇಂತಹ ಹೇಳಿಕೆಗಳಲ್ಲಿ ಒಡೆಯರರು ಬದುಕಿನ ಬಗ್ಗೆ ಹೊಸ ಚೈತನ್ಯವನ್ನು ತುಂಬಿದ್ದಾರೆ. ಒಣ ಆಚರಣೆಗಳಲ್ಲಿ ಜೀವ ತುಂಬುವಂತಹ ಭಾವನೆಗಳಿಂದ ಒಡೆಯರರು ಭಕ್ತಿಯ ಭಂಡಾರ ತುಂಬಿದ್ದಾರೆ. ಧಾರ್ಮಿಕ ಆಚರಣೆಗಳು ಹಾವಸೆ ಕಲ್ಲಿನಂತೆ ಅತ್ಯಂತ ಸೂಕ್ಷ್ಮವಾದುದು. ಒಂದೇ ಮನಸ್ಸಿನಲ್ಲಿ ತೊಡಗಿದಾಗ ಮಾತ್ರ ಅದರ ಫಲ ಕಂಡು ಬರುತ್ತದೆ. ಅದರಲ್ಲಿ ಸ್ವಲ್ಪ ಎಚ್ಚರ ತಪ್ಪಿದರೆ ಅನಾಹುತವಾಗುತ್ತದೆ. ಅಂದರೆ ಧಾರ್ಮಿಕ ಶ್ರದ್ಧೆ ಬಹಳ ಮುಖ್ಯ. ಮನುಷ್ಯನಿಗೆ ಕಷ್ಟ ಬಂದಾಗ, ಸುಖ ಬಂದಾಗ ಒಬ್ಬ ದೈವವನ್ನು ಆಳವಾಗಿ ನಂಬಬೇಕು. ಅವನಲ್ಲಿ ಏಕದೇವೋಪಾಸನೆ ಆಚರಿಸಬೇಕು. ವಚನಕಾರರು ಹೇಳಿದ್ದು ಇದನ್ನೇ. ಕಂಡ ಭಕ್ತರಿಗೆ ಕೈ ಮುಗಿಯುವಾಗ

ಢಂಬಾಚಾರ ಇರಬಾರದು. ಒಡೆಯರರು ಹೇಳಿದುದೇ ಇದೆ. ಇಲ್ಲಿ ಭಕ್ತಿಯ ಜೊತೆಗೆ ಅನುಭವವೂ ಬಹಳ ಮುಖ್ಯವಾಗಿದೆ. ಆಡಂಬರ ನಡೆಸುವುವವರನ್ನು ಕಂಡು ಅದನ್ನು ಖಂಡಿಸುವ ಮತ್ತು ಸುರಕ್ಷಿತವಾದ ಮಾರ್ಗವನ್ನು ಅವರು ತೋರಿಸುತ್ತಾರೆ.

ನಂಬಿಕೆ ಇಟ್ಟ ನಡೆದರ
ಅರಸನ ಅರಮನ್ಯಾಗ ಇಡತೀನಿ
ಅಪನಂಬಿಕೆ ಮೂಡಿದರ ಪಾತಾಳಕ ತುಳಿತನಲೇ ಗಾಣಮಿಣಿ[೧೨೬]

ಎಲೇ! ಎತ್ತ ನೋಡಿದರತ್ತ ಕರಿ ರಂಡೀನ ಕಾಣತಾಳ ಇದಲ್ಲ ಸಿಂಹಾಸನಕ
ಕರಿ ಜಂಡಾ ಹಚ್ಚೀನ ಜಾಡಿ ಪದರಾಗ ಐದು ಹನಿ ಕಟ್ಟಿನಿ ಸಿಕ್ಕವಂಗ
ಸಿಕ್ತು ಸಿಗ್ಲಾರದವಂಗ ಇಲ್ಲ ನೆಲಗಂಗಿ ತಿರುವಿ ಒಕ್ಕಲಿಗನ ಮಗನ
ಆನಂದದಿಂಧ ಪಾಜೇಕ ಹಚ್ಚೀನಲೇ ಗಾಣಮಿಣಿ[೧೨೭]

ದೇವಲೋಕ ಅಂದ್ರ ಹೊರಗಿಲ್ಲ ನೀ ಎಲ್ಲಿ ಬದಕಿಲಾ ಆದ ದೇವಲೋಕ
ಕರೇ ಮಾತಾಡಿದರ ಅದೇ ದೇವಲೋಕ
ಬೂದಿಗೊಪ್ಪ ಮಾಳಿಂಗನ ಮಾತು[೧೨೮]

ಒಡೆಯರರು ಶರಣರಂತೆ ಕಾಯಕದ ಬಗ್ಗೆ ವಿಶೇಷ ಮಹತ್ವ ಕೊಟ್ಟಿದ್ದಾರೆ. ಕಾಯಕದಿಂದ ಬಂದ ದ್ರವ್ಯವನ್ನು ಕಾಯಾ, ವಾಚಾ ಮನಸ್ಸಿನಿಂದ ಆಳುಮಕ್ಕಳಿಗೆ ಅಂದರೆ ಭಕ್ತರಿಗೆ ಪ್ರಸಾದ ರೂಪದಲ್ಲಿ ಅರ್ಪಿತವಾಗಬೇಕು. ದೇವಲೋಕ ಎಂದರೆ ಅದು ಎಲ್ಲಿಯೋ ಇದೆ ಎಂಬ ಮೌಢ್ಯತೆಯನ್ನು ಒಡೆಯರರು ತಳ್ಳಿಹಾಕಿದ್ದಾರೆ. ನಾವು ಎಲ್ಲಿ ಕಾಯಕದಿಂದ ಜೀವಿಸುತ್ತೇವೆಯೋ ಅದುವೇ ದೇವಲೋಕ. ನಾವು ಎಲ್ಲಿ ಅನಾಚಾರದಿಂದ ಇರುತ್ತೇವೆಯೋ ಅದುವೇ ನರಕ.

ಮನಸ್ಯಾ ಹುಟ್ಟಿದಮ್ಯಾಗ ಮನಸ್ಯಾನಂಗ್ ಬದುಕಬೇಕು. ಸಾಸಿವೆ ಅಷ್ಟು
ಸುಖಕ್ಕ
ಸಾಗರದಷ್ಟು ದುಖಃ ಪಡಬಾರದು ಘಟ್ಟ ಹತ್ತೂದು ಕಠಿಣ ಇಳಿಯುವುದು
ಸುಲಭ ಭಾವದಲ್ಲಿ ಕುಳ್ಳರಿಸಿ
ಪರಮಾನ್ನ ಉಣ್ಣರೋ ಮತಿಗೆಟ್ಟ ನಡಿಬ್ಯಾಡ್ರಿ[೧೨೯]

ಇಂತಹ ಹೇಳಿಕೆಗಳಲ್ಲಿ ತಿಳುವಳಿಕೆಯ ಪಕ್ವತೆಯನ್ನು, ಬದುಕಿನ ಚೈತನ್ಯವನ್ನು ಹೇಳಿದ್ದಾರೆ. ತಿಳುವಳಿಕೆಯ ಭಾವದ ಪಾಕವನ್ನು ಹದಗೆಡಿಸಿ ಭಗವಂತನಿಗೆ ಸಮರ್ಪಿಸುವ ದೈವಿಕ ಅನನ್ಯತೆಯನ್ನು

ಒಡೆಯರರು ಹಲವು ಸಾರಿ ಹೇಳಿದ್ದಾರೆ. ವಯಸ್ಸು ಆದ ನಂತರ ನಮ್ಮ ನಡತೆಯೂ ಅಷ್ಟೇ ಪಕ್ವವಾಗಬೇಕು.

ಹಲ್ಲು ಹೋಗಿ ಬೆನ್ನ ಬಾಗೇತಿ ಮನಷ್ಯ ಜನ್ಮ ಹುಟ್ಟಿ ಬರಾಕ ಹುಲ್ಲು ಅಲ್ಲ
ಮುಪ್ಪಿನ ಕಾಲಕ್ಕ ನಾಲ್ಕು ಮಂದಿಗೆ ಬೇಕಾಗಿ ಹೋಗು ಇರದಿದ್ರ ಸುಣ್ಣಾ
ತಿಂದ ಮಂಗ್ಯಾನಂಗ ಆಗತತಿ
ಹಿಡಿ ಭಂಡಾರ[೧೩೦]

ಮನುಷ್ಯ ವಯಸ್ಸು ಆದೆಂತೆಲ್ಲ ಆತನಲ್ಲಿ ಉದಾತ್ತ ಭಾವನೆ ಬರಬೇಕು. ಅದು ಹೆಪ್ಪುಗಟ್ಟಬೇಕು. ಭಗವಂತನತ್ತ ಮನಸ್ಸು ವಾಲಬೇಕು. ದೈವಿಕ ಚಿಂತನೆಯನ್ನು ಮಾಡಬೇಕು. ಎಂಬುದು ಈ ಹೇಳಿಕೆಯ ಒಳಾರ್ಥವಾಗಿದೆ. ಎಂತಹ ವ್ಯಕ್ತಿಯೇ ಆಗಲಿ ತಾನು ಮಾಡುವ ಕಾಯಕದ ಬಗ್ಗೆ ಗೌರವ ಮತ್ತು ಪ್ರೀತಿ ಆದರ ಇರಬೇಕು ಅದು ಮಾತ್ರ ದೈವತ್ವಕ್ಕೆ ಏರುತ್ತದೆ. ಎಂಬುದು ಒಡೆಯರರು ಹೇಳಿಕೆಗಳಲ್ಲಿ ಆಗಾಗ ಹೇಳುತ್ತಾರೆ. ಡೊಳ್ಳುಹಾಡುಗಳಲ್ಲಿ ಆಗಾಗ ಪುನರಾವರ್ತನೆಯಾಗುವ "ಸ್ವಾಮಿ ನಮ್ಮ ದೇವರ ಬಂದಾನ ಬನ್ನಿರೆ" ಹಾಲುಮತವು ಹರವು ಸಾಗರದ ಗುರು ರೇವಣಸಿದ್ಧ ಬಂದಾನ ಎನ್ನುವಲ್ಲಿ ಈಡೀ ರೇವಣಸಿದ್ಧನ ಚರಿತ್ರೆಯನ್ನು ಸಾರಿ ಹೇಳುತ್ತಾರೆ. ಈ ಸಂದರ್ಭದಲ್ಲಿ ಬರುವ ಹೇಳಿಕೆ ಹೀಗಿದೆ.

ಊರು ಪಡೆಯುವಲ್ಲಿ ಒಕ್ಕಲು ಪಡೆಯಲಿಲ್ಲ ಯ್ಥಿನ ಕುರುಬರ ಪಡದಲ್ಲೋ
ಸೀಮೆಯ ಪಡೆಯಲಿಲ್ಲ, ಭೂಮಿ ಪಡೆಯಲಿಲ್ಲ ಜಿಡ್ಡು ಕುರುಬರ
ಪಡೆದಲ್ಲೋ[೧೩೧]

ಹೀಗೆಂದು ಭಕ್ತ ಮತ್ತು ಭಗವಂತ ಅವರಿಬ್ಬರೂ ಹೀಯಾಳಿಸಿದರೂ ಅದಕ್ಕೂ ಜಗ್ಗದ ಸೇವೆಯ ಬಲ್ಲೆ. ಭಂಡಾರವೂ ಬಲ್ಲೆ ಎಲ್ಲವೂ ನಿನ್ನ ಕೃಪೆ ಎಂದು ಆಳುಮಕ್ಕಳು ಭಗವಂತನನ್ನು ಸಮರ್ಪಣಾಭಾವದಿಂದ ಅಪ್ಪಿಕೊಳ್ಳುತ್ತಾರೆ. ಭಕ್ತಿಯ ಸಾಧನೆಯಲ್ಲಿ ಅದು ಹೀಗೆ ಇರಬೇಕೆಂದರೆ ಚಿತ್ತನೆಗೆ ನೆಲ ಸಿದ್ಧವಾದಾಗ ದೈವದ ಮಾರ್ಗದರ್ಶನವು ಬೀಜ ರೂಪದಲ್ಲಿ ಅಂಕುರಿಸುವಂತೆ ಅಂತಹ ಅಂಕುರತ್ವದಲ್ಲಿ ದೈವತ್ವವು ಮೂಡುವುದನ್ನು ಎಲೆಯ ರೂಪದಲ್ಲಿ ಚಿಗುರುವಂತೆ ಆ ದೈವತ್ವದಿಂದ ಮೂಡಿದ ದೈವಿಕ ವಿಚಾರಗಳು, ಶುಭ್ರ ಮತ್ತು ಕೋಮಲತೆಯನ್ನು ಹೊಂದಿರುತ್ತವೆ.

ಎಲೇ ! ಪಟ್ಟಣದಾಗ ಶಿಶು ಹುಟ್ಯಾವು ಲಿಂಗದಂಗ್ ಜ್ವಾಪಾನ ಮಾಡು
ಇರದಿದ್ರ ಗಂಡ ಹೋಗಿ ಗುಂಡ ಆಕ್ಕತಿ
ಗುಂಡ ಹೋಗಿ ಗೂಗಿ ಆಕ್ಕತಿ
ಊರ ಮುಂದ ಹಂದ್ರ ಹಾಕು

ಶಿಸುವಿಗೆ ತೊಟ್ಟಿಲಾ ಕಟ್ಟು
ಕಳಸಗಿತ್ತಿಗೆ ಕಳಾ ಬರ್‍ತಿ ಗಾಣಮಿಣಿ[೧೩೨]

ಇಂತಹ ಹೇಳಿಕೆಗಳಲ್ಲಿ ಭಕ್ತ ಭಗವಂತನನ್ನು ಸೇರುವುದಕ್ಕೆ ಯೋಗ್ಯವಾದುದನ್ನು ಭಗವಂತ ಭಕ್ತನ ನಡುವೆ ಕೋಮುವಾದ ನಿವಾರಣೆ ಮಮತಾ ಪೂರ್ಣವಾದ ವಿಧಾನ ಸಾಮಾಜಿಕ ಪ್ರಜ್ಞೆ ಮತ್ತು ಸಾಮಾಜಿಕ ಕಳಕಳಿ ಇಂತಹ ಹೇಳಿಕೆಗಳ ಆಶಯವಾಗಿದೆ. ಎಲ್ಲ ಸಂಸ್ಕೃತಿಯಲ್ಲಿರುವಂತೆ ಹಾಲುಮತ ಸಂಸ್ಕೃತಿಯಲ್ಲಿಯೂ ಪೂರ್ವಜರ ಮತ್ತು ಹಿರಿಯರು ನಮ್ಮ ಜೀವನಕ್ಕಾಗಿ ಮಾಡಿರುವ ಎಲ್ಲ ಸಮಾಜದಲ್ಲಿರುವಂತೆ ಮತ್ತು ಆಚರಿಸುವ ಸಂಸ್ಕೃತಿಯ ಆಚಾರ ವಿಚಾರಗಳ ಪದ್ಧತಿಯನ್ನು ಶಾಸ್ತ್ರೋಕ್ತವಾಗಿ ನಡೆಸಿಕೊಂಡು ಹೋಗುತ್ತಾರೆ.

ಲೇ ! ಮಳ್ಳ ಮಗನ ಹಿರ್‍ಯಾರ ಆಸ್ತಿ ಕಳಿಬ್ಯಾಡ ಭಕ್ತಿಲಿ ದುಡಿದ ಅದನ್
ಬೆಳಸ್‌ಲೇ ಹೋಗು ಹಿಗ್ಗಸಲೇ ಕುಗ್ಗಸ ಬ್ಯಾಡಾ ಹಿಡಿ ಭಂಡಾರ
ಗಾಣಮಿಣಿ[೧೩೩]

ಇಂತಹ ಅರ್ಥಪೂರ್ಣ ತಿಳುವಳಿಕೆಯನ್ನು ಒಡೆಯರರು ಹೇಳಿಕೊಟ್ಟಿದ್ದಾರೆ. ಬೆಳಸಿಕೊಂಡು ಹೋಗುವಂತೆ ಸೂಚನೆ ಕೊಟ್ಟರು. ಇಂತಹ ಅನುಭವಪೂರ್ಣ ಹೇಳಿಕೆಗಳನ್ನು ನಾವು ಮರೆತು ಈ ಕಲಿಯುಗದಲ್ಲಿ ಅಜ್ಞಾನಿಗಳಾಗಿ, ಹೊಣೆಗೇಡಿಗಳಾಗಿ ಬೀದಿ ಬೀದಿಗೆ ತಿರುಗುವ ಸ್ಥಿತಿ ಬಂದಿದೆ. ಭಗವಂತನನ್ನು ಆತ್ಮೀಯವಾಗಿ ಎಪ್ಪಾ, ಅಜ್ಜಾ, ಬುದ್ದಿ, ಸ್ವಾಮಿಜಿ, ತಂದೆ, ತಾಯಿ, ಗುರು, ಆಪ್ತಬಂಧು ಮುಂತಾದ ರೂಪಗಳಲ್ಲಿ ಭಕ್ತನು ದೈವವನ್ನು ಸಂಬೋಧಿಸುತ್ತಾನೆ. ಇಲ್ಲಿ ವ್ಯಕ್ತಿಯ ವ್ಯಕ್ತಿತ್ವ ಸಮಾಜೀಕರಣಗೊಳ್ಳುತ್ತದೆ. ತನ್ನ ಅಂತರಂಗದ ವಿವಿಧ ಭಾವನೆಗಳನ್ನು ನಿವೇದಿಸಿಕೊಳ್ಳುವ ಮನಮುಟ್ಟಿ ಹೇಳುವ ರೀತಿ ಮಾರ್ಮಿಕವಾಗಿದೆ.

ಎಪ್ಪ ಅಂದ! ನಾಲ್ಕು ಮೂಲಿಗಿ ಸೋಸಿ ನೋಡಿದ್ರ
ಬಂದ ಮೂಲಿಗಿ ಮಳಿ ತರಬೇಕ ಅಂದ್ರ ಇದಿಮಾಯಿ ಬೆನ್ನ ಹಿಂದ
ಬಾರಿಗಿ ತಗೊಂಡು ಬೆನ್ನಹತ್ತಿ ಬಯಲು ಮಾಡ್ಯಾಳ
ಅದ್ರೂ ಒಂದು ಸರ್ವ ಮಳಿ ಕೊಡ್ಡಗಿ[೧೩೪]

ಎಪ್ಪಾ ಅಂದ ! ನಾಲ್ಕು ಮೂಲಿಗಿ ಸೋಸಿ
ನೋಡುದ್ರಾಗ ಬಂದ ಮೂಲಿಗಿ
ಕತ್ತಲಾಯ್ತು ಚಿಂತಿ ಹತ್ತು[೧೩೫]

ಎಪ್ಪ ಅಂದ ! ರಾಜಕೀಯೊಳಗ ಬರ್ಲ

ಆಯ್ತು ಒಕ್ಕಲಿಗ್ಯಾಗ ಸುಖ ಸಿಗಲಿಲ್ಲ

ಧಾರಣಿ ಗಗನಕ್ಕೆ ಏರ್ತು ಎಷ್ಟೇ ಕಷ್ಟ ಬಂದ್ರೂ

ಸಂರಕ್ಷಣೆ ಮಾಡ್ತಿನಿ ಅಂದ[೧೩೬]

ಇಂತಹ ಹೇಳಿಕೆಗಳಲ್ಲಿ ಭಕ್ತ ತನ್ನ ಅಂತರಂಗದ ಭಾವನೆಗಳನ್ನು ನಿವೇದಿಸಿಕೊಳ್ಳುವ ಮನಮುಟ್ಟುವ ರೀತಿ ತುಂಬ ಅರ್ಥಪೂರ್ಣವಾಗಿದೆ. ಹೆಜ್ಜೆ ಹೆಜ್ಜೆಗೂ ಎಪ್ಪಾ. ಎಲೇ ತಂಗೀ, ಎಲೆ ಹುಡುಗಿ, ಎಲೆಗೌಡ, ಎಲೆ ಮಿರಗಾ, ಎಲೇ ಮುಂಗ್ಯೆ ಹಿಡದ ಕೇಳಿರಲೇ ಇಂತಹ ಹೇಳಿಕೆಗಳು ಆಪ್ತತೆಯನ್ನು ಮೂಡಿಸುತ್ತದೆ. ಈ ಮಾತುಗಳಲ್ಲಿ ಏಕಾಗ್ರತೆಯೂ ಅದರ ಮುಖ್ಯ ಲಕ್ಷಣವಾಗಿದೆ. ಮುಜುಗರ ಹೋಗಿ ಆತ್ಮೀಯತೆ ಬರುತ್ತದೆ. ಪಂಚೇಂದ್ರಿಯಗಳಲ್ಲಿ ತನ್ಮಯಗೊಳಿಸಿ ಹಾಲುಮತ ದೈವಗಳ ಚಿಂತನೆಯಲ್ಲಿ ಮನುಷ್ಯ ತಾದಾತ್ಮ್ಯಗೊಳ್ಳುವಂತೆ ಶರಣರ, ಭಕ್ತರ ಸಂಗದಲ್ಲಿ ಇರುವಂತೆ ಮನಸ್ಸಿನ ಹಂಬಲವನ್ನು ಪ್ರೇರೇಪಿಸುತ್ತವೆ.

ಛಲೋ ಮಂದಿ ಗೆಳೆತನ ಮಾಡರಲೇ ಕೆಟ್ಟ ಮಂದಿ ಗೆಳೆತನ ಮಾಡಿದ್ರ

ಮಣಕೈಗೆ ಕಲ್ಲ ಬಡದಂಗ

ನೂರಕ್ಕೊಬ್ಬ ಸತ್ಯ ನೂರಕ್ಕೊಬ್ಬ ಭಕ್ತ

ಜೊಳ್ಳ ಹೊಕ್ಕತಿ ಕಾಲ ಉಳಿತೈತಿ

ಅದಕಾಗಿ ಸತ್ಯವಂತರ ಸಂಗ ಮಾಡರಲೇ

ಅಲಕನೂರ ಸಿದ್ಧ ಹೇಳ್ತಾನ[೧೩೭]

ಎಂಬ ಮಾತು ಢಾಂಬಿಕ ಮತ್ತು ಆಷಾಢಭೂತಿ ಜನರನ್ನು ಕಂಡು ಒಡೆಯರರು ನಿಖರವಾಗಿಯೇ ಹೇಳಿದ್ದಾರೆ. ಕಲಿಯುಗದಲ್ಲಿ ಸತ್ಯವಂತರ ಸಂಖ್ಯೆ ಕಡಿಮೆಯಾಗಿ ಅಲ್ಲೊಬ್ಬ, ಇಲ್ಲೊಬ್ಬ ಭಕ್ತರು ಕಾಣಿಸುತ್ತಾರೆ. ಲೋಕದ ಅಸಂಖ್ಯಾತ ಭಕ್ತರಲ್ಲಿ ಎಲ್ಲರೂ ಒಳ್ಳೆಯವರಲ್ಲ. ಎಲ್ಲರೂ ಕೆಟ್ಟವರಲ್ಲ. ಒಂದಾನೊಂದು ಘಟ್ಟದಲ್ಲಿ ಅವರ ಸ್ವಂತ ಪರೀಕ್ಷೆಯಾಗುವುದು ನಿಶ್ಚಿತ. ಆಗ ಜೊಳ್ಳಿನಂತಿರುವ ದುರ್ಜನರು ಹಾರಿ ಹೋಗಿ ಒಳೆಯ ಕಾಳಿನಂತಿರುವ ಕೆಲವು ಸಜ್ಜನರು ಮಾತ್ರ ಉಳಿಯುತ್ತಾರೆ. ಭಗವಂತನಲ್ಲಿ ಒಂದಾಗಿ ನಿರಂತರವಾಗಿ ಅನುಭವವನ್ನು ಪಡೆದಿರುವ ಭಾವನೆ ಸಮುದ್ರದೊಳಗೆ ಬಿದ್ದ ಆಲಿಕಲ್ಲಿನಷ್ಟೆ ಸಹಜವಾಗಿ ಮೂಡಿಬರುತ್ತವೆ. ಸಮುದ್ರವು ಎಲ್ಲವನ್ನು ಒಳಗೊಂಡಂತೆ ಎಲ್ಲವನ್ನು ಸಹಿಸಿಕೊಳ್ಳುವಂತೆ ಭಗವಂತನ ಶಬ್ದಶಕ್ತಿಯ ಪ್ರತೀಕವಾಗಿದೆ. ಆಲಿಕಲ್ಲು ಪರಮಾತ್ಮನಿಗಾಗಿ ಹಂಬಲಿಸುವ ಜೀವಾತ್ಮನ ಪ್ರತಿಕವಾಗಿದೆ.

ಹೌದು ಹೌದು ಕೆರಿ ತಪ್ಪಿ ಬಾವಿ ಬಿದ್ದಾಂಗ
ಮುಳ್ಳ ಕಿತ್ತ ಗುಡ್ಡದಾಗ ಒಗದಾಂಗ
ಮನ್ಯಾನ ಹಕ್ಕಿ ಹಾರಿ ಹೋಗೇತಿ  ಕಿಚರಾಗ ಬಿದ್ದ ಕೀಡಿಯಂಗ
ಹೊಳ್ಯಾಡತೈತಿ ಗಾಣಮಿಣಿ[೧೩೮]

ಹೆಜ್ಜೆ ಹೆಜ್ಜೆಗೂ ಭಕ್ತರನ್ನು ಪರೀಕ್ಷಿಸಿ ನೋಡುವ ಇಂತಹ ಹೇಳಿಕೆಗಳು ಪ್ರಶ್ನಿಸುವ ಆತ್ಮೀಯತೆ ಅಂತರಂಗದ ಭಾವನೆಗಳು ಒಡೆಯರರಲ್ಲಿ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತವೆ. ಅಂತರಂಗದ ಜೀವಾತ್ಮದ ಆತಂಕ ಮತ್ತು ಕಳವಳಗಳನ್ನು ಭಾವಪೂರ್ಣವಾಗಿ ಸಂವೇದನಗೊಳ್ಳುತ್ತವೆ.

ಆಡು ಮಕ್ಕಳಿಗೆ
ಉಡಾಹಿಡಿಬಾರದ ತಾಯಿ ತೊಡಿ ತೊಟ್ಟಿಲಾಗಬೇಕು
ಉರಿ ಒಳಗಿನ ಕರ್ಪೂರದಂತೆ
ಬೈಲು ಬಟಾ ಬೈಲಾಗಬೇಕು[೧೩೯]

ಇಂತಹ ಹೇಳಿಕೆಗಳು ಹಾಲುಮತ ದೈವವನ್ನು ನಾನಾರೂಪಗಳಲ್ಲಿ ಭಾವಿಸಿ ಆರಾಧಿಸುವ ಭಕ್ತಿಯ ಒಂದು ವಿಧಾನ. ತಾಯಿಯಂತೆ, ತಂದೆಯಂತೆ ಸದಾ ಜೊತೆಯಲ್ಲಿರುವ ಆತ್ಮೀಯನಂತೆ ಭಗವಂತನನ್ನು ಭಾವಿಸಿ ಸಂವಾದಿಸುವ ಬಗೆಯಲ್ಲಿ ಒಡೆಯರರು ಆಳುಮಕ್ಕಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ಇದು ಅವರ ದಯಾಗುಣವನ್ನು ತೋರಿಸುತ್ತದೆ.

ಎರದ ಕೈಕಾಲು
ಹಾಲ ಬಟ್ಲ
ಬಲಗೈಯಾಗ ಆರತಿ
ಆವಾಗ ಬಂದಾನೋ
ನಮ್ಮ ಕರಿಸಿದ್ಧ
ನಮ್ಮನ್ನ ಕೇಳಿ ಹಾಲು ಕುಡಿತಾನ ಭಕ್ತರಿಗೆ ಬೇಡಿದ್ದ ಕೊಟ್ಟಾನ
ಬೇಡಿದ್ದ ಕೊಟ್ಟಾನ ಹಿಡಿ ಭಂಡಾರ[೧೪೦]

ಎಂಬ ಹೇಳಿಕೆಯಲ್ಲಿ ಭಗವಂತ ನಂಬಿದವರಿಗೆ ನಂಬಿದ್ದನ್ನೇ ಕೊಡುತ್ತಾನೆ. ತಂದೆಯಂತೆ ಆತ ಎಡಗೈಯಲ್ಲಿ ಹಾಲಿನ ಬಟ್ಟಲನ್ನು ಬರುವ ರೂಪದಲ್ಲಿ ಕಲ್ಪಿಸಿ ಯಾವಾಗ ಬಂದಾನೋ ನಮ್ಮ ದೇವ್ರು ಎಂದು ಭಗವಂತನ ಬರುವಿಕೆಗೆ ಹಾತೊರೆಯುತ್ತಾರೆ. ಎಂಬ ನಿರೀಕ್ಷೆ ಹೇಳಿಕೆಯಲ್ಲಿದೆ.

ಬ್ಯಾಡಂದ್ರ ಬರಬಾರದಲೇ
ರಸ್ತೆಗೆ ಬಿದ್ದ ಜಗಳಾಡ ಬ್ಯಾಡರಿ

ಹುಲಿ ಕರಡಿ ಹೋಗಿ ತೊಟ್ಟಿಲ ಬರತತಿ
ಬಳ್ಳಿ ಹಬ್ಬಿ ಮುಸುಕಿ ಕಾಯಿ ಬಿಟ್ಟತ್ತಿ[೧೪೧]

ಇಂತಹ ಹೇಳಿಕೆಯಲ್ಲಿ ಸಾಹಿತ್ಯದ ಸತ್ಯವಿರದಿದ್ದರೂ ಅನುಭಾವದ ತೀವ್ರತೆ ಇದೆ. ಅವುಗಳ ಶೈಲಿ ಆಕರ್ಷಕವಾಗಿದ್ದು ಆಳವಾದ ಪರಿಣಾಮ ಬೀರಿದೆ ಎಂದು ಹೇಳಬಹುದು. ಇಷ್ಟೇ ಅಲ್ಲದೆ ಹಾಲುಮತ ದೈವದ ಬಗ್ಗೆ ಪ್ರಸಾದಗುಣ ಮತ್ತು ಧಾರ್ಮಿಕ ನಿಷ್ಠೆ ಚೆನ್ನಾಗಿ ಮೂಡಿದೆ ಒಂದೇ ಮಾತಿಗೆ ಒಂದೇ ಮಾತನ್ನು ಪುನಃ ಪುನಃ ಹೇಳುವ ರೀತಿ ಮೆಚ್ಚುಗೆಗೆ ಪಾತ್ರವಾಗಿದೆ. ಸಮುದಾಯ ಯಾವಾಗಲೂ ನೀತಿ ಪ್ರಧಾನವಾಗಿರುತ್ತದೆ. ಗುರು ಹಿರಿಯರು ಪರಸ್ಪರರು ಗೌರವದಿಂದ ಕಾಣುತ್ತಲೆ ಅದು ಹೇಳಿಕೆಗಳಲ್ಲಿ ಅರ್ಥಪೂರ್ಣವಾಗಿ ಅಭಿವ್ಯಕ್ತಗೊಂಡಿದೆ.

ಗುರು ಹಿರ್‍ಯಾರನ ರಾಜ ಪ್ರಜೆಯಂತೆ
ನೋಡಕೋಬೇಕು ಸತ್ಯವಂತ ತಲೆಬಾಗಿ ನಡೆಯಬೇಕು ಅನಿಷ್ಠ
ತೊಲಗಿಸಬೇಕು ದುಷ್ಟ ಶಿಷ್ಟರಂತೆ
ಬಾಳಬೇಕು ಅತ್ತಿ ಸೊಸಿ ಮಾತ
ಕೇಳಬೇಕು ಸೊಸಿ ಅತ್ತಿ ಮಾತ
ಕೇಳಬೇಕು ಗಾಣಮಿಣಿ ಹಿಡಿ ಭಂಡಾರ[೧೪೨]

ಈ ಹೇಳಿಕೆಗಳಲ್ಲಿ ಕೌಟುಂಬಿಕ ಜೀವನದ ಚಿತ್ರಣ ಅರ್ಥಪೂರ್ಣವಾಗಿ ಮೂಡಿಬಂದಿದೆ ಆಳು ಅರಸನಾಗಿ, ಅರಸು ಆಳಾಗಿ ಹೇಳುವ ಶಾಸ್ತ್ರದ ವೇದ ಆಗಮಗಳು. ಶೀಲ ಶಕುನಗಳು, ಮಂತ್ರ–ತಂತ್ರಗಳು, ಅಭದ್ರವಾಗಿ ಸತ್ಯ ಉಳಿದು ಬರುತ್ತವೆ. ಕೆಲವು ಧಾರ್ಮಿಕ ಹೇಳಿಕೆಗಳಲ್ಲಿ ಪ್ರಕೃತಿ ವಿಕೋಪವಾಗಿ ದವಸ ಧಾನ್ಯಗಳು ಇಲ್ಲದಂತಾಗಲು ಜನ ಕಂಗಾಲಾಗುತ್ತಾರೆ.

ಕೊನೆಗೂ ಒಮ್ಮೆ ಪುಣ್ಯದ ರಾಶಿ ಹೋತು
ರಾಶಿ ಮಾಡಿದ ರಾಶಿಗಿ ಬೀಜ
ಉಳಿಲಿಲ್ಲ ಖನ ಹೋತು ಕನಜ ಹೇರು
ಬಂಡಿಗೆ ಕೀಲ ಮುರದಂಗ ಆತು[೧೪೩]

/ ಕೇಳಿರಲೇ ಕೇಳಿ
ಆಷಾಡ ಗಾಳಿ ಬೀಸೇತಿ
ಮಳಿ ಹೋಗೇತಿ ತೌಡಿನ ಹೋಳಿಗಿ ತಿನ್ನವಂತ
ಪರಿಸ್ಥಿತಿ ಬಂದೇತಿ

ಇಂತಹ ಹೇಳಿಕೆಗಳು ಬದುಕಿನ ಕಠೋರ ವಾಸ್ತವವನ್ನು ಅರ್ಥಪೂರ್ಣವಾಗಿ ಬಣ್ಣಿಸುತ್ತವೆ. ಇಲ್ಲಿ ನೇರ ಮತ್ತು ನಿಷ್ಠುರ ಸಂಗತಿಯನ್ನು ಒಡೆಯರರು ಹೇಳಿದ್ದಾರೆ. ಬರಗಾಲವನ್ನು ಹೊನ್ನಿನ ಶೂಲಕ್ಕೆ ಹೋಲಿಸಿದ್ದಾರೆ. 'ತೌಡಿನ ಹೋಳಿಗೆ ತಿನ್ನುವ ಕಾಲ ಬಂದೀತು' ಎಂಬ ಮಾತು ಅರ್ಥಪೂರ್ಣವಾಗಿದೆ. ಅದನ್ನು ಹೋಗಲಾಡಿಸಲು ಶ್ರಮ ಬಹಳ ಮುಖ್ಯವಾಗಿದೆ. ಇದರಿಂದ ಮನುಷ್ಯ ಮನುಷ್ಯರಂತೆ ಬದುಕಬೇಕು ಎಂಬ ಹಿರಿಮೆಯನ್ನು ಮೇಲಿನ ಹೇಳಿಕೆ ತೋರಿಸುತ್ತದೆ. ಮನುಷ್ಯನು ಸಮಾಜದಲ್ಲಿ ಎಲ್ಲರನ್ನು ವಿಶ್ವಾಸಕ್ಕೆ ತಗೆದುಕೊಂಡು ಎಲ್ಲರ ಜೊತೆಗೆ ಸಹನೆ, ತಾಳ್ಮೆ, ಹೊಂದಾಣಿಕೆಯಿಂದ ಹೋಗಬೇಕು ಎಂಬುದು ಧಾರ್ಮಿಕ ಹೇಳಿಕೆಗಳ ಹಿಂದಿರುವ ಆಶಯವಾಗಿದೆ.

ಈ ಜೀವನ ಮೂರ ದಿನದ ಸಂತಿ
ತಿಳಿದ ನೋಡಿದರ ಏನ ಇಲ್ಲ ವಿಚಾರ ಮಾಡಿ ನಡಿಬೇಕ್ರೋ
ಇವತ ಇದ್ದ ಮನುಷ್ಯ ನಾಳೆ ಇರುದಿಲ್ಲ    ಇರುವ ತನಕ ಎಲ್ಲರೂ
ನಮ್ಮವರೂ ತಮ್ಮವರೂ    ಎಂದು ನಿಮ್ಮನ್ನ ನೀವು ತಿಳಿದುಕೊಂಡು
ನಡೆಯಿರಿ   ದೇವರ ದಿಂಡ್ರ ಮರಿಬ್ಯಾಡ್ರಿ[೧೪೫]

ಈ ಹೇಳಿಕೆಯನ್ನು ಧಾರ್ಮಿಕವಾಗಿ ವಿಶ್ಲೇಷಣೆ ಮಾಡಿದಾಗ ಹಲವು ಸಂಗತಿಗಳು ವ್ಯಕ್ತವಾಗುತ್ತವೆ. ಮನುಷ್ಯನ ಬದುಕು ಅಸ್ಥಿರ ಅಂದರೆ ಶಾಶ್ವತವಲ್ಲ ಕ್ಷಣಿಕ. ಇರುವಷ್ಟು ಕಾಲ ಮನುಷ್ಯ ಸಮಾಜದ ಋಣ ತೀರಿಸಬೇಕು ಒಡೆಯರರಾಗಲಿ, ಅನುಭಾವಿಗಳಾಗಲಿ ಈ ಬದುಕನ್ನು ಮೂರು ದಿನದ ಸಂತೆ ಎಂದೇ ಕರೆದಿದ್ದಾರೆ. ಅದು ನಿಜವು ಹೌದು. ಮನುಷ್ಯ ಇರುವಷ್ಟು ಕಾಲ ಎಲ್ಲರ ಜೊತೆಗೆ ಒಂದಾಗಿ ಬದುಕಬೇಕು ಇನ್ನೊಬ್ಬರ ಸುಖ ದುಖದಲ್ಲಿ ಭಾಗಿಯಾಗಬೇಕು ಅವರ ಹಿತೈಷಿಯಾಗಿ ಬದುಕಬೇಕು. ಅದನ್ನು ಬಿಟ್ಟು ದ್ವೇಷ, ಅಸೂಯೆ ಪಡಬಾರದು ಅದಕ್ಕಾಗಿ ದೇವರು, ದೈವಗಳು, ಹಿರಿಯರ ಮತ್ತು ಗುರುಗಳ ಬಗ್ಗೆ ಅಪಾರವಾದಂತಹ ಶ್ರದ್ಧೆ, ನಂಬಿಕೆ ಬೇಕೇಬೇಕು ಅದನ್ನು ಬಿಟ್ಟು ತಾನೇ ಶ್ರೇಷ್ಠ ಎಂಬ ಭಾವನೆ ಕನಸಿನಲ್ಲಿಯೂ ಬರಬಾರದು ಅದನ್ನೆ ಒಡೆಯರರು ಹೀಗೆ ಹೇಳುತ್ತಾರೆ.

ಏ ತಮ್ಮ ಹರೆಯ, ಅಧಿಕಾರ ಅಂತಸ್ತು
ಇವು ಬಾಳ ದಿವಸ ಇರುದಿಲ್ಲ ನೀರಾಗಿನ ಗುಳ್ಳಿ ಇದ್ದಂಗ ಹರೆಯ,
ಅಧಿಕಾರ ಅಂತಸ್ತು ಇದ್ದಾಗ ನಾಲ್ಕು ಮಂದಿಗೆಸಹಾಯ ಮಾಡಬೇಕು
ಇರದಿದ್ರ ಅವು
ಮುಗಿದ ಮ್ಯಾಲ ನಿನ್ನ ಯಾರು ಮಾತನಾಡಿಸುವುದಿಲ್ಲ.
ತಿಳಕೊಂಡ ನಡಿಲೇ ನನ್ನ ಗುಡಿಗೆ
ಬಾಗಿ ಬಾ ಬಗ್ಗಿ ಬರಬೇಕು ಓಡಿ ಭಂಡಾರ

ಈ ಹೇಳಿಕೆಯಲ್ಲಿ ಒಡೆಯರರು ಬದುಕಿನ ತಿಳುವಳಿಕೆಯನ್ನು ಅರ್ಥಪೂರ್ಣವಾಗಿ ಹೇಳಿದ್ದಾರೆ ಮನುಷ್ಯನ ಹತ್ತಿರ ಯೌವ್ವನ, ಅಧಿಕಾರ, ಅಂತಸ್ತು ಇದ್ದಾಗ ನಾಲ್ಕು ಜನರಿಗೆ ಒಳ್ಳೆಯದಾಗುವಂತ ಕೆಲಸ ಮಾಡಬೇಕು. ಅದನ್ನು ಬಿಟ್ಟು ತನಷ್ಟಕ್ಕೆ ತಾನು ಬೀಗಿದರೆ ಅದು ಅವನಿಗೆ ತೊಂದರೆ ಯಾಗುತ್ತದೆ. ಅಧಿಕಾರ ಹೋದಮೇಲೆ ಅವನ ಸ್ಥಿತಿ ನಾಯಿಯ ಪಾಡು ಆಗುತ್ತದೆ. ಎಂಬ ತಿಳುವಳಿಕೆಯ ಮಾತನ್ನು ಒಡೆಯರರು ಸಾರಿ ಹೇಳಿದ್ದಾರೆ.

ಬಂಡಿಯ ಹೂಡಿ ಕರಿದುಂಡಿ ಹೇರಿ ಶಂಕಿತೊಂಡಿ ಕುಳಿತ ಬಂಡಿಯ
ಮೇಲ ಶಂಕಿತೊಂಡಿ ಕುಳಿತ ಬಂಡಿಯ ಮೇಲ
ಹೊಡಕೊಂಡ ನಡೆದ ಗುಡ್ಡದ ಮೇಲ[೧೪೭]

ಉಡುವಿನ ನಾಲಿಗೆ ಹಾಗೆ ಎರಡಾಗ ಬಾರದು
ಬೀರಪ್ಪ-ಮಾಳಪ್ಪ ಮೆಚ್ಚುದಿಲ್ಲ[೧೪೮]

ಇಂತಹ ಹೇಳಿಕೆಗಳನ್ನು ಧಾರ್ಮಿಕವಾಗಿ ವಿಶ್ಲೇಷಣೆ ಮಾಡಿದಾಗ ಸಮಕಾಲಿನ ಸಾಮಾಜಿಕ ಮತ್ತು ಸಂಸ್ಕೃತಿಕ ಘಟನೆಗಳನ್ನು ಕುರಿತು ಒಡೆಯರರು ಹೇಳುವ ರೀತಿ ಮಾರ್ಮಿಕವಾಗಿದೆ. ಮನುಷ್ಯ ಜನ್ಮ ದೊಡ್ಡದು ಅದನ್ನು ಉಪಯೋಗಿಸಿಕೊಳ್ಳಬೇಕು ಅಂದರೆ ಸಮುದಾಯದಲ್ಲಿ ಚೆನ್ನಾಗಿ ಬದುಕಲು ಕಲೆಯಬೇಕು. ಬಂಡಿಯ ಹೂಡಿ ಅದರ ಮೇಲೆ ಕತ್ತೆಗಳನ್ನು ಕುಡ್ರಿಸಿದರೆ ಏನು ತಾನೆ ಪ್ರಯೋಜನ ಕತ್ತೆಗಳಿಗೆ ತಾವು ಎಲ್ಲಿ ಕುಳಿತಿದ್ದೇವೆ ಎಲ್ಲಿ ಹೊರಟಿದ್ದೇವೆ ಎಂಬುದು ಗೊತ್ತಾಗುವುದಿಲ್ಲ. ಆದ್ದರಿಂದ ಅರ್ಹತೆಗೆ ತಕ್ಕಂತೆ ಮನ್ನಣೆ ಕೊಡಬೇಕು ಎರಡನೆ ಹೇಳಿಕೆ ಬಹಳ ಅರ್ಥವತ್ತಾಗಿದೆ. ಮನುಷ್ಯ ಉಡುವಿನ ನಾಲಿಗೆ ಹಾಗೆ ಎರಡಾಗಬಾರದು ಅಂದರೆ ನಂಬಿದವರಿಗೆ ಎರಡು ಬಗೆಯ ಬಾರದು ಉದ್ದಕ್ಕೂ ವಿಶ್ವಾಸದಿಂದ ಇರಬೇಕು ಎಂಬುದು ಬಹಳ ಮುಖ್ಯವಾದ ಸಂಗತಿ. ಹೇಳಿಕೆಗಳ ಧಾರ್ಮಿಕವಾಗಿ ಇನ್ನೊಂದು ಲಕ್ಷಣ ವೆಂದರೆ ಅಲ್ಲಲ್ಲಿ ಗದ್ಯವನ್ನು ಸೇರಿಸಿ ಒತ್ತಿ ಹೇಳುವುದು ಅಂದರೆ ಒಡೆಯರರ ಹತ್ತಿರ ವಿದ್ಯಾವಂತರಲ್ಲದೆ ಅವಿದ್ಯಾವಂತರೂ ಸಹ ಬರುತ್ತಾರೆ ಅವರಿಗೆ ಅವರದೇ ಆದ ಧಾರ್ಮಿಕ ಪರಿಭಾಷೆಯಲ್ಲಿ ಹೇಳಿದರೆ ಅರ್ಥ ಸ್ಪಷ್ಟವಾಗುತ್ತದೆ. ಎಂಬುದು ಮುಖ್ಯವಾಗಿದೆ.

ಕೇಳ್ರೇ ಕೇಳ್ರೇ ಮನಸ್ಸಿನ್ಯಾಗ ಇದದ್ದು ಆಗಿದೆ.
ಬಾವುಳ್ಳ ಭಕ್ತನ ಮನಿಯಲ್ಲಿ
ರಾಯಭಾರಿಯ ಮರವೇನು
ರಾಯಭಾರಿಯ ಮರಕಪ್ಪ ರಾಜದಕ್ಕಿಗಳ

ಕೂಡ್ಯಾವ ಲೆಕ್ಕನಿಲ್ಲದ ಗಿಣಿ ಹಿಂಡ ಕೂಡಿ
ಹಾಲ ಹಣ್ಣವ ಮೇದಾವ ಹಾಲ ಹಣ್ಣವ
ಮೇದಾವಲ್ಲೋ ಭಕ್ತಗ
ಹರಕಿಯ ಕೊಟ್ಟಾವೊ ಆಳು ಮಕ್ಕಳ
ಉಂಡಮನಿಯಾಗ ಹಾಲ
ಕಾವಲ್ಯಾಗಿ ಹರಿತತಿ ಆಳು ಮಕ್ಕಳು
ಉಂಡ ಮನಿಯಾಗ ತುಪ್ಪದ ಕಾವಲ್ಯಾಗಿ ಹರಿತತಿ
ಹಿಡಿ ಭಂಡಾರ ಗಾಣಮಿಣಿ[೧೪೯]

ಇಂತಹ ಹೇಳಿಕೆಗಳಲ್ಲಿ ಭಕ್ತರು ಕಾಯಾ ವಾಚಾ ಮನಸ್ಸಿನಿಂದ ಹಾಲುಮತ ದೈವಗಳಿಗೆ ನಡೆದುಕೊಂಡರೆ ದೈವಗಳು ಭಕ್ತರಿಗೆ ಬೇಡಿದನ್ನು ಕೊಡುತ್ತವೆ. ಇಲ್ಲಿ ಬಳಕೆಯಾದ 'ಹಾಲ ಕಾವಲಿ', 'ತುಪ್ಪದ ಕಾವಲಿ' ಇವು ಫಲವಂತಿಕೆಯ ಸಂಕೇತಗಳಾಗಿವೆ. ಬದುಕಿನಲ್ಲಿ ಗುರುವಿನ ಸ್ಮರಣೆ ಬಹಳ ಮುಖ್ಯವಾದುದು ಎಂಬುದು ಈ ಹೇಳಿಕೆಯ ಹಿಂದಿರುವ ತರ್ಕವಾಗಿದೆ.

ಎಲೇ ಮಕ್ಕಳಿರಾ ಕೇಳ್ರಿ ಆಷಾಡ ಬೀಸೇತಿ ಮಿರಗನ ಸಾಲ ಬಂದಾವ
ಹೌದೋ ಮೂಡಲ ಗಾಳಿ ಬೀಸ್ಯಾವ ಮೂಡಲ ಗಾಳಿ ಬೀಸ್ಯಾವ ಹೌದೋ
ಮುಂದಿನ ಗಾಳಿ ಬಂದಾವ ಹಳ್ಳದ ನೀರ ಹೊಳ್ಳಾಡಿ ಹರದರ ಹಳ್ಳೆಲ್ಲ
ಹಸರಾದಾವ
ಹಕ್ಕರಕ್ಕಿ ಹಸರಾಣಿ ಮೇದಾವ ಚಿಕ್ಕದಾಹೂಡಿ ಮೇದಾವ[೧೫೦]

ಈ ಹೇಳಿಕೆಯನ್ನು ಗಮನಿಸಿದಾಗ ಸಮುದಾಯದ ಸದಸ್ಯರು ಸಮಾಜದಲ್ಲಿ ಬದುಕುವಾಗ ಔಪಚಾರಿಕ ಮತ್ತು ಅನೌಪಚಾರಿಕ ಸಂದರ್ಭದಲ್ಲಿ ಕೆಲವು ವೇಳೆ ಸಾಲ ಮಾಡಬೇಕಾಗುತ್ತದೆ. ಗ್ರಾಮದಲ್ಲಿ ಮಳೆ ಬೆಳೆ ಚೆನ್ನಾಗಿ ಆದಾಗ ಬದುಕು ಹಸನಾಗಿರುತ್ತದೆ. ಮನೆಯಲ್ಲಿ ಕಾಳುಕಡಿ, ಕಾಸು ಇರುತ್ತದೆ ಅವುಗಳ ಸಹಾಯದಿಂದ ಸಾಲ ಕೊಟ್ಟವರಿಗೆ ಮರಳಿ ಕಾಸು ಕೊಡಬೇಕು. ಅದು ಧರ್ಮವು ಹೌದು. ಅದಕ್ಕಾಗಿ ಒಡೆಯರರು 'ಸಾಲ ಮಾಡಬ್ಯಾಡ್ರಿ ಮಾಡಿದರ ತೀರುಸುವುದರನ್ನು ಮರಿಬ್ಯಾಡ್ರಿ' ಎಂದು ಹೇಳಿದ್ದಾರೆ. ಈ ಹೇಳಿಕೆಯ ಹಿಂದೆ ಬದುಕಿನ ಕ್ರಮ ಕುರಿತು ಅವರ ಹೇಳಿದ ಮಾತು ಯಾವ ಸಂದರ್ಭಕ್ಕೂ ಅನ್ವಯವಾಗುತ್ತದೆ.

ಸಮುದಾಯದ ಸಾಮಾಜಿಕ ಜೀವನದಲ್ಲಿ ದೇವಸ್ಥಾನಗಳಿಗೆ ಆರಂಭದ ಕಾಲದಿಂದಲೂ ತುಂಬ ಮಹತ್ವದ ಸ್ಥಾನವಿದೆ. ಹಳ್ಳಿಗಳಲ್ಲಿ ನಡೆಯುವ ಸಣ್ಣಾಟ, ಬಯಲಾಟ, ಜಾತ್ರೆ, ಮದುವೆ, ಹಬ್ಬ-ಹರಿದಿನಗಳಲ್ಲಿ ಊರಲ್ಲಿ ದೈವ ಸೇರಿದಾಗ ನ್ಯಾಯ ತೀರ್ಮಾನವಾಗುವಾಗ ಇವು ಸಾಮಾನ್ಯವಾಗಿ

ದೇವಸ್ಥಾನದ ಪೌಳಿಯಲ್ಲಿ (ಆವರಣ) ನಡೆಯುತ್ತವೆ. ಊರಿನ ಸಮುದಾಯದ ಸದಸ್ಯರಿಗೂ ಹಾಲುಮತ ದೈವದ ಬಗ್ಗೆ ಗೌರವ ಇರುತ್ತದೆ. ಸಹೋದರರ ಕಲಹ, ಕೌಟುಂಬಿಕ ಕಲಹ, ಗ್ರಾಮದ ಸಮಸ್ಯೆಗಳು ಬಂದಾಗ ಊರಿನ ದೈವ ಹೀಗೆ ಹೇಳುತ್ತದೆ.

ನಾಳೆ ಮಂಗಳಾರ ಕೌಲ ಕಟ್ಟರಿ
ಏನೆಂಬುದು ತಿರ್ಮಾನ ಆಗುತ್ತದೆ.
ಹಿಂಗ್ ಎಷ್ಟದಿವಸ ಜಗಳಾಡುತ್ತಾ ಹೊಗುತ್ತಿರಿ ಊರಾಗ ಕುಡ್ಯಾಕ ನೀರಿಲ್ಲ
ಮೊದಲ ಅದನ್ನು ಬಗೆಹರಿಸಿಕೊಳ್ಳಿರಿ ನಂತರ ನನ್ನ ಜಾತ್ರೆ ಮಾಡಿರಿ
ನಾಲ್ಕ ಮಂದಿ ಹಿರ್‍ಯಾರ ಬರ್‍ರಿ, ಭಂಡಾರ ತಗೋರಿ
ಹೊಂದಕೊಂಡು ಹೋಗ್ರಿ[೧೫೧]

ಎಂದಾಗ ಊರ ಹಿರಿಯರು ಹಾಲುಮತದ ದೈವದ ಭಂಡಾರ ಹಣ್ಣಿಗೆ ಹಚ್ಚಿಕೊಂಡು 'ಯಪ್ಪ ಬೀರಪ್ಪ ನೀನು ಹೇಳಿದಂಗ ಆಗಲಿ ನೀನು ಹೇಳಿದ ಪ್ರಕಾರ ನಾವು ಹಾಗೆ ಮಾಡುತ್ತೇವೆ ನಿನ್ನ ಆರ್ಶಿವಾದ ನಮ್ಮ ಊರಿನ ಮ್ಯಾಲ ಇರಲಿ'. ಇದರಂತೆ ಕೌಟುಂಬಿಕ ಕಲಹದಲ್ಲಿಯೂ ಹಾಲುಮತ ದೈವದ ನಿರ್ಣಯ ಕೊನೆಯದಾಗುತ್ತದೆ. ಗಂಡ–ಹೆಂಡತಿ ಜಗಳವಾಡಿ ಅದರ ಪರಿಹಾರಕ್ಕೆ ಬೀರಪ್ಪನಿಗೆ ಮೊರೆಹೋಗುತ್ತಾರೆ.

ಎಲೇ ಮಕ್ಕಳಿರ್‍ಯಾ ಮದುವೆ ಆಗಿ ಐದು ವರ್ಷ ಆಯಿತು  ಇನ್ನು
ನಿಮಗ ಬುದ್ದಿ ಬಂದಿಲ್ಲ ಮಕ್ಕಳಾ ದೊಡ್ಡವರ ಆಗ್ಯಾರ ನಿಮ್ಮ ಜಗಳ
ಕೇಳಿದರ ಅವರ ಮನಿಸ್ಸಿನಮ್ಯಾಲ  ಯಾವ ಪರಿಣಾಮ ಆಗುತ್ತದೆ. ನಿಮಗೆ
ತಿಳಿದುಲ್ಲಾ  ಗಂಡ–ಹೆಂಡತಿ ಬ್ರಹ್ಮ ಹಾಕಿದ ಗಂಟು ಹೊಂದಕೊಂದ
ಹೋಗ್ರಿ ಮುಂದಕ ಹೋಗಬ್ಯಾಡ್ರಿ ಇಲ್ಲಿ ಬಗೆಹರಿತು ಹಿಡಿ ಭಂಡಾರ
ನಾಳೆ ಅಮಾಸಿಗೆ ಇಬ್ಬರು ಜೋಡಿಲೆ ಬರ್‍ರಿ[೧೫೨]

ಇಂತಹ ಹೇಳಿಕೆಗಳನ್ನು ಕೇಳಿದಾಗ ಒಡೆಯರರು ಮನಸ್ಸು ಹಳ್ಳಿಗರ, ಊರಿನ ಮತ್ತು ಕೌಟುಂಬಿಕ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವರಿಗೆ ತಿಳುವಳಿಕೆ ಹೇಳಿ ಬಗೆ ಹರಿಸುತ್ತಾರೆ. ಅವರು ದೈವತ್ವದ ಪ್ರತೀಕವಾಗಿರುವುದರಿಂದ ಜನತೆ ಅವರ ಮಾತನ್ನು ಕೇಳುತ್ತಾರೆ. ಮುಂದೆ ಅಂದರೆ ಪೋಲಿಸ್‌ಠಾಣೆ, ಕೊರ್ಟ್ ಕಚೇರಿ ಕಟ್ಟೆ ಹತ್ತಿದರೆ ಹಳ್ಳಿ ಜನರಿಗೆ ತೊಂದರೆಯಾಗುತ್ತದೆ ಇದನ್ನು ಒಡೆಯರರು ಅರ್ಥಮಾಡಿಕೊಂಡು ಊರಿನ ಸಮಸ್ಯೆಗಳನ್ನು ತಮ್ಮಲ್ಲಿ ಪರಿಹರಿಸಲು ಪ್ರಯತ್ನಿಸುತ್ತಾರೆ. ಅದರಲ್ಲಿ ಅವರು ಯಶಸ್ಸನ್ನು ಕಂಡಿದ್ದಾರೆ. ಇದರಂತೆ ಸಹೋದರರಲ್ಲಿ ಕಲಹಗಳಾದಾಗ ಅವುಗಳನ್ನೂ ಒಡೆಯರರು ಬಗೆಹರಿಸಲು ಪ್ರಯತ್ನಮಾಡುತ್ತಾರೆ. ದೈವ ಎಂದರೆ ದೇವರ ಸಮಾನ ಎಂಬ ಭಾವನೆ ಹಳ್ಳಿಗರಲ್ಲಿರುವುದರಿಂದ ದೈವತ್ವಕ್ಕೆ ಶರಣಾಗುತ್ತಾರೆ.

ಎಲೆ ಮಕ್ಕಳಿರಾ ಮನ್ಯಾಗ ಇರಾವರು ಮೂರು ಮಂದಿ ಅದರಿ
ಜಗಳಾಡಬ್ಯಾಡ್ರಿ ನಿಮ್ಮ ಹೊಲ ಆರು ಎಕರೆ ಇದೆ
ತಲಾ ಎರಡೆರಡು ಎಕರೆ ಬರತೈತಿ ಹಂಚಿಕೊಂಡು
ಊಟಮಾಡ್ರಿ ನಿಮ್ಮ ಅವ್ವಗು ವಯಸ್ಸಾಗಿದೆ.
ಚಂದವಾಗಿ ನೋಡಿಕೊಳ್ರಿ ರಟ್ಟಿ ಮುರಿದ ರೊಟ್ಟಿ ತಿನ್ರಿ ಹನ್ನೆರಡ
ಮಂದಿ ಮಾತ ಕೇಳಬ್ಯಾಡ್ರಿ
ಈ ಜಲ್ಮ ಹುಟ್ಟಿ ಬರಲ್ಲಿಕ್ಕ ಹುಲ್ಲ ಅಲ್ಲ ವಾಗಾತಿಯಿಂದ
ಹೋಗಿರಿ ಅಜ್ಜನ ಅಂಬಲಿ ಕುಡಿದ ಹೋಗ್ರಿ ಹಿಡಿ ಭಂಡಾರ
ಗಾಣಮಿಣಿ[೧೫೩]

ಈ ಹೇಳಿಕೆಯನ್ನು ಗಮನಿಸಿದಾಗ ಒಡೆಯರರು ಸಹೋದರ ಕಲಹವನ್ನು ಪರಸ್ಪರರ ವಾದ ವಿವಾದವನ್ನು ಅರ್ಥಮಾಡಿಕೊಂಡು ತಮ್ಮದೆ ಆದಂತಹ ನಿರ್ಣಯವನ್ನು ಕೊಡುತ್ತಾರೆ. ಅನಗತ್ಯವಾಗಿ ಜಗಳವಾಡದಂತೆ, ಹೊಂದಿಕೊಂಡು ಹೋಗುವಂತೆ, ಸಂಘರ್ಷಕ್ಕೆ ಎಡೆಮಾಡಿಕೊಡದಂತೆ, ಸ್ಪರ್ಧೆಗೆ ಇಳಿಯದಂತೆ ಸೂಚನೆ ಕೊಡುತ್ತಾರೆ. ಸಹೋದರರು ದೇವರ ಹೇಳಿಕೆಯನ್ನು ತಮ್ಮ ಅರಿವಿಗೆ ತಿಳಿದುಕೊಂಡು ಅದರಂತೆ ನಡೆದುಕೊಳ್ಳುತ್ತಾರೆ. ಎಲ್ಲರೂ ಒಂದೆ ತಾಯಿಯ ಉದರದಲ್ಲಿ ಬಂದವರು ಪರಸ್ಪರ ಕಲಹ ಎಂದಿಗೂ ಬೇಡವೇ ಬೇಡ ಎಲ್ಲರೂ ಒಬ್ಬರನ್ನು ಇನ್ನೊಬ್ಬರನ್ನು ಅರ್ಥಮಾಡಿಕೊಂಡು ಹೋಗುವಂತೆ ಹೇಳುತ್ತಾರೆ. ಹೇಳಿಕೆಯ ಅರ್ಥವನ್ನು ತಿಳಿದುಕೊಂಡು ಊದ್ದಕ್ಕೂ ಹೊಂದಿಕೊಂಡು ಹೋಗುತ್ತಾರೆ. ಒಡೆಯರರ ಹೇಳಿಕೆಗಳ ಧಾರ್ಮಿಕ ಪರಿಭಾಷೆ ಬಹಳ ಮಹತ್ವದ್ದು. ಅವರು ಹೇಳಿದ್ದನ್ನು ಕೌಟುಂಬಿಕವಾಗಿ ಮತ್ತು ಊರಿನ ಜನ ಕೇಳಿ ತಮಗಾದ ಲೋಪಗಳನ್ನು ಸರಿಪಡಿಸಿಕೊಂಡು ಹೋಗುತ್ತಾರೆ. ಇಲ್ಲಿ ಕರ್ನಾಟಕ ಸಂಸ್ಕೃತಿಯ ಹಿರಿಮೆ-ಗರಿಮೆ ವ್ಯಕ್ತವಾಗುತ್ತದೆ. ಹಳ್ಳಿಗಳಲ್ಲಿ ಪ್ರಭುತ್ವ ಅಂದರೆ ಗೌಡರು, ಕುಲಕರ್ಣಿಗಳು ಹಳ್ಳಿಯ ಜನರ ಮೇಲೆ ಅಧಿಕಾರ ನಡೆಸಿದಾಗ ಹಳ್ಳಿಗರು ಅದರಿಂದ ಪಾರಾಗಲು ದೈವಕ್ಕೆ ಬೇಡಿಕೊಳ್ಳುತ್ತಾರೆ. ಆಗ ಒಡೆಯರರು ದೈವವನ್ನು ಸೇರಿಸಿ

ಎಲೆ ಮಕ್ಕಳಿರಾ ನಾನು ನಿಂತ ಹೇಳತೇನಿ ನೀವು ಕುಂತ ಕೇಳ್ರಿ
ಗೌಡ್ರ, ಕುಲಕರ್ಣಿ ಅವರ ನೀವು ಊರ ಹಿರ್‍ಯಾರು
ಬಡವರನ್ನು ಬಗ್ಗಿಸಬ್ಯಾಡರಿ, ಧ್ವನಿ ಇಲ್ಲದವರನ್ನು ತುಳಿಬ್ಯಾಡ್ರಿ
ಊರಿನ ಮಾನ ಮರ್‍ಯಾದೆ ದೃಷ್ಟಿಯಿಂದ ಎಲ್ಲರನ್ನು ವಿಶ್ವಾಸಕ್ಕೆ
ತೆಗೆದುಕೊಂಡು ಹೋಗ್ರಿ ಎಲ್ಲರಿಗೂ ಚಲೋ ಆಗತೈತಿ ಹಿಡ್ರಿ ಭಂಡಾರ[೧೫೪]

ಇದನ್ನು ಗಮನಿಸಿದಾಗ ಒಡೆಯರರ ಹೇಳಿಕೆಗಳು ಊರಿನ ಹಿರಿಯರ ಮೇಲೆ ಆಳವಾಗಿ ಪರಿಣಾಮ ಬೀರಿ ಅವರ ತಿಳಿವಳಿಕೆಯ ಮಟ್ಟವನ್ನು ಎಚ್ಚರಿಸುತ್ತದೆ. ಬಡವ ಬಗ್ಗರನ್ನು, ದೀನ ದಲಿತರನ್ನು, ಹಿಂದುಳಿದವರನ್ನು ಎಲ್ಲರನ್ನು ಸಮಾನದೃಷ್ಟಿಯಿಂದ ನೋಡುವಂತೆ ಅವರ ವರ್ತನೆಯನ್ನು ಪರಿವರ್ತನೆ ಮಾಡುತ್ತವೆ. ಇದನ್ನು ಗಮನಿಸಿದಾಗ ಹಳ್ಳಿಗಳ ಅಭಿವೃದ್ಧಿಯ ದೃಷ್ಟಿಯಿಂದಲೂ ಹೇಳಿಕೆಗಳು ತುಂಬ ಪರಿಣಾಮ ಬೀರುತ್ತವೆ.

ಎಷ್ಟು ಹೇಳಿದ್ರೂ ಕರಿತಲಿ ಮಾನವಗ
ಸಮಾಧಾನವಾಗಲೊಲ್ಲದು ಹವಳ, ಮುತ್ತು
ತೂಕ ಮಾಡೂದ್ರಾಗ ಮುಂಗಾರಿ ಮೂರುಗುಂಜಿ ಮಡಿಮೆಯಾಯ್ತು
ಹಿಂಗಾರಿ ಮೂರುಗುಂಜಿ
ಹೆಚ್ಚಾಯ್ತು ಬಸವಗ ಬಾಲಗ ಬಗಲಾಗಿ
ಹಿಡಕೊಂಡ ದಂಡೀಗಿ ಹಚ್ಚೀನಿ ಬಸವನ ಚಿಕ್ಕಾ ದಸ್ರೀಗಿ ಹರಿದೀನಿ[೧೫೫]

ಇಂತಹ ಹೇಳಿಕೆಯಲ್ಲಿ ಪ್ರಕೃತಿಯ ಭಯಾನಕ ಚಿತ್ರಣಗಳೂ ಉಂಟು. ಆಶಾವಾದದ ನಿರೂಪಣೆಗಳೂ ಉಂಟು–ಜನರಲ್ಲಿ ದುಷ್ಟ ಗುಣಗಳು ಮಿತಿಮೀರಿದಾಗ ಕಾಡುವ ದೇವರು ಒರುವಳೆಂದು ಅದನ್ನು ತಪ್ಪಿಸಲು ಭಕ್ತರು ನೀತಿಯಿಂದ ಇರಬೇಕೆಂದು ಒಡೆಯರರು ಮತ್ತೆ ಮತ್ತೆ ಹೇಳಿದ್ದಾರೆ. ಯಾವ ಹಾನಿಯೇ ಇರಲಿ, ಸಂಭವಿಸಲಿ ಅದು ದುರಾಚಾರರಿಗೆ ಮಾತ್ರವಲ್ಲದೆ ಸದಾಚಾರಿಗಳಿಗಲ್ಲ. ಪಾಪ ಪುಣ್ಯಗಳನ್ನು ಮೀರಿದ ಸ್ಥಿತಿಯಲ್ಲಿ ದೈವಿಕ ಅನನ್ಯತೆಯ ಭಾವನೆಯಲ್ಲಿ ಅರ್ಪಣೆಗೊಳ್ಳುವ ಹಂಬಲ ಒಡೆಯರರದು. ಭಕ್ತಿಯ ಮಾರ್ಗದಲ್ಲಿ ನಿರಂತರ ಸಾಧಕನಿಗೆ ಅದರಿಂದ ಮೇಲೇರಲು ಸಾಧ್ಯವೇ ಇಲ್ಲ. ಭಕ್ತ ತನ್ನ ಸಾಧನೆಯಿಂದ ಮೇಲೆ ಬರಬೇಕು ಮತಭಾವದಲ್ಲಿ ದೈವತ್ವವನ್ನು ಕಂಡುಕೊಂಡ ಒಡೆಯರರಿಗೆ ಅಜ್ಞಾನವನ್ನು ಕಳೆದು ಸುಜ್ಞಾನವನ್ನು ಪಾಲಿಸುವುದು ಆಗಿದೆ. ಅಲ್ಲದೆ ಸಲ್ಲದ ಕೆಲಸ ಮಾಡುವುದನ್ನು ತಡೆಹಿಡಿಯುವ, ಎಚ್ಚರಿಸುವ ಶಕ್ತಿ ಒಡೆಯರರಿಗೆ ಇದೆ. ಅವರಿಗೆ ಭಕ್ತರ ಬಗ್ಗೆ ಅಪಾರ ವಾತ್ಸಲ್ಯ ಇದೆ.

ಬಡ ಪಶುವಿನಂತೆ ಒದ್ದಾಡ ಬ್ಯಾಡರಲೇ ಕಾಲ ಬಡಕೊಂಡ ಒದ್ದಾಡಿದರ
ಗತಿಹೆಂಗ
ತುಡುಗ ದನದಂಗ ಒದ್ದಾಡಬ್ಯಾಡರಿ
ಕೊಂಡವಾಡಕ ಹಾಕತಾರ ನೆಟ್ಟಗ
ಬಾಳೇ ಮಾಡುವಂಗ್ ಕಲಿರಿ[೧೫೬]

ಪ್ರಪಂಚದ ಅಜ್ಞಾನದಲ್ಲಿ ಸಿಲುಕಿಕೊಂಡು ಮನಸಿನ ಅಸಾಯಕತೆಯನ್ನು ಬಡ ಪಶುವಿಗೆ ಹೋಲಿಸಿಕೊಂಡು ಕೆಸರಲ್ಲಿ ಬಿದ್ದು ಒದ್ದಾಡುವುದುಕ್ಕಿಂತ ಭಗವಂತನ ಸೇವೆ ಮುಖ್ಯವೆಂದು

ಹೇಳುತ್ತಾರೆ. ಇಂತಹ ಹೇಳಿಕೆಗಳು ಹಾಲುಮತ ದೈವಗಳ ಪಲ್ಲಕ್ಕಿ, ಉತ್ಸವಗಳಲ್ಲಿ ಕಂಡುಬರುತ್ತವೆ. ಪಲ್ಲಕ್ಕಿ ಸೇವೆ ಮಾಡುವಾಗ ಭಕ್ತರಿಗೆ ದೇವ ದೇವತೆಗಳು ಕಾಣುವ ಹಾಗೆ ಅಲಂಕಾರ ಮಾಡುತ್ತಾರೆ. ದೇವರು ಬರುವ ದಾರಿಯನ್ನು ಭಕ್ತನು ಕಾಯುತ್ತ ನಿಲ್ಲುವನು ಏಕೋಭಾವದಿಂದ ದೇವರ ದಾರಿಯನ್ನು ಕಾಯುವ ಭಕ್ತ ಹಾಗೂ ಹಬ್ಬಕ್ಕೆಂದು ಭಕ್ತನ ಮನೆಗೆ ಬರುವ ದೇವರ ಸಂಬಂಧ ಬಹಳ ಅರ್ಥಪೂರ್ಣವಾದುದು. ಅಲ್ಲಿ ಏಕಾಗ್ರತೆ ಇದ್ದು ದೈವಿಕ ಚಿಂತನೆ ಅನಂದದಲ್ಲಿ ಮುಳುಗಿರುತ್ತದೆ. ಬೆಟ್ಟದಂತಹ ದೃಢವಾದ ವ್ಯಕ್ತಿತ್ವವನ್ನು ಬೆಳೆಸಿಕೊಂಡಿರುವ ಒಡೆಯರರಿಗೆ ಅರ್ಥಪೂರ್ಣವಾದ ಹೇಳಿಕೆಗಳು ಅವರ ಬಾಯಿಯಿಂದ ಬರುತ್ತವೆ. ಭಗವಂತನು ಭಕ್ತರಿಗೆ ಭವರೋಗದಿಂದ ಮುಕ್ತಗೊಳಿಸುವ ವೈದ್ಯನ ರೂಪದಲ್ಲಿ ಬೇವಿನ ನೀರನ್ನು ಭಕ್ತರ ಕಾಲಿಗೆ ಹಾಕುತ್ತಾರೆ. ಆ ಮೂಲಕ ಭಕ್ತರಿಗೆ ಬಂದಂತಹ ರೋಗವು ನಿವಾರಣೆಯಾಗುತ್ತದೆ. ಆತ ರೋಗದಿಂದ ಬಿಡುಗಡೆ ಹೊಂದಿ ಬೀರಪ್ಪನ ಕರುಣೆಯಲ್ಲಿ ಭಕ್ತಿ ಪೂರ್ಣವಾಗಿ ಸಮರ್ಪಣಾ ಮನೋಭಾವದಿಂದ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತಾನೆ. ಆಗ ಬಡಮಂದಿಗೆ ದೈವ ಮೇಲೆ ಬಂದು ಕುಣಿಯುತ್ತಾ ಹೇಳುತ್ತಾರೆ. ಆ ಭಾವ ತುಂಬ ಅರ್ಥಪೂರ್ಣವಾಗಿದೆ.

ಭಾವುಳ್ಳನನ ಭಕ್ತನ ಮನಿಯಾಗ
ಮನವೊಂದು ಮೀಸಲಿಡದಾನ/
ಮನವೊಂದು ಮೀಸಲ್ಲಿಡದಾನೇನಂವ ಮೇಳ ಮಾಳಿಗಿ ಏರ್ಯಾನೋ/[೧೫೭]

ಮೇಲ ಮಾಳಗಿ ಏರ್ಯಾನೇನಾಂವ ದೇವರ ದಾರಿ ನೋಡ್ಯಾನ/
ದೇವರ ದಾರಿ ಒಳಗಪ್ಪ ಕೆಂದೂಳ ಬರ ಮಂಡಲ/[೧೫೮]

ಕೆಂದೂಳ ಬರ ಮಂಡಲದಾಗ
ಕೆಂಪ ನಿಶಾನಿ ಕಂಡಾನ ಕೆಂಪ ನಿಶಾನಿ ಕಂಡಾನೇನಂವ ಗುಂಪ
ಸತ್ತಿಗೆ ಕಂಡಾನೋ[೧೫೯]

ಓೀಗೆ ಹೇಳಿಕೆಗಳಲ್ಲಿ ದೇವರು ಪಲ್ಲಕ್ಕಿ ಬರುವಾಗ ದೇವರಸಿಯು ತನ್ನನ್ನೇ ತಾನು ಮೈ ಮರೆತು ಕುಣಿಯುತ್ತಾನೆ. ಆಗ ಭಕ್ತರು ತುಂಬ ಗೌರವದಿಂದ, ಏಕಾಗ್ರತೆಯಿಂದ ಅವನನ್ನು ನೋಡುತ್ತಾರೆ, ನಮಸ್ಕರಿಸುತ್ತಾರೆ ಅವನ ಮೇಲೆ ಹೂವು, ಭಂಡಾರ ಚೆಲ್ಲುತ್ತಾರೆ. ಈ ಒಂದು ಸೇವೆಯು ಭಕ್ತರಿಗೆ ಸಂಕಲ್ಪ ಇದ್ದಂತೆ ಇಂತಹ ಹಾರೈಕೆಗಳು ನಮ್ಮ ಸಾಮಾಜಿಕ ಜೀವನದ ಅವಿಭಾಜ್ಯ ಅಂಗಗಳಾಗಿವೆ. ಅವುಗಳ ಮನೆ ಧರ್ಮ ಜಾತ್ಯಾತೀತವಾದ ಮತ್ತು ಪ್ರಜಾಪ್ರಭುತ್ವವಾದ ನಮ್ಮ ಜನಪದ ಜೀವನಕ್ಕೆ ನಿಜವಾಗಯೂ ಆದರ್ಶಗಳಾಗಿವೆ. ವೈಯಕ್ತಿಕ ಜೀವನಕ್ಕೆ ಶ್ರೇಯಸ್ಸನ್ನು

ಬಯಸುವ ಹೇಳಿಕೆಗಳು ಸಕಲ ಲೋಕದ ಸುಕ್ಷೇಮಕ್ಕಾಗಿಯೂ ಹಂಬಲಿಸುತ್ತವೆ. ಅವು ಲೌಕಿಕವಾಗಿ ಮತ್ತು ಅಲೌಕಿಕವಾಗಿಯೂ ಉಪಯೋಗಕ್ಕೆ ಬರುತ್ತವೆ. ಒಂದಿಲ್ಲೊಂದು ಬಗೆಯಿಂದ ಜೀವನದಲ್ಲಿ ಉಪಕೃತ ವ್ಯಕ್ತಿಗಳು ಕೊಡುವ ಹಾರೈಕೆಗಳು. ನಾವು ಉದಯಕಾಲದಿಂದ ಮಲಗುವುದರೊಳಗೆ ಕೇಳುತ್ತಲೇ ಇರುತ್ತೇವೆ. ಒಬ್ಬ ಭಕ್ತ ತನಗೆ ಕಷ್ಟ ಅಥವಾ ಸುಖ ಬಂದಾಗ ಹಾಲುಮತ ದೈವದಲ್ಲಿ ಮೊರೆ ಇಟ್ಟಾಗ ಅಥವಾ ಧನ್ಯತೆಯಿಂದ ಬೇಡಿಕೊಂಡಾಗ ಅವನಿಗೆ ತುಂಬಾ ಸಂತೋಷವಾಗುತ್ತದೆ. ಅದುವೆ ಹಾಲುಮತ ದೈವದಲ್ಲಿ ಭಕ್ತರು ಇಟ್ಟಿರುವ ಆಳವಾದ ನಂಬಿಕೆ ಪಲ್ಲಕ್ಕಿ ಸೇವೆ ಮಾಡುವಾಗ, ದೇವರು ಗದ್ದಿಗೆಗೊಳ್ಳುವಾಗ ಪಲ್ಲಕ್ಕಿ ಓಲಾಡುತ್ತದೆ. ಆಗ ದೈವದವರು 'ಏನ ಹೇಳ್ತಿ ಹೇಳ ಬಾಳ ಕಾಡಬ್ಯಾಡ, ಇನ್ನ ಭಕ್ತರ ಪ್ರಸಾದ ಆಗಿಲ್ಲ' ಎಂದು ದೈವವನ್ನು ಕೇಳುವಾಗ ಆಗ ದೇವರಸಿ ಮನದಲ್ಲಿ ದೇವರು ತುಂಬುತ್ತದೆ.

ಹಾಲು ಹಣ್ಣು ನೀಡುವಂತ

ಭಾಗ್ಗೇವು ಕೊಡುವಂತ ಕರಿಸಿದ್ದ ಅಲಕನೂರ ಕರಿಸಿದ್ಧ ಚಿಂಚಲಿ ಮಾಯವ್ವ

ಖಡೋಲಿ ಇಟ್ಟಪ್ಪ ಇವರನ್ಯಾಕ ಕರಸಲಿಲ್ಲ ಜಾತ್ರೆಗೆ

ಮುಂದಿನ ಜಾತ್ರೆಗೆ ಇವರ್‍ನ ಕರಿಸಬೇಕಕೇಳರಲೇ ಕೇಳರ್‍ರೀ ಅಂದ್ರ ನಾ

ಗದ್ಧಗಿ ಕುಂದ್ರತಿನಿ[೧೬೦]

ಕುಲ ಎತ್ತಿ ಮಾತಾಡಬ್ಯಾಡ್ರಿ ಕುಲ ಎತ್ತಿ ಕೊಡಬ್ಯಾಡ್ರಿ ಹಾಲ, ಅನ್ನ ಇಟ, ಮನಿ

ಹಾಲ ಸಾಗವಾಗತತಿ

ಬೆಣ್ಣಿ ಬಟ್ಟಲವಾಗತತಿ ಮನಿಗೆ ಗಂಡ ಮಕ್ಕಳ

ಹೆಣ್ಣು ಮಕ್ಕಳ ತುಂಬತತಿ ದಂಡಿಗೆ ಹೋದ್ರೂ ಧರ್ಮ ಮರಿಬ್ಯಾಡ್ರಿ

ಬಣ್ಣದ ಬಾಗಲ ಎರಡಾಗಬಾರದು

ತಿಳಕೊಂಡ ನಡಿರಲೇ[೧೬೧]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ಹಾಲುಮತ ದೈವಗಳು ಒಂದು ನಿರ್ದಿಷ್ಟ ಸಮುದಾಯಕ್ಕೆ ಸೀಮಿತವಾಗಿಲ್ಲ. ಅವರ ದೇವಸ್ಥಾನಗಳಿಗೆ ಎಲ್ಲ ಸಮುದಾಯದ ಭಕ್ತರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ನಿಜವಾದ ಜಾತ್ಯಾತೀತ ಮನೋಭಾವನೆ ಅಲ್ಲಿ ಇರುತ್ತದೆ. ಅವರೆ ಹೇಳುವಂತೆ ಕುಲ ಎತ್ತಿ ಮಾತಾಡಬ್ಯಾಡ್ರಿ ಎಂಬ ಮಾತು ಅರ್ಥಪೂರ್ಣವಾದುದಾಗಿದೆ. ಮನುಷ್ಯ ಯಾವುದೇ ಒಂದು ನಿರ್ದಿಷ್ಟ ಸಮುದಾಯದಲ್ಲಿ ಹುಟ್ಟಿದರು ಮುಂದೆ ಆತ ಬೆಳೆದಂತೆ ತನ್ನ ಸಮುದಾಯವು ಸೇರಿದಂತೆ ಎಲ್ಲರನ್ನು ಸಮಾನವಾಗಿ

ಸಮತಾ ಮನೋಭಾವನೆಯಿಂದ ನೋಡಿಕೊಳ್ಳಬೇಕು ಎಂಬುದು ಹೇಳಿಕೆಯ ಹಿಂದಿನ ತರ್ಕವಾಗಿದೆ. ಬಣ್ಣದ ಬಾಗಲ ಎರಡಾಗಬಾರದು ಎಂಬ ಮಾತು ಸಹಿತ ಅರ್ಥಪೂಣವಾದುದು ಸಹೋದರರಲ್ಲಿ ಕಲಹಗಳುಂಟಾದಾಗ ಭಾಗವಾಗುವ ಮನೋಭಾವನೆಯಿಂದ ತಮ್ಮ ಸಮಸ್ಯೆಗಳನ್ನು ದೇವರಲ್ಲಿ ಒಡೆಯರರ ಮೂಲಕ ಅಭಿವ್ಯಕ್ತ ಪಡಿಸಿ ಪರಿಹರಿಸಿಕೊಳ್ಳಬೇಕು ಅವರೇ ಹೇಳುವಂತೆ

ಎಲೇ ಮಕ್ಕಳಿರ್‍ಯಾ ಹೊಂದಕೊಂಡ ಹೋಗ್ರಿ ಕೂಡಿ ಇರ್‍ರಿ ಹಂಚಿಕೊಂಡ ತಿನ್ರಿ

ಬ್ಯಾರೆ ಆಗೊದ್ರಾಗ ಎನ್ ಗಂಧ ಇಲ್ಲ

ಒಬ್ಬರಕೊಬ್ಬರ ತಿಳಕೋಳ್ರಿ ಇನ್ನೊಮ್ಮೆ ಹೇಳತನ್ರೆ

ಬಣ್ಣದ ಬಾಗಲ ಎರಡ ಆಗಬಾರದು

ಒಬ್ಬರಿಗೊಬ್ಬರು ಹೊಂದಾಣಿಕೆ ಮಾಡಿಕೊಂಡ ಹೋಗ್ರಿ ಹಿಡಿ ಭಂಡಾರ ಗಾಣಮಿಣಿ[೧೭]

ಇಂತಹ ಹೇಳಿಕೆಗಳು ಸಮಾಜೋಧಾರ್ಮಿಕವಾಗಿ ತುಂಬ ಮಹತ್ವದ್ದಾಗಿವೆ. ಅವುಗಳಿಗೆ ಅವುಗಳದ್ದೇ ಆದ ಸಾಂಸ್ಕೃತಿಕ ಮಹತ್ವವಿದೆ.ಭಕ್ತರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಇಂತಹ ಹೇಳಿಕೆಗಳು ತುಂಬ ಮಹತ್ವಪೂರ್ಣವಾಗಿವೆ. ಸಾಮಾಜಿಕವಾಗಿ, ಆಧ್ಯಾತ್ಮಿಕವಾಗಿ, ಧಾರ್ಮಿಕವಾಗಿ ಅವು ಮೌಲ್ಯವನ್ನು ಎತ್ತರಿಸಿವೆ. ಅಲ್ಲಿ ನೀತಿ ಇದೆ. ಜೊತೆಗೆ ತಿಳುವಳಿಕೆ ಹೇಳುವ ಪ್ರತಿಮೆಗಳಿಗೆ ಬದುಕಿನ ಬಗ್ಗೆ ಕಾಳಜಿ ಇದೆ. ಆಗ ಜೀವನವನ್ನು ದೃಷ್ಟಿಯಲ್ಲಿಟ್ಟುಕೊಂಡು ಬಂದ ಹೇಳಿಕೆಗಳು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಜನಜೀವನಕ್ಕೆ ನೀತಿ ಧರ್ಮವನ್ನು ಹೇಳುತ್ತವೆ. ಜನಮನವನ್ನು ತಿದ್ದಿ ಕಟ್ಟುವುದೇ ಒಡೆಯರರ ಹೇಳಿಕೆಗಳ ಪ್ರಮುಖ ಆಶಯವಾಗಿದೆ. ಧರ್ಮ ಮತ್ತು ನೀತಿಗಳನ್ನು ಕಾಪಾಡಿದರೆ ಸಮಾಜ ಬದಕುತ್ತದೆ ಎಂದು ಹೇಳುವುದೇ ಹೇಳಿಕೆಗಳ ಪ್ರಮುಖ ಆಶಯವಾಗಿದೆ.

ಹೇಳಿಕೆಗಳು ಹಾಲುಮತ ಸಮುದಾಯದ ಸಂಸ್ಕೃತಿಯ, ಧಾರ್ಮಿಕ ಪರಿಭಾಷೆ ಅರಿಯಲು ತುಂಬ ನೆರವಾಗುತ್ತವೆ. ಒಡೆಯರರು ಪಲ್ಲಕ್ಕಿಯನ್ನು ಹೊತ್ತುಕೊಂಡು ಜೋಲಿ ಹೊಡೆಯುವಾಗ ಅವರ ಮಾತು ತೊದಲುತ್ತವೆ. ಆ ಆಲಾಪನೆಯನ್ನು ಮೌನದಿಂದ ತುಂಬಬಹುದು 'ಬರ್‍ರಲೇ', 'ಕೇಳಿರಿಲೇ' ಎಂಬ ಪದರಚನೆ ಎಲ್ಲ ಭಕ್ತರನ್ನು ಒಂದೆಡೆ ಕೂಡುವಂತೆ ಆಕರ್ಷಣ ಕ್ರಿಯೆಗೆ ಒಳಗಾಗುವಂತೆ ಮಾಡುತ್ತದೆ. ಭಂಡಾರವನ್ನು ಭಕ್ತರ ಹಣೆಗೆ ಹಚ್ಚುವಾಗ ಅದರ ಮಹಿಮೆಯನ್ನು ಬಣ್ಣಿಸುವಾಗ.

ಹಿರಿಹೊಳಿ ದಂಡಿಲಿ ಇಟ್ಟಪ್ಪ ಬರುವಾಗ

ಹಸ್ತದೊಳು ಆಡಿತೊ ಈ ಭಂಡಾರ ಆಳು ಮಕ್ಕಳು ಎಲ್ಲರೂ ವರಮುಂದೆ

ಇರುವುದೇ ಈ ಭಂಡಾರ ದನಗಳಿಗೆ ಮನುಷ್ಯರಿಗೆ ಬ್ಯಾನಿ ಬಂದರೆ
ಹೊಗತತಿ
ಈ ಭಂಡಾರ ಹಚ್ಚಿಕೊಂಡರ್ ಹಿಂಡಿ ಭಂಡಾರ[೧೬೩]

ಭಂಡಾರಕ್ಕೆ ಹಾಲುಮತ ದೈವಗಳಲ್ಲಿ ಮಹತ್ವದ ಸ್ಥಾನವಿದೆ ಅದರಲ್ಲಿ ಔಷಧಿಯ ಗುಣ ಇರುತ್ತದೆ. ಮನುಷ್ಯರಿಗೆ ದನಗಳಿಗೆ ನೋವುಗಳಾದರೆ ಭಂಡಾರ ಹಚ್ಚುತ್ತಾರೆ. ಅದನ್ನು ಹಚ್ಚುವುದರಿಂದ ಕಾಯಿಲೆಗಳು ವಾಸಿಯಾಗುತ್ತವೆ. ಎಂಬ ನಂಬಿಕೆ ಈಗಲೂ ಇದೆ. ಹೇಳಿಕೆಗಳನ್ನು ಹೇಳುವಾಗ ಒಮ್ಮೊಮ್ಮೆ ಆಯಾ ಗ್ರಾಮದೇವತೆಯ ಹೆಸರೂ ಬರುತ್ತದೆ.

ಧರೆಯಾಳು ಹೂಲಿಕಟ್ಟಿದೇವಿ ಕರೆಮ್ಮನ ಮಾನದಿ ಹಾಸುವೆ ಕಂಬಳಿ[೧೬೪]

ಹಾಲುಮತ ಸಂಪ್ರದಾಯವನ್ನೇ ಕುರಿತಾದ ಕೆಲವು ಹೇಳಿಕೆಗಳಲ್ಲಿ ಹೇಳಿಕೆ ಹೇಳಿದ ನಂತರ ಅದರ ವಿವರಣೆಯನ್ನು ವ್ಯಾಖ್ಯಾನಿಸುತ್ತಾರೆ. 'ಸೃಷ್ಟಿ' ಹುಟ್ಟಿದ ರೀತಿಯ ಬಗ್ಗೆ ಹೇಳುವಾಗ

ಆದಿಯಲ್ಲಿ ಆಕಾರ ಇದ್ದಿದ್ದಿಲ್ಲ
ನಿರಾಕಾರ ಇತ್ತೋ ಬರಿ ಬಯಲಾ ವಿದ್ಯಾಧರ ಸುರಸಿದ್ಧ ಸಾಧ್ಯರು
ಯಕ್ಷಿ ಗರುಡ ಕಿಂ ಪುರುಷರು ಇಲ್ಲ
ಸತ್ರಾವೀಸ ನಕ್ಷತ್ರ ರಾಶಿಗಳು ಸಪ್ತ ಸಮುದ್ರ ಗುರುತಿಲ್ಲ[೧೬೫]

ಇದಕ್ಕೆ ಒಡೆಯರರು ಹೇಳುವ ವ್ಯಾಖ್ಯಾನ ಹೀಗಿದೆ: ಏ! ಕೇಳಿರಿಲೇ ಕೇಳ್ರಿ ಬಯಲೊಳಗೆ ಆಕಾರ ಹುಟ್ಟಿ, ಆಕಾಶದಿಂದ ವಾಯು ಹುಟ್ಟಿತ್ತು; ವಾಯುಹುಟ್ಟಿ ಸುಳಿದಾಡಿತು; ಇದೇ ವಾಯುತತ್ವದಿಂದ ಅಗ್ನಿ ಜನಿಸಿತು ಇದೇ ಅಗ್ನಿಯಿಂದ ನೀರು ಹರಿಯಿತು. ಇದೇ ನೀರಿನಿಂದ ಹೆಪ್ಪುಗಟ್ಟಿ ಸೃಷ್ಟಿ ಆಕಾರ ಪಡೆಯಿತು ಪದ್ಯ ಮತ್ತು ಗದ್ಯ ಮಿಶ್ರಿತವಾದ ಇಂತಹ ಹೇಳಿಕೆಗಳು ಸಂವಾದದ ಧಾಟಿಯಲ್ಲಿರುತ್ತವೆ. ಭಕ್ತರು ಮಧ್ಯ ಮಧ್ಯ 'ಯಪ್ಪ ಮುಂದೆ ಏನು', ಯಪ್ಪ 'ಹೇಳು' ಎನ್ನುತ್ತಾರೆ. ವ್ಯಾಖ್ಯಾನದ ಉಚ್ಚಾರಣೆಯ ಸಂದರ್ಭದಲ್ಲಿ ಧ್ವನಿ ತರಂಗಗಳ ತೀವ್ರತೆಯಿಂದ ಏರಿಳಿತವಾಗುತ್ತದೆ.

ಕಾಲಾಗ ಗೆಜ್ಜೆ ಕಟ್ಟಿ
ಹೆಗಲಾಗ ಕಂಬಳಿ ಹಾಕಿ
ಕೈ ಮಾಡಿ ಹೇಳಕಿ ಹೇಳ್ಯಾನ ಕರಿಸಿದ್ಧ
ಮಿರಗ್ ಮಿಂಚತತಿ ಆರಿದ್ರ ಆಗತತಿ
ಮುಂತ್ತಿನಂತಹ ಜ್ವಾಳ ಮಾನಿಯಾಗ[೧೬೬]

ಇಂತಹ ಸಂದರ್ಭದಲ್ಲಿ ಪಠ್ಯವು ಪುನರಾವರ್ತನೆಯಾಗುತ್ತದೆ. ಅದರಿಂದ ಹೊರಡುವ ಅರ್ಥದ ಸಾಮಾಜಿಕ ಮುಖ ನಿರ್ವಹಣೆಗೊಳ್ಳುತ್ತದೆ. ಭಕ್ತರು ಇಂತಹ ಹೇಳಿಕೆಗಳನ್ನು ಹಣೆ ತುಂಬ ಭಂಡಾರ ಹಚ್ಚಿಕೊಂಡು ತಲೆಯ ಮೇಲೆ ಟವಾಲು ಅಥವಾ ಸೆರಗು ಹಾಕಿಕೊಂಡು ಏಕಾಗ್ರತೆಯಿಂದ ಒಡೆಯರರ ಹೇಳಿಕೆಗಳನ್ನು ಕೇಳುತ್ತಾರೆ. ಪ್ರಕೃತಿಯ ಬದಲಾವಣೆ ಅಥವಾ ಹೇಳಿಕೆಗಳ ಮಹಿಮೆಯಿಂದ ಮಳೆ ಆದರೆ ಮೊನ್ನೆ ಬೀರಪ್ಪನ ಹೇಳಿಕೆ ಆಯಿತು ಆದ ಕಾರಣ ಊರಲ್ಲಿ ಮಳೆ ಆಯಿತು, ಬೆಳೆ ಹುಲುಸಾಗಿ ಬಂದಿತು ಎಂದು ಬೀರಪ್ಪನಿಗೆ ಊರಿನ ದೈವವು ನಡೆದುಕೊಳ್ಳುತ್ತಾರೆ. ತಮ್ಮಿಂದ ಸಾಧ್ಯವಾದಷ್ಟು ಕಾಳು-ಕಡಿ ಆ ದೈವಕ್ಕೆ ಸಮರ್ಪಿಸಿ, ಜಾತ್ರೆ-ಹಬ್ಬ-ಉತ್ಸವ ಮಾಡುವಂತೆ ಊರಿನ ದೈವವು ಒಡೆಯರರಿಗೆ ಹೇಳುತ್ತಾರೆ. ಆಗ ಊರಿನ ಜನರೆಲ್ಲರೂ ಜಾತ್ರೆಯಲ್ಲಿ ಭಾಗಿಗಳಾಗಿ ಸೇವೆಸಲ್ಲಿಸುತ್ತಾರೆ.

ಬೇರೆ ಬೇರೆ ಸಂದರ್ಭಗಳಲ್ಲಿ ಬಳಕೆಯಾಗುವ ಒಡೆಯರರ ಹೇಳಿಕೆಗಳ ವ್ಯಾಪ್ತಿ ಚಿಕ್ಕದು. ಅದರ ಪ್ರತಿಮಾಶಿಲ್ಪ ಧಾಟಿ, ಧೋರಣೆಗಳಲ್ಲಿ ಅದರ ಸಂಸ್ಕಾರಗಳು ದಟ್ಟವಾಗಿರುತ್ತವೆ. ಅವುಗಳಲ್ಲಿ ವಿಶಿಷ್ಟ ಧ್ವನಿ ಶಕ್ತಿ ಇರುವುದರಿಂದ ವಿಶಿಷ್ಟ ಸಂವೇದನೆ ಇರುತ್ತದೆ. ತಾಯಿಯ ವಾತ್ಸಲ್ಯಭಾವ ಇರುತ್ತದೆ. ಅವು ಆ ಊರಿನ ಅಥವಾ ಒಂದು ಸಮುದಾಯದ ಮನೋಧರ್ಮವನ್ನು ತೋರಿಸುತ್ತದೆ. ನವುರಾದ ಭಾವಗಳನ್ನು ಅಷ್ಟೇ ನವುರಾದ ಕುಸುರಿನಿಂದ ಕೆತ್ತಿ ನಿಲ್ಲಿಸಬಲ್ಲ ಧಾರ್ಮಿಕ ಪ್ರತಿಮಾಶಾಸ್ತ್ರ ಮುಟ್ಟಿದರೆ ಮಾಸುವಂತಹದು.

ಕೇಳಿರಿಲೇ ಕೇಳಿರಿ
ಹಳ್ಳದ ಮಳಲಾಗ ತಿಳಿನೀರ ಹಾಲೊರತಿ
ಬಿಂದಿಗಿ ಹೊತ್ತ ನೀರ
ತಗೋರಿ ನನ್ನ ಪೌಳ್ಯಾಗ
ಐದಸಾರಿ ಮತ್ತ ಹಾಕಿರಿ ನೆತ್ತಿ ತಂಪ ಆಗತತಿ ಆಗುದ
ಆಗತತಿ ಹಿಡಿ ಭಂಡಾರ[೧೬೭]

ಭಕ್ತರು ತಮ್ಮ ಕಷ್ಟಗಳನ್ನು ಹೇಳಲು ಬಂದಾಗ ಒಡೆಯರರು ತಮ್ಮ ಧಾರ್ಮಿಕ ಪರಿಭಾಷೆಯಲ್ಲಿ ತಿಳಿನೀರು, ಹಾಲೊರತಿ, ತಳತಳಿಸುವ ಬಿಂದಿಗಿ, ಭಂಡಾರ ಇವುಗಳ ಸಹಚರ್ಯದಿಂದ ಮುಂದೆ ಆಗಬಹುದಾದ ಸುಖ-ಸಂತೋಷ-ನೆಮ್ಮದಿಯನ್ನು ಹೇಳುತ್ತಾರೆ. ಒಡೆಯರರ ಆ ಮಾತುಗಳು ಒಂದು ಆತ್ಮೀಯ ವಾತಾವರಣವನ್ನು ಸೃಷ್ಟಿಸಿ ಭಕ್ತರ ಅಂತಃಕರಣವನ್ನು ಬೆಳಗುತ್ತದೆ.

ರೊಖ್ಖಕ್ಕೆ ಹಪಾಹಪಿ ಮಾಡಬೇಡರಿ ಜನಾ ಗಳಿಸಿರ
ಮನಸ್ಸ ಗೆಲ್ಲಿರಿ ಗಂಟಹೋಗಿ ನೆಂಟರ್ ಮಾಡಿರಿ ಎಲ್ಲಾರು ಜೊತೆಗೆ
ಬೆಲ್ಲದಂಗ ಇರ್ರಿಲೇ[೧೬೮]

ಮನುಷ್ಯನಿಗೆ ಹಣಗಳಿಸಬೇಕೆಂಬ ಹಪಾಹಪಿ ಇರಬಾರದು ಮನುಷ್ಯ ಹಣದ ಹಿಂದೆ ಬೀಳಬಾರದು ಜನರನ್ನು ಅವರ ಮನಸ್ಸನ್ನು ಗೆಲ್ಲಬೇಕು. ಒಡೆಯರರು ಗಂಟ (ಹಣ)ಕ್ಕಿಂತ ನೆಂಟರ ಮುಖ್ಯ. ರೊಖ್ಖ ಇರದಿದ್ದರೆ ದಿಕ್ಕು (ಜನ) ಇರಬೇಕು ಎಂಬ ತತ್ವ ಇಲ್ಲಿದೆ. ಊರಲ್ಲಿ ಎಲ್ಲರ ಜೊತೆಗೆ ಬೆಲ್ಲದಂತಿರಬೇಕು ಸಹಬಾಳ್ವೆಯಿಂದ ಇರಬೇಕು.

ಒಡೆಯರರು ಹಾಲುಮತ ದೈವ ಮತ್ತು ಭಕ್ತರ ನಡುವೆ ಇರುವ ದೇವ ದೂತರಾದ್ದರಿಂದ ಅವರ ಉಡುಪು ವಿಶೇಷವಾಗಿರುತ್ತದೆ. ತಲೆಗೆ ಬಿಳಿ ಕೆಂಪು ಮಿಶ್ರಿತ ಪೇಟ. ಅದೇ ಬಣ್ಣದ ನಿಲುವಂಗಿ ಅದೇ ಬಣ್ಣದ ಅವರು ಬೆಳಿಗ್ಗೆ ಏಳುವಾಗ 'ರೇವಣಸಿದ್ಧ ರೇವಣಸಿದ್ಧ', 'ಬೀರಪ್ಪ ಬೀರಪ್ಪ ಎಂದು ಹಾಲುಮತ ನಾಮಸ್ಮರಣೆ ಮಾಡುತ್ತ ಏಳುತ್ತಾರೆ. ನಂತರ ಹಳ್ಳ, ಕೆರೆ, ಬಾವಿಗೆ ಹೋಗಿ ಸ್ನಾನಮಾಡುತ್ತಾರೆ. ನಂತರ ತಮ್ಮ ದೇವರ ಪೂಜೆ ಮಾಡುತ್ತಾರೆ. ಅದು ಇವರ ನಿತ್ಯ ಕಾಯಕವಾಗಿದೆ.ನಂತರ ತಮ್ಮ ಆಳುಮಕ್ಕಳ ಮನೆಗೆ ಹೋಗಿ ಪೂಜೆ ಮಾಡಿ ಎಲ್ಲರಿಗೂ ಭಂಡಾರ ಹಚ್ಚುತ್ತಾರೆ. ಅವರ ಊಟವಾದ ನಂತರ ಮನೆಯವರ ಊಟ ನಡೆಯುತ್ತದೆ. ಮಗು ಹುಟ್ಟಿದಾಗ ಮತ್ತು ಶವಸಂಸ್ಕಾರ ಸೂತಕ ಕಳೆಯಲು ಒಡೆಯರರು ಬರಲೇಬೇಕು ಅವರು ಬಂದು ಪೂಜೆ ಮಾಡಿ ಬೀರಪ್ಪನ ತೀರ್ಥ ಸಿಂಪಡಿಸಿದರೆ ಮನೆ ಮಡಿ ಆಯಿತು ಎಂದರ್ಥ. ಭಕ್ತರು ಹರಕೆ ಹೊತ್ತು ಕೊಂಡು ಗುಡಿಗೆ ಬರದಿದ್ದರೆ ವಿಘ್ನಗಳು ಉಂಟಾಗುತ್ತವೆ ಎಂಬುದು ಜನಪದ ನಂಬಿಕೆ.

ಬೀರಪ್ಪ ಕಡಲೆ ಕಾಯಕ
ಬಿಟ್ಟರ ಮೂರು ದಂಡು
ಊರಾಗ ಮಳೆ ಬೆಳೆ ಆಗುದಿಲ್ಲ
ಮಕ್ಕಳ ಮರಿ ಆಗುದಿಲ್ಲ
ಅಮಾಸಿಗೊಮ್ಮೆ ಬೀರಪ್ಪಗ ನಡೆದುಕೊಳ್ಳಬೇಕು[೧೭೯]

ನಂಬಿಕೆಗಳು ಜನಪದ ಧಾರ್ಮಿಕ ಪರಂಪರೆಯಲ್ಲಿ ಆಳವಾಗಿ ಬೇರೂರಿರುತ್ತವೆ. ದೇವರಿಗೆ ನಡೆದುಕೊಳ್ಳದಿದ್ದರೆ ಊರಿಗೆ, ಮನೆಗೆ ಹಾನಿಯಾಗುತ್ತದೆಂದು ದೇವರಿಗೆ ಹರಕೆ ಹೊರುತ್ತಾರೆ. ಭಕ್ತರ ಮನೆಯ ಮುಂದೆ ಬೀರಪ್ಪನ ಪಲ್ಲಕ್ಕಿ ಬಂದರೆ ಭಕ್ತರು ಬೀರಪ್ಪ ಬಂದಿದಾನೆಂದರ್ಥ ಆಗ ಭಕ್ತರು ಒಡೆಯರರಿಗೆ ನಮಸ್ಕರಿಸಿ ಮನೆಯಲ್ಲಿರುವ ಕಾಳುಕಡಿ ಕೊಡುತ್ತಾನೆ. ಆರತಿ ಬೆಳಗುತ್ತಾರೆ. ಆಗ ಒಡೆಯರರು ಪಲ್ಲಕ್ಕಿ ಸಮೇತ ತನ್ನ ಗುಡಿಗೆ ಹೋಗುತ್ತಾರೆ.

ಲೇ ಸುಳ್ಳ ಹೇಳಬೇಡ
ಕಳ್ಳತನ ಮಾಡಬ್ಯಾಡ ಕಣ್ಣ ಕಾಣುದಿಲ್ಲ
ಕಿವಿ ಕೇಳುವುದಿಲ್ಲ ಹುಷಾರಾಗಿ ಹೋಗಿ ಹಿಡಿ ಭಂಡಾರ[೧೮೦]

ಹೀಗೆ ಒಡೆಯರರು ಭಕ್ತರಿಗೆ ಹೇಳುತ್ತಾರೆ. ಆಗ ಭಕ್ತರು ನಮಸ್ಕರಿಸಿ ಕಾಣಿಕೆ ಕೊಡುತ್ತಾರೆ. ಹೇಳಿಕೆಗಳಲ್ಲಿ ಜನಜೀವನದ ಸತ್ಯ ಸ್ವಾರಸ್ಯ ಹದವಾಗಿ ಬೆರೆತಿವೆ.

ಹೇಳಿಕೆಗಳು ಮತ್ತು ಅವುಗಳ ಆಚರಣೆಗಳು ಮಾನವನ ಅಪ್ರಜ್ಞಾವಲಯದಲ್ಲಿ ಬೇರು ಬಿಟ್ಟಿರುವ ಅಂಶಗಳು. ಇದು ಕೇವಲ ಗತಕಾಲಕ್ಕೆ ಸೀಮಿತವಾದುದಲ್ಲ. ಕೇವಲ ಅವಿದ್ಯಾವಂತರಿಗೆ ಸೀಮಿತವಾದುದಲ್ಲ. ಇವು ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಸೇರಿ ಹೋಗಿರುವ ಅಂಶ; ಕೆಲವು ಸಂದರ್ಭಗಳಲ್ಲಿ ಪ್ರಜ್ಞಾವಲಯಕ್ಕೆ ಬರುವ ಅಂಶ. ಅಗೋಚರ ಶಕ್ತಿಗಳಿಗೆ ಮಾನವರು ಹೆದರುವುದು ಸಹಜವೇ. ಅವುಗಳ ಪರಿಣಾಮ ತನಗೆ ಉಂಟಾಗದಂತೆ ತಡೆಯಲು ದೇವರ ಹೇಳಿಕೆಗಳಿಗೆ ಮೊರೆಹೊಗುತ್ತಾರೆ. ಹೇಳಿಕೆಗಳಿಂದ ಮಾನವನಿಗೆ ಪ್ರಯೋಜನ ಆಗಬಹುದು, ಆಗದಿರಬಹುದು ಆದರೆ ಹೇಳಿಕೆಗಳನ್ನು ಕೇಳಿದ ವ್ಯಕ್ತಿಗೆ ಸಮಾಧಾನವಂತೂ ದೋರೆಯುತ್ತದೆ. ಉರುಳುವುದು (ದೀಡ್ ನಮಸ್ಕಾರ), ಭಂಡಾರ ಹಚ್ಚಿಕೊಳ್ಳುವುದು, ನೀವಳಿಸುವುದು, ಆರತಿ ಮಾಡುವುದು, ತಾಯತ ಕಟ್ಟಿಕೊಳ್ಳುವುದು ಇವುಗಳ ಉದ್ದೇಶ ಹಾಗೂ ಪರಿಣಾಮ ಇದೇ ಎಂದು ಹೇಳಬಹುದು. ಇವು ವ್ಯಕ್ತಿಗೆ, ಸಮುದಾಯಕ್ಕೆ ಹೆಚ್ಚಿನ ಮನಸ್ಥೈರ್ಯವನ್ನು ತಂದುಕೊಡುತ್ತವೆ. ಎಂಬುದು ಮನೋವಿಜ್ಞಾನದ ಮನಸ್ ಚಲನಶಕ್ತಿಗೆ ಅಧ್ಯಯನದಿಂದ ಅರ್ಥಮಾಡಿಕೊಳ್ಳಲಾಗಿದೆ.

ಹೇಳಿಕೆಗಳಲ್ಲಿ ಬದುಕಿನ ಹಲವು ಮುಖಗಳು ಚಿತ್ರಿತವಾಗಿರುವುದರಿಂದ ಅವುಗಳಿಗೆ ಸಾರ್ವತ್ರಿಕ ಮುದ್ರೆ ಬಿದ್ದಿರುತ್ತದೆ. ಹಾಲುಮತದ ಸಾರವನ್ನು ಸುಲಭವಾಗಿ ಅರಿಯಬೇಕಾದರೆ ಹೇಳಿಕೆಗಳನ್ನು ಗಮನಿಸಬೇಕು. ಹೇಳಿಕೆಗಳ ಭಾಷೆಯನ್ನು ಇಂದ್ರಿಯಾನುಭವ ಹಾಗೂ ಸಾಮಾಜಿಕ ಚೌಕಟ್ಟಿನಲ್ಲಿ ಅಭ್ಯಸಿಸಿದರೆ ಅದು ಸಾಮಾಜಿಕ ಮತ್ತು ಮನೋಭಾಷಾಧ್ಯಯನವಾಗುತ್ತದೆ.

ದುಡಿ ಬೇಕರಲೇ ರಟ್ಟಿ ಮುರುದ ರೊಟ್ಟಿ ತಿನ್ನಬೇಕು[೧೭೧]

ಅಂಬಲಿ ತಿನ್ನಂವ ಅಂಬರಕ್ಕೆ ಹಾರಿದಂಗಲೇ[೧೭೨]

ಇಂತಹ ಹೇಳಿಕೆಗಳ ಭಾಷಿಕ ರಚನೆ ಗಮನಾರ್ಹ. ಮೇಳಿನ ಹೇಳಿಕೆಗಳಲ್ಲಿ ಪ್ರಾಸವಿನ್ಯಾಸ, ಪದಗಳ ಪುನರಾವರ್ತನೆ ಇವು ಇಡೀ ಹೇಳಿಕೆಗಳಿಗೆ ಸೊಗಸನ್ನು ತಂದಿವೆ. ಈ ಅಂಶಗಳ ಜೊತೆಗೆ ಒಂದು ಪರಂಪರೆಯನ್ನು ಆ ಗಾದೆಗಳು ಕಟ್ಟಿಕೊಡುತ್ತವೆ. 'ಕಾಯಕವೇ ಕೈಲಾಸ' ಎಂಬ ಗಾದೆಯನ್ನು ಆ ಹೇಳಿಕೆಗಳು ಸೂಚಿಸುತ್ತವೆ.

ಕೂರಗಿ ಸಾಗ ಮಾಡೂದರಾಗ ಇದಿಮಾಯಿ
ರಂಡಿ ಇದಿರಿಗಿ ಬಂದಳು ಭೂತ್ಯಾನಹಚ್ಚಿ ಬಯಲು ಮಾಡಿನಿ[೧೭೩]

ಬಡವ ಕುರುಪಿಗಿ ಬಂಗಾರ ಅಣಸ ಹಾಕೀನಿ[೧೭೪]

ಆಡುವಾಗ ಒಂದು ಓಡುವಾಗ ಒಂದು
ಆಡು ಕಾಡಿಗೆ ಓಡಿ ನಾಡೂ
ಹೋಯಿತಲೆ[೧೭೫]

ಹಿಂಡ ಹೊಲ ಹಿಡಿಯುವುದಕ್ಕಿಂತ
ತುಂಡ ಹೊಲ ಹಿಡಿರಿಲೆ ಬಾಳ
ಹಪಾಪಿ ಬ್ಯಾಡರಲೆ[೧೭೬]

ಪಲ್ಲಕ್ಕಿ ಓಡತತಿ
ಹೂವ ಬೀಳತತಿ[೧೭೭]

ಕರಿ ಹೊಲದಾಗ ಬಿಳಿ ಹಾದಿ
ಕಂಚಿ ಮಾರಿ ಬೀರಪ್ಪ
ಕರಿ ಕಂಬಳಿ ಹಾಕೊಂಡ
ಸರೋಹೊತ್ತಿನ್ಯಾಗ ಹೊಂಟಾನ
ಇದರ ಬಂದ್ರ ಭರಾ ಇಂಗಿಸ್ತಾನ
ಭಂಡಾರ ಹಿಡಿರಿಲೆ[೧೭೮]

ಇಂತಹ ಹೇಳಿಕೆಗಳಲ್ಲಿ ಇರುವ ಲಯ, ಪ್ರಾಸ, ನಾದ ಹಾಗೂ ಅಕ್ಷರಗಳ ಆವೃತ್ತಿ ಕಿವಿಗೆ ಇಂಪನ್ನು ತಂದುಕೊಡುತ್ತದೆ. ಅದರ ಜೊತೆಗೆ ಸಮಾಜದ ಸಮತೋಲನವನ್ನು ಗಮನಿಸಬೇಕು. ಆ ರಚನೆಗಳ ಮೇಲೆ ಮೊದಲ ಭಾಗದ ಮೊದಲ ಪದದ ಮೇಲೆ ಮತ್ತು ಎರಡನೆಯ ಭಾಗದ ಮೊದಲ ಪದದ ಮೇಲೆ ಧ್ವನಿತರಂಗಗಳ ತೀವ್ರತೆ ಅಥವಾ ಒತ್ತಡ ಹೆಚ್ಚಿರುತ್ತದೆ. ಅದನ್ನೇ ಆಘಾತ ಎನ್ನುವರು. ಅದು ಧ್ವನಿತರಂಗದ ಕಂಪನ ವಿಸ್ತಾರವನ್ನು ಅವಲಂಬಿಸಿರುತ್ತದೆ. ಮಿಕ್ಕ ಧ್ವನಿಗಳ ಮೇಲೆ ಆಘಾತದ ಪ್ರಮಾಣ ಕಡಿಮೆ ಇರುತ್ತದೆ.

ಒಂದು ಸಿಕ್ಕತ್ತು ಒಂದು ನೆಕ್ಕೋತ್ತು[೧೭೯]

ಮಗಿ ಮಳಿನೋಡು ಭೂಮಿ ಬೆಳಿನೋಡು[೧೮೦]

ಇಂತಹ ರಚನೆಗಳ ಒಡೆಯರರ ಉಚ್ಚಾರಣೆಯಲ್ಲಿ ಧ್ವನಿಯು ಏರಿಳಿತವಾಗುತ್ತದೆ. ಧ್ವನಿಯನ್ನು ಏರಿಸಿ ಉದಾತ್ತ ಶ್ರುತಿಯನ್ನು ನಿರ್ಮಾಣ ಮಾಡಬಹುದು. ಇದು ಸಾಮಾನ್ಯವಾಗಿ ಪ್ರಶ್ನೆಗಳೊಡನೆ ಬರುತ್ತದೆ.

ಅಗ್ಗ ಆಗೇದಂತ ಹಿಂಗ ಬ್ಯಾಡ್ರಲೇ ಮಗ್ಗಲ ಎಲುಬು ಮುರಿದೇನ[೧೮೧]

ಕುರಿಗಳು ಒಂದಕ್ಕೊಂದು ಮುದ್ದಿಯಾಗಿ
ಹೊಂದಿನಿಂತರ್ ಅನಿಕಲ್ಲ ಮಳಿ ಆಗತತಿರೆಲೇ ಕೂರಿಗಿ ಸಜ್ಜ
ಮಾಡರಿಲೇ[೧೮೨]

ಹೆಣ್ಣ ಹುಟ್ಟ್ಯಾವ ಅಂತ
ಮರಗ ಬ್ಯಾಡರಲೇ
ಹೆಣ್ಣು ಅಂದರ ಮನಿತಂಪ ಹೆಣ್ಣು ಇನ್ನೊಂದು ಮನಿಗೆ ದೀಪಾ
ಹಚ್ಚತತಿರೆಲೆ[೧೮೩]

ಇಂತಹ ಅನುಭವೋಕ್ತಿಗಳು ಜನಪದರ ಬದುಕಿನ ರೀತಿ–ನೀತಿಗಳನ್ನು ಬಿಂಬಿಸುತ್ತವೆ. ಅಂತಹ ರಚನೆಗಳು ಧ್ವನಿಯನ್ನು ಕ್ರಮಕ್ರಮವಾಗಿ ಇಳಿಸುತ್ತ ಅನುದಾತ್ತ ಶ್ರುತಿಯನ್ನು ನಿರ್ಮಿಸಬಹುದು. ಭೂತ–ಪಿಶಾಚಿ ಬಡೆದಾಗ :

ಐದು ಅಮಾಸಿ ತಪ್ಪದ ನನ್ನ ಗುಡಿಗಿ ಬರಬೇಕ
ಪೌಳ್ಯಾಗ ಇರಬೇಕು ಮೂಖಿಲೆ ಬರಬೇಕು
ಮೂರು ಹಾದಿ ಕೂಡುವಲ್ಲಿ ಅದಕ್ಕೆ ಬೇಕಾದ ಕೂಳ ಹಾಕಿ ಹೊಳ್ಳಿ
ನೋಡದ ಮೂಖಿಲೆ ನನ್ನ ಗುಡಿಗೆ ಬರಬೇಕು ಬಂದದೆವ್ವ ಬಂದ
ಹಾದಿಲೆ ಹೋಗತತಿ ಏನ್ ಅಂಜ ಬ್ಯಾಡರಿ ಹಿಡಿ ಭಂಡಾರ[೧೮೪]

ಹಗಲು ಆಡಿ ಬನ್ನಿ ಏಳು ಸಮುದ್ರಾ ತಿರುಗಿ ಬನ್ನಿ
ಮುಗಿಲು ಮುಟ್ಟಿ ಬನ್ನಿ ಹತ್ತಬಾರದ ಗಿಡ ಹತ್ತಿ ಬನ್ನಿ
ಮುಂಗೈ ಹಿಡದ ಕೇಳರಿಲೆ ಈ ವರ್ಷ ಆಗುವದ ಆಗತತಿ
ಏನ್ ಚಿಂತಿ ಮಾಡಬ್ಯಾಡರಲೆಕುರಬ್ಯಾಟ್ ಬೀರಪ್ಪ ಹೇಳಿದ
ಮಾತ ಹಸಿ ಗ್ವಾಡ್ಯಾಗ ಹಳ್ಳ ಒಗದಂಗ[೧೮೫]

ಇಂತಹ ಹೇಳಿಕೆಗಳಲ್ಲಿ ಒಡೆಯರರ ಆಡುಮಾತಿನ ಶೈಲಿಯಿದೆ. ಅವುಗಳ ನಾದ ಕಂಪನ ಸಾಮಾನ್ಯ ರೀತಿಯಲ್ಲಿರುವುದು. ಅದು ಹೇಳಬೇಕಾದುದನ್ನು ನೇರವಾಗಿ ಹೇಳುತ್ತದೆ. ಹೇಳಿಕೆಗಳಲ್ಲಿ ಬಹುಮುಖ್ಯವಾದುದು ಧಾರ್ಮಿಕ ಪರಿವಲಯ. ಸಂಕ್ಷಿಪ್ತತೆ ಮತ್ತು ಪ್ರಾಸ ಇವು ಹೇಳಿಕೆಗಳ ಲಕ್ಷಣಗಳಾಗಿವೆ. ಹೇಳಿಕೆಗಳ ಅರ್ಥ ಸ್ಪಷ್ಟ ಮತ್ತು ಪರಿಣಾಮಕಾರಿಯಾಗಿರುತ್ತದೆ. ಅದರಲ್ಲಿಯ ಪದರಚನೆಗಳು ಅರ್ಥವನ್ನು ಬಿಟ್ಟುಕೊಡುತ್ತವೆ. ಒಡೆಯರರು ಭಕ್ತರ ಮನೆಗೆ ಮಕ್ಕಳ ನಾಮಕರಣಕ್ಕೆ ಹೋಗುತ್ತಾರೆ. ಆಗ ಬರುವ ಹೇಳಿಕೆ ಹೀಗಿದೆ.

ಕೇಳಿರಿಲೇ ಕೇಳಿರೀ ಈ ಕಡೆಬಾರ
ತೊಟ್ಟ ಬಲಕ ಬಾರೊ ಪುತ್ರನ ಸ್ವಾದರ ಮಾವ
ಪುತ್ರನ್ ಹೆಸರು ಕರಿಯಬಾರೊ ಜೋ ಜೋ ಎನ್ನಿರಿಲೇ
ಅಂದಾಳೆ ಗೋಪಿ ಜೋ ಜೋ ಎನ್ನಿರಿಲೇ[೧೮೬]

ಈ ಹೇಳಿಕೆಯನ್ನು ಹೇಳುವಾಗ ಒಡೆಯರರು ಧ್ವನಿಯನ್ನು ಕ್ರಮವಾಗಿ ಇಳಿಸುತ್ತಾ ಅನುದಾತ್ತ ಶ್ರುತಿಯನ್ನು ನಿರ್ಮಿಸಲಾಗಿದೆ.

ಏ ತಂಗಿ ಈ ಕಡೆ ಬಾ ಹಿಡಿ ಭಂಡಾರ
ತೊಟ್ಲ ಬಲಕ ಬಾರೊ ಸ್ವಾದರ ಮಾವ
ಮಾಳಿಂಗನೆಂದು ಕರೆದಿದ್ದ ನಮ್ಮ ಜೋ ಜೋ ಎನ್ನಿರಿಲೆ
ಅಂದಾಳೆ ಮಾಳಿಂಗ ಜೋ ಜೋ ಎನ್ನಿರಿಲೆ[೧೮೭]

ಹೇಳಿಕೆಗಳಲ್ಲಿ ಚಲನಶೀಲತೆ ಇರುವುದರಿಂದ ಪುನರಾವರ್ತನೆ ಅನಿವಾರ್ಯವಾಗುತ್ತದೆ. ಅದು ಕಾವ್ಯ ಸೌಂದರ್ಯವನ್ನು ಹೆಚ್ಚಿಸುತ್ತದೆಂಬುದನ್ನು ಗಮನಿಸಬೇಕು.

ಹೇಳಿಕೆಗಳ ವಿಶಿಷ್ಟ ಲಕ್ಷಣವೆಂದರೆ ಗ್ರಾಮೀಣ ಪರಿಸರದ ಬದುಕಿನ ವಾಸ್ತವವು ಸಹಜವಾಗಿ ನಿರೂಪಿತವಾದುದು. 'ತಾಯಿಯಾಗದ ಹೆಣ್ಣು ಹಣ್ಣೇ? ಎಂಬ ಉದ್ಗಾರವು ಹಳ್ಳಿಗಳಲ್ಲಿ ಮಾತುಮಾತಿಗೆ ಬರುವುದುಂಟು. ಬಂಜೆಯರಿಗೆ ಸಮುದಾಯದಲ್ಲಿ ಯಾವುದೇ ಗೌರವ ಸ್ಥಾನವಿಲ್ಲ. ಬಂಜೆತನ ಒಂದು ಶಾಪ. ಅದು ಯಾರನ್ನು ಬಿಟ್ಟಿಲ್ಲ. ಈ ಹೇಳಿಕೆಗಳಲ್ಲಿ ಬಂಜೆತನದಿಂದ ಮುಕ್ತಿ ಪಡೆಯುವುದಕ್ಕಾಗಿ ಪುತ್ರ ಸಂತಾನ ಕರುಣಿಸೆಂದು ಶಿವಪಾರ್ವತಿಯರಲ್ಲಿ ಬೇಡಿಕೊಳ್ಳುತ್ತಾರೆ. ಆಗ ಹೇಳಿಕೆ ನಿರರ್ಗಳವಾಗಿ ಸಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಧನ್ಯತೆ ಸಹಜವಾಗಿ ಹೊಮ್ಮುತ್ತ ಬಂದಿದೆ.

ಸಂಜೆಲಿ. ಹುಟ್ಟಲಿ ಮುಂಜೆಲಿ ಸಾಯಲಿ
ಬಂಜೆಂಬ ಸೊಲ್ಲಬಿಡಿಸಯ್ಯ

ಈಗಲೇ ಹುಟ್ಟಲಿ ಈಗಲೆ ಸಾಯಲಿ

ಗೊಡ್ಡೆಂಬ ಸೊಲ್ಲಬಿಡಿಸಯ್ಯ[೧೮೮]

ಬಂಜೆತನದ ಮುಕ್ತಿಗಾಗಿ ಮಕ್ಕಳಾಗಲೆಂದು ಬೀರಪ್ಪನಿಗೆ ಭಕ್ತರು ಸೆರಗೊಡ್ಡಿ ಬೇಡಿಕೊಳ್ಳುವರು. ಮುತ್ತೈದೆತನದ ಗೌರವ ಬರುವುದು, ಮಕ್ಕಳನ್ನು ಪಡೆಯುವುದರಿಂದ ಮಾತ್ರ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಸ್ತ್ರೀಸಂವೇದನೆಯ ಸೂಕ್ಷ್ಮತೆಯನ್ನೂ ಇಲ್ಲಿ ಗಮನಿಸಬಹುದು. ಕೂಸು ಹುಟ್ಟಿದ ನಂತರದ ಸನ್ನಿವೇಶಗಳಾದ ಬಾಣಂತಿಯ ಉಪಚಾರ, ಕೂಸನ್ನು ಎರೆಯುವುದು ಇಂತಹ ಸನ್ನಿವೇಶಗಳಲ್ಲಿ ಕರ್ನಾಟಕದ ಉತ್ತರ ಭಾಗದ ಗ್ರಮೀಣ ಪ್ರದೇಶ ಆಚರಣೆಗಳು ಉಂಡೆ ಉಂಡೆಯಾಗಿ ಕಾವ್ಯದಲ್ಲಿ ಬಂದಿವೆ.

ಕೇಳಿರಿಲೆ, ಕಂಬಳಿ ಹಾಸಲಿ ಕರಿಯಾನೆ, ಕಂಬಳಿ.

ಮುರಿದು ಗದ್ದಿಗೆ. ಮಾಡಿ

ಹೊತ್ತಿಗೆ ಗಂಟು ಇಡುತ್ತಾರೆ ಸುವ್ವೆ[೧೮೯]

ಒಡೆಯರರು ಹೊತ್ತಿಗೆ ಹೇಳುವ ಸನ್ನಿವೇಶ ಕರ್ನಾಟಕದ ಉತ್ತರ ಭಾಗದಲ್ಲಿರವಂತೆಯೇ ಕಾವ್ಯದಲ್ಲಿ ಯಥಾವತ್ತಾಗಿ ಚಿತ್ರಿತವಾಗಿದೆ. ಮಗುವಿಗೆ ಹೆಸರಿಡುವ ಕಾರ್ಯಕ್ರಮ ತುಂಬ ಮನೋಜ್ಞವಾಗಿ ಮೂಡಿಬಂದಿದೆ.

ಉಡಿಗಳ ತುಂಬುತಾ ಸಡಗರ ಆದಾವ

ಬಂದು ತೊಟ್ಲ ಹಗ್ಗ ಹಿಡಿದಾರಮ್ಮ[೧೯೦]

ಆರತಿ ಬೆಳಗುವಾಗ ಹೆಂಗಸರಿಗೆ ಗಂಡನ ಹೆಸರನ್ನು, ಗಂಡಸರಿಗೆ ಹೆಂಡತಿಯರ ಹೆಸರನ್ನು ಹೇಳಲು ಕೇಳುತ್ತಾರೆ.

ಕೇಳಿರಿ ಲೇ ಕೇಳಿರಿ ಹೋಗಿ ಈರೇಶನ ಸೆರಗಿಡದ ಕೇಳಿರೀ

ಹೇಳಿರಪ್ಪ ನಿಮ್ಮ ಸತಿಯೊಳ ಹೆಸರು ಕೇಳಿರಿ ಹಿಡಿ ಭಂಡಾರ[೧೯೧]

ಕೇಳ್ ಕೇಳ್ ಎನ್ನುವಾಗ ಧ್ವನಿಯನ್ನು ಒತ್ತು ಗೊಟ್ಟು ಉಚ್ಚರಿಸುವಾಗ ತಲೆದೂಗದಿರುವುದು ಹೇಗೆ? ಅದು ಉಂಟು ಮಾಡುವ ರಸಾನಂದ ಲಯದಲ್ಲಿಯೇ ವ್ಯಕ್ತವಾಗಿದೆ. ಒಡೆಯರರು ಹೇಳಿಕೆಗಳ ವೈವಿಧ್ಯಮಯವಾಗಿವೆ ಧಾರ್ಮಿಕ ಹೇಳಿಕೆಗಳಲ್ಲಿ ಬದುಕಿನ ಜೀವನ ಕ್ರಮ ಮುಖ್ಯವಾಗಿದೆ.

ಸಮುದಾಯದ ಜೀವನ ಮತ್ತು ಸಂಸ್ಕೃತಿ ಅರ್ಥ ಮಾಡಿಕೊಳ್ಳುವಲ್ಲಿ ಕುರುಬರ ಹೇಳಿಕೆಗಳು ಪ್ರಮುಖ ಪಾತ್ರವಹಿಸುತ್ತವೆ. ಹಳ್ಳಿಯ ಸಾಂಸ್ಕೃತಿಕ ಜೀವನ ಸದಸ್ಯರು ತನ್ನ ಹಳ್ಳಿಯ ಬಗ್ಗೆ ತೋರುವ ಪ್ರೀತಿ ಗೌರವಗಳು ಅವರನ್ನು ಸನ್ಮಾರ್ಗದತ್ತ ಕೊಂಡೊಯ್ಯಲು ಹೇಳಿಕೆಗಳ ಪಾತ್ರ ಹಿರಿದು. ಅವರು ಸದಸ್ಯರಿಗೆ ಒತ್ತು ಕೊಟ್ಟು ಹೇಳುತ್ತಾರೆ. ಒಡೆಯರರ ಮಾತುಗಳನ್ನು ಸದಸ್ಯರು ಚಾಚೂ ತಪ್ಪದೆ ಕೇಳುತ್ತಾರೆ.

ಕೇಳ್ರಪಾ ಕುಂತೋ/ ಹೇಳುವೆನೋ ನಿಂತು
ದೇವರ ಮಾತು/ ಈ ವರ್ಷ ಊರಾಗ
ಆಗಬಾರದು ಆಗತೆತಿ, ಕೇಳಬಾರದ ಕೇಳತತಿ
ದೈವ ಕುಂತಿರಿ ಶಿಸ್ತು[೧೯೨]

ಎಂದಾಗ ದೈವ ತದೇಕ ಚಿತ್ತದಿಂದ ಒಡೆಯರರ ಮಾತನ್ನು ಕೇಳುತ್ತಾರೆ. ಆಗ ಒಡೆಯರರು

ಮಗನ ಡೊಳ್ಳ ಹೊಡಿ
ಮಗನ ಡೊಳ್ಳ ಹೊಡಿ

ಎಂದಾಗ ಡೊಳ್ಳಿನ ತೀವ್ರತೆ ಹೆಚ್ಚಾದ ಪೂಜಾರಿಯ ಮೈಮೇಲೆ ದೇವರು ತುಂಬಿಕೊಳ್ಳುತ್ತದೆ. ಒಡೆಯರರು ದೀರ್ಘವಾಗಿ ಹೇಳುತ್ತಾರೆ.

ಮಕ್ಕಳಿರಾ ಭಂಡಾರ ಹಾರಿಸಿರೇ
ಬೀರಪ್ಪ ಏಳು ಸಮುದ್ರದಾಗ ಬಂದಾನ
ಮಿರಗಿ ಮಳಿ ಆಗತತಿ ರೆಂಟಿ ಕುಂಟಿ
ಸಜ್ಜ ಮಾಡಿರಿಲೇ ಊರಾಗ ಸುಖಕಾಲ
ಬಂದೈತಿ ಕುಂಬಿ ಮ್ಯಾಗ ನವಲ ಕುಂತೈತಿ
ಆಗುವುದು ಆಗತ್ತದೆ ಹಾಕರಿಲೇ ಡೊಳ್ಳು[೧೯೩]

ಎಂದಾಗ ಭಕ್ತರ ಮನಸ್ಸಿನಲ್ಲಿ ಹೊಸ ಚೈತನ್ಯ ಬರುತ್ತದೆ. 'ಕುಂಬಿಯ ಮೇಲೆ ನವಿಲು ಕುಳಿತಿದೆ' ಎಂದಾಗ ಅದು ಶುಭದ ಸಂಕೇತ. ಅಂತಹ ಹೇಳಿಕೆಗಳ ಬದುಕಿನ ಭಾಗವಾಗುತ್ತವೆ. ಅವುಗಳ ಬಗ್ಗೆ ಭಕ್ತರಲ್ಲಿ ಗೌರವ ಭಾವನೆ ಇರುತ್ತದೆ. ಕುಂಟಿ, ಕೂರಿಗಿ ತಯಾರು ಮಾಡಿರಿ ಎಂದಾಗ ಬದುಕಿನ ಬಗ್ಗೆ ಭರವಸೆ ಬರುತ್ತದೆ. ಗ್ರಾಮೀಣ ಪರಿಸರದ ಜನರ ರೀತಿ-ನೀತಿಗಳು ಅವುಗಳನ್ನು ಜನರು ಅನುಭವಿಸುವ ಭಾವನೆಗಳನ್ನು ಹೇಳಿಕೆಗಳು ಚನ್ನಾಗಿ ಚಿತ್ರಿಸುತ್ತವೆ. ಅಂತಹ ಹೇಳಿಕೆಗಳ ಹಿಂದೆ ಜೀವನವನ್ನು ಕಂಡುಂಡ ಜನಪದರ ಮನಸ್ಸಿನ ತಾತ್ವಿಕ ಚಿಂತನೆಯ ಸ್ವರೂಪವನ್ನು ಗುರುತಿಸಬಹುದಾಗಿದೆ.

ಮಕ್ಕಳಿರಾ ಗುಲ್ಲ ಮಾಡದೆ ನನ್ನ ಸೊಲ್ಲ ಕೇಳಿರಿ
ನಿಂತು ಹೇಳತೇನ ಕುಂತ ಕೇಳಿರಿ
ಉತ್ತರ ದಕ್ಕಿನ್ಯಾಗ ಮಂಡ ತಡಿತಾನ
ಆ ಮಂಡ ಅಂದರ ಊರಿನ ಕಂಟಕ[೧೯೪]

ಈ ಹೇಳಿಕೆಯನ್ನು ಧಾರ್ಮಿಕವಾಗಿ ಗಮನಿಸಿದಾಗ ಊರಿನಲ್ಲಿ ಕಂಟಕ (ತೊಂದರೆ) ಬರುತ್ತದೆ. ಅದನ್ನು ತಡೆಯಬೇಕಾದರೆ ದೈವೀಶಕ್ತಿಗೆ ನಡೆದುಕೊಳ್ಳಬೇಕು. ಎಂದು ಒಡೆಯರರು ಭಾವ ತನ್ಮಯತೆಯಿಮದ ಹೇಳುತ್ತಾರೆ.

ಎಲೇ ತಮ್ಮ ಅರಿಯದ ಅರ್ಥ ಕೇಳಿಲ್ಲ
ಅಗಾಧ ನಮಗೇನು ಆಗಿಲ್ಲ
ಕುರಿಗಳು ಧರಣಿಗೆ ಬಂದ ಮಜುಕುರ
ಈ ಭೂಮಿ ತಂಪ ಮಾಡಾಕ ಕುರಿಬಿಟ್ಟಾರ
ಹೊಲಕ್ಕ ತಿಳಿದುಕೊಂಡ ನಡೀರಿ[೧೯೫]

ಬದುಕಿನ ದ್ವಂದ್ವವನ್ನು, ಅಸ್ಪಷ್ಟತೆಯನ್ನು ಹೋಗಲಾಡಿಸಲು ಇಂತಹ ಹೇಳಿಕೆಗಳು ಹುಟ್ಟಿವೆ. ಅವುಗಳನ್ನು ವಿಶ್ಲೇಷಿಸಿದಾಗ ಧಾರ್ಮಿಕವಾಗಿ, ಸಾಮಾಜಿಕವಾಗಿ ಬದುಕಿನಲ್ಲಿ ಸಮಸ್ಯೆಗಳು ಇರುತ್ತವೆ. ಅವು ಅಗಾಧ ಅಲ್ಲ. ಅವುಗಳಿಗೆ ಪರಿಹಾರ ಇದ್ದೇ ಇದೆ. 'ಕುರಿಬಿಟ್ಟರ' ಎಂಬ ಮಾತು ಧ್ವನಿಪೂರ್ಣವಾಗಿದೆ. ಅಂದರೆ ಅದು ಮುಗ್ಧತೆಯ ಸಂಕೇತ

ಕುರಿಯ ಹಿಕ್ಕಿಯ ಕಟ್ಟಿ ಕಟ್ಟಿ ಅಷ್ಟ ಮಾರುತಿ
ಇಟ್ಟನು ವೀರ ಕುರಿಯ ಹಾಲ ಹಿಂಡಿ
ಬೀರಲಿಂಗಕ್ಕೆ ಎರಿರಲೇ
ಹಿಡಿ ಭಂಡಾರ[೧೯೬]

ಕುರಿಯ ಹಾಲು ಎಂದರೆ ಸಮುದಾಯಕ್ಕೆ ದಿವ್ಯ ಔಷಧ. ಕುರಿಯ ಹಾಲು ಕುಡಿದರೆ ಸಮುದಾಯದಲ್ಲಿ ತೊಂದರೆಗಳು, ಕಷ್ಟನಷ್ಟಗಳು ಬರುವುದಿಲ್ಲ. ಕುರಿ ಪೂಜೆ ಮಾಡಬೇಕೆಂದು ಒಡೆಯರರು ಹಲವು ಸಾರಿ ಒತ್ತಿ ಹೇಳುತ್ತಾರೆ. ಹೊಲಕ್ಕೆ ಕುರಿ ಮಲಗಿಸಿದಾಗ ಮಳೆಯಾಗಿ, ಹಳ್ಳಹರಿದು ಹಸಿರು ಬೆಳೆಯಾದಾಗ ರೈತರಿಗೆ ಸಂತಸವಾಗುತ್ತದೆ. ಸಮುದಾಯದ ಅಧ್ಯಯನಕ್ಕೆ ಇಂತಹ ಹೇಳಿಕೆಗಳು ಹೊಸ ಬಗೆಯಾಗಿ ಆಲೋಚನೆಗೆ ಹಚ್ಚುತ್ತವೆ.

ಹೇಳಿಕೆಗಳು ಜನರ ಭಾವೀ ಬದುಕಿಗೆ ಉಜ್ವಲ ಬೆಳಕನ್ನು ನೀಡುವ ದಾರಿ ದೀಪವಾಗಿವೆ ಎಂದು ತಿಳಿದವರೂ ಇಂದು ಇದ್ದಾರೆ. ಕಣಿ ವೈಯಕ್ತಿಕ ಸಮಸ್ಯೆಗೆ ಪರಿಹಾರ ಹೇಳಿದರೆ ಹೇಳಿಕೆಗಳು ವೈಯಕ್ತಿಕ ಸಮಸ್ಯೆಗಳ ಜೊತೆಗೆ ಸಾರ್ವತ್ರಿಕವಾದ ಅನಂತ ಕಾಲದ ಅಪಾರ ಸಮಸ್ಯೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡಿರುತ್ತವೆ. 'ಕರ್ಮ ಹೋಗಿ ಧರ್ಮ ಉಳಿಯಬೇಕು; ನೀತಿ ನೆಲೆಗೊಳ್ಳಬೇಕು' ಎಂದು ಸಾರುವುದೇ ಹೇಳಿಕೆಗಳ ಮುಖ್ಯ ಸಂದೇಶವಾಗಿದೆ. ಹೇಳಿಕೆಗಳು ಮನುಷ್ಯನನ್ನು ಸದಾ ಎಚ್ಚರಿಸುತ್ತವೆ.

ಹೇಳಿಕೆಗಳು ಧರ್ಮ ಪರಿಪಾಲನೆಯ ಜೊತೆಗೆ ಜನತೆಗೆ ಮುಂದೆ ಒದಗಬಹುದಾದ ಸುಖ-ಸಂತೋಷಗಳ, ಭಯ-ಭೀತಿಗಳ ಬಗ್ಗೆ ಜನರಲ್ಲಿ ಭಕ್ತಿಯನ್ನು ನೆಲೆವಿಲ್ಲಿರುವ ಕ್ರಿಯೆಯನ್ನು ಅನುಸರಿಸಿವೆ. ಅಂತೆಯೇ ಒಡೆಯರರು ಸಾಮಾನ್ಯ ಜನರ ಭಾಷೆ ಮತ್ತು ತರ್ಕವನ್ನು ಅಳವಡಿಸಿಕೊಂಡರು. ಈ ಮುಖಾಂತರ ಅವರು ಜನತೆಯ ಚಾರಿತ್ರ್ಯವನ್ನು ತಿದ್ದಲು ಎತ್ನಿಸಿದರು. ಅವರ ಧಾರ್ಮಿಕ ಹೇಳಿಕೆಗಳ ಸಂದೇಶವೂ ಅದೇ ಆಗಿದೆ. ಅವು ಜನಜೀವನದ ಉಸಿರಾಗಿ ಜನರ ಆಶಾಕಿರಣವಾಗಿ ಇಂದಿಗೂ ಬಾಳ ಬೆಳಗುತ್ತವೆ. ಜನರ ಮೇಲೆ ಅಗಾಧ ಪರಿಣಾಮ ಬೀರುತ್ತಲೇ ಇವೆ.

**೪.೩. ಮನಃಶಾಸ್ತ್ರೀಯ ನೆಲೆ :**

ಸಾಮಾನ್ಯವಾಗಿ ಮನೋವಿಜ್ಞಾನ ಎಂದರೆ ವರ್ತನೆಯ ಅಧ್ಯಯನ. ಮನಸ್ಸು ಎಂದರೇನು? ಎಂಬುದನ್ನು ವಿವರಿಸುವುದು ಅಷ್ಟೇ ಕಷ್ಟದ ಕೆಲಸ. ಅದು ಹೊಸದಾದ ವಿಷಯವಾದ ಮನಃ ಶಾಸ್ತ್ರದಲ್ಲಿ ಸ್ಮರಣೆ, ಮರೆವು, ಆಲೋಚನೆ, ವಿವೇಚನೆ ತೀರ್ಮಾನ, ತರ್ಕ ಮುಂತಾದ ವಿಷಯಗಳು ಸಮಾವೇಶಗೊಳ್ಳುತ್ತವೆ. ಮನೋವಿಜ್ಞಾನವು ಪ್ರಜ್ಞೆಯನ್ನು ಕುರಿತ ಅಧ್ಯಯನವಾಗಿದೆ, ಜೊತೆಗೆ ಮನೋವಿಜ್ಞಾನದ ಇತ್ತೀಚಿನ ಬೆಳವಣಿಗೆಯ ಅಂದರೆ ವರ್ತನೆಯ ಜಾಗೃತ ಪ್ರಜ್ಞೆ, ಅದನ್ನು ಕುರಿತು ವೈಚಾರಿಕವಾಗಿ ಅಧ್ಯಯನ ಮಾಡುವುದಾಗಿದೆ.

ಮನೋವಿಜ್ಞಾನವು ವರ್ತನೆಯ ವಿಜ್ಞಾನವಾಗಿದ್ದು ಅದರ ಮುಖ್ಯಗುರಿ ಮನುಷ್ಯನ ಸ್ವಭಾವವನ್ನು ಕುರಿತು ಮನುಷ್ಯ ಸಮುದಾಯದಲ್ಲಿ ಹೇಗೆ ವರ್ತಿಸುತ್ತಾನೆ ಎಂಬುದನ್ನು ತಿಳಿಸುವ ಶಾಸ್ತ್ರವಾಗಿದೆ. ಮನುಷ್ಯನ ವಿವಿಧ ದೈಹಿಕ ಮತ್ತು ಮಾನಸಿಕ ಚಟುವಟಿಕೆಗಳು ಅವನು ಆಡುವ ಭಾಷೆಯ ಮೂಲಕ ವ್ಯಕ್ತವಾಗುತ್ತದೆ. ಈ ವಿಚಾರಗಳನ್ನು ವೈಜ್ಞಾನಿಕವಾಗಿಯೂ ಪ್ರಾಯೋಗಿಕವಾಗಿಯೂ ಅಭ್ಯಾಸ ಮಾಡುವುದಾಗಿದೆ. ಇದರಿಂದ ಮನೋವಿಜ್ಞಾನವು ಸಮಾಜಶಾಸ್ತ್ರ , ಭಾಷಾಶಾಸ್ತ್ರ, ಮಾನವ ಶಾಸ್ತ್ರ ಇವುಗಳಲ್ಲಿರುವ ಸಹ ಸಂಬಂಧವು ತಿಳಿದು ಬರುತ್ತದೆ. ಸಮುದಾಯದ ಸದಸ್ಯರ ವಿಚಾರ, ಅಭಿವ್ಯಕ್ತಿ, ಗ್ರಹಣಶಕ್ತಿ, ಸ್ಮರಣಶಕ್ತಿ, ಆಲೋಚನಾ ಶಕ್ತಿ, ಬುದ್ಧಿ ಶಕ್ತಿ ಮುಂತಾದವು ಅವನ ವರ್ತನೆಯಲ್ಲಿ ಅಭಿವ್ಯಕ್ತವಾಗುತ್ತವೆ. ಸಮುದಾಯದ ಸದಸ್ಯರು ಸಮಾಜದಲ್ಲಿ ಬದುಕುವಾಗ ಒಂದಿಲ್ಲಾ ಒಂದು ಸಂಗತಿಯನ್ನು ಕಲಿಯುತ್ತಾ ಇರುತ್ತಾರೆ ಎಂಬುದು ಮುಖ್ಯವಾದ ಸಂಗತಿಯಾಗಿದೆ.

ಮನೋವಿಜ್ಞಾನವು ಸಮುದಾಯದ ಅಧ್ಯಯನದಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಮನೋವೈಜ್ಞಾನಿಕ ತತ್ವಗಳನ್ನು ಆಧರಿಸಿಯೇ ಸಮಾಜಶಾಸ್ತ್ರದ, ಭಾಷಾವಿಜ್ಞಾನದ ವಿಧಾನಗಳು ರೂಪಗೊಳ್ಳುತ್ತವೆ. ಸಮುದಾಯದ ಸದಸ್ಯರ ವರ್ತನೆಯನ್ನು ವಸ್ತುನಿಷ್ಠವಾಗಿ ಗಮನಿಸಲು ಅವರಲ್ಲಿ ಮಾನಸಿಕ ಕಾಯಿಲೆಗಳಿದ್ದರೆ ಅವುಗಳನ್ನು ಅರ್ಥಮಾಡಿಕೊಂಡು ಪರಿಹರಿಸಲು ಈ ಕ್ಷೇತ್ರದ ಅಧ್ಯಯನವು ತುಂಬ ಉಪಯುಕ್ತವಾಗಿದೆ. ಭಾಷೆಯ ಮೂಲಕವೇ ಸಮಂಜಸ ವ್ಯಕ್ತಿತ್ವ

ನಿರ್ಣಯದಲ್ಲಿ ಭಾಷಾವಿಜ್ಞಾನಗಳಿಗೆ ಇದು ನೆರವು ನೀಡುತ್ತದೆ. ಅದರಂತೆ ವ್ಯಕ್ತಿಯ ಬೆಳವಣಿಗೆ ಕುರಿತು ಅವನ ವ್ಯಕ್ತಿತ್ವದಲ್ಲಿ ಅನುವಂಶೀಯತೆ ಮತ್ತು ಪರಿಸರದ ಪಾತ್ರವನ್ನು ಕುರಿತು ಚರ್ಚಿಸುತ್ತದೆ. ಸಮುದಾಯದ ಸದಸ್ಯರ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಯ ಹಂತಗಳು ಅವರ ನಿತ್ಯ ಬದುಕಿನ ಕಲಿಕೆಯ ಮೇಲೆ ಹಾಗೂ ನರಮಂಡಲ ವ್ಯವಸ್ಥೆಯ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎಂಬುದನ್ನು ತಿಳಿಯುವುದರಲ್ಲಿ ಸಮಾಜ ಶಾಸ್ತ್ರಜ್ಞರಿಗೆ ಸಹಾಯ ಮಾಡುತ್ತದೆ. ಸದಸ್ಯರು ತಮ್ಮನ್ನು ತಾವು ಅರಿತು ತಮ್ಮ ಜೀವನವನ್ನು ಸಮರ್ಥವಾಗಿ ರೂಪಿಸಿಕೊಳ್ಳಬೇಕಾದರೆ ಮನಃ ಶಾಸ್ತ್ರಜ್ಞರ ಸಲಹೆ ಬೇಕೇ ಬೇಕು ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ.

ಮನುಷ್ಯ ಸಮಾಜದಲ್ಲಿ ಎಲ್ಲರೊಂದಿಗೆ ಹೊಂದಿಕೊಂಡು ಬಾಳಲು ಅವರಿಗೆ ಅರಿಯದಂತೆ ಸಮುದಾಯದ ಹಿರಿಯರು ಸಲಹೆ ಸೂಚನೆ ಕೊಡುತ್ತಿರುತ್ತಾರೆ. ಅಂತಹ ಸಮಸ್ಯೆಗಳು ಬಂದಾಗ ಸದಸ್ಯರು ಊರಿನ ದೈವದ ಮೊರೆಹೋಗುತ್ತಾರೆ. ಆಗ ದೈವದ ಮುಂದೆ ತಮ್ಮ ಭಾವನೆಗಳನ್ನು ಹಂಚಿಕೊಳ್ಳುತ್ತಾರೆ. ಇಂತಹ ದೈವಗಳಲ್ಲಿ ಹಾಲುಮತ ದೈವಗಳಾದ ಬೀರಪ್ಪ, ಮಾಂಗರಾಯ, ಮಾಯವ್ವ ಪ್ರಮುಖರಾಗಿದ್ದಾರೆ. ಸಮುದಾಯದ ಎದರು ತಮ್ಮ ಮಾನಸಿಕ ತಲ್ಲಣಗಳನ್ನು ಆತಂಕಗಳನ್ನು, ಸುಖ ಸಂತೋಷಗಳನ್ನು ದುಖಃ ದುಮ್ಮಾನಗಳನ್ನು ದೈವದ ಮುಂದೆ ತೋಡಿಕೊಳ್ಳುತ್ತಾರೆ. ಆಗ ದೈವವು ಹೇಳಿದ ಮಾತುಗಳಿಗೆ ಅಂದರೆ ಹೇಳಿಕೆಗಳಿಗೆ ಸಾರ್ವತ್ರಿಕ ಮುದ್ರೆಯಾಗುತ್ತದೆ ಎಂಬುದು ಬಹಳ ಮುಖ್ಯವಾದುದಾಗಿದೆ.

ಗಂಡ ಹೆಂಡತಿ ಜಗಳಾಡಬ್ಯಾಡ್ರಿ
ಇದು ನಾಕ ದಿನದ ಸಂತಿ
ಹಗಲ ಆಡಿ ಬನ್ನಿ ಏಳು ಸಮುದ್ರ
ತಿರುಗಿ ಬನ್ನಿ ಮುಗಿಲ ಮುಟ್ಟಿ ಬನ್ನಿ
ಹತ್ತಬಾರದ ಗಿಡ ಹತ್ತಿ ಬನ್ನಿ
ಮಕ್ಕಳಿರ್‍ಯಾ ಹೊಂದಿಕೊಂಡ ಹೋಗರಲೇ[೧೯೭]

ಎಂದು ಹೇಳುವಾಗ ಅವರ ಅಂದರೆ ಒಡೆಯರರ ಮಾತಿನ ವೈಖರಿ, ಕೇಳುವಾಗ ಅಂದರೆ ಭಕ್ತರ ಮನಸ್ಸು ಪರಿವರ್ತನೆಯಾಗುತ್ತದೆ. ಬಾಹ್ಯ ಪ್ರಪಂಚದ ವಸ್ತುಗಳು ಅಥವಾ ವ್ಯಕ್ತಿಗಳು ಇಂದ್ರಿಯಗಳ ಸೀಮಾ ವ್ಯಾಪ್ತಿಗೆ ಬಂದರೆ ಅವು ನಮಗೆ ಅರಿಯದಂತೆಯೇ ಇಂದ್ರಿಯಾನುಭವ ಆಗುತ್ತದೆ. ಅಂದರೆ ಭಕ್ತರು ಭಗವಂತನಲ್ಲಿ ಲೀನವಾದಾಗ ಇಂದ್ರಿಯಗಳ ಸೀಮಿತ ವ್ಯಾಪ್ತಿಮೀರಿ ಭಕ್ತರಲ್ಲಿ ಒಡೆಯರರ ಬಾಯಿಂದ ಬರುವ ಹೇಳಿಕೆಗಳು ಹೇಳುವುದಾದರೆ ಇಂದ್ರಿಯಾನುಭವ ಎಂದು ಕರೆಯುತ್ತಾರೆ. ಇದು ಅನುಭವ ಮತ್ತು ಅರಿವನ್ನು ವಿಸ್ತರಿಸುವ ಕ್ರಿಯೆಯಾಗಿದೆ.

ಎರಿ ಹೊಲ್ದಾಗ
ಕಾಲ ಹಾದಿ ಐತಿ
ಕಂಚಿನ ಮಾಳಿಂಗ
ಕರಿ ಕಂಬಳಿ ಹಾಕೊಂಡ
ಸರಹೊತ್ತಿನ್ಯಾಗ ಹೊರಟಾನ
ಇದರ ಬಂದ್ರ
ಬರ ಹಿಂಗಸ್ತಾನ
ಹಿಡಿರಲೇ ಭಂಡಾರ[೧೯೮]

ಈ ಹೇಳಿಕೆಯ ಭಾವನೆಗಳನ್ನು ಗಮನಿಸಿದಾಗ ಒಡೆಯರರ ಅಥವಾ ಪೂಜಾರಿಗಳ ಅಗೋಚರವಾದ ಶಕ್ತಿ ಒಳಗಿನಿಂದಲೂ ಅಥವಾ ಹೊರಗಿನಿಂದಲೂ ಒಂದು ಪ್ರಚೋದಕವಾಗಿ ಬರುತ್ತದೆ. ಅದು ಕೇಳುಗರ ಅಂದರೆ ಭಕ್ತರನ್ನು ಜಾಗೃತರನ್ನಾಗಿ, ಕ್ರಿಯಾಶೀಲರನ್ನಾಗಿ ಮಾಡುತ್ತದೆ. ಒಡೆಯರರ ಹೇಳಿಕೆಗಳಿಂದ ಕೇಳುಗರ ವರ್ತನೆ ಪರಿವರ್ತನೆಯಾಗುತ್ತದೆ ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ.

ಎಲೇ ಗುಡ್ಡದಾಗಿನ ಹುಲಿ
ಗಡಬಡಸಾಕ ಹತ್ತೇತಿ
ನಾಳಿ ಇಲ್ಲ ಇವತ್ತ ಅಂತತಿ
ಬಗಲಾಗ ಹಿಡಕೊಂಡ ದಂಡಿಗಿ ಹಚ್ಚೇನಿ[೧೯೯]

ಹವಳ ಮುತ್ತ ತೂಕ ಮಾಡುದ್ರಾಗ
ಹವಳ ಒಂದು ಗುಂಜಿ ಹೆಚ್ಚಿತು
ಮುತ್ತ ಒಂದ ಗುಂಜಿ ಹೆಚ್ಚಿತು
ನಾಳಿ ಬೀರಪ್ಪನ ದರ್ಶನಕ ಬಾ[೨೦೦]

ಇಂತಹ ಹೇಳಿಕೆಗಳು ಮಾತಿನ ಸತ್ಯತೆಯನ್ನು ತಾಳಿ ಹೇಳುತ್ತವೆ. ಮಳೆಯ ನಕ್ಷತ್ರಗಳು ಅದರದೇ ಆದಂತಹ ತಲೆ ಹೊಂದಿರುತ್ತವೆ. ಮಳೆ ಪ್ರಾರಂಭವಾದಾಗ ಭಕ್ತರಿಗೆ ಸಂತೋಷವಾಗುತ್ತದೆ. ಆ ಸಂತೋಷವನ್ನು ದೈವದ ಮುಂದೆ ನಿವೇದಿಸಿಕೊಳ್ಳುತ್ತಾನೆ. ಆಗ ಒಡೆಯರರು ಅವನಿಗೆ ಭವಿಷ್ಯದ ಬಗ್ಗೆ ಚಿಂತನೆಯನ್ನು ಹೇಳುತ್ತಾ ಜಾನುವಾರಗಳ ಬಗ್ಗೆ ಕಾಳಜಿ ಇರಲಿ ಎಂಬ ಆಶಯವನ್ನೂ ಹೇಳುತ್ತಾರೆ. ಇಂತಹ ಹೇಳಿಕೆಗಳಲ್ಲಿ ಭಕ್ತರಲ್ಲಿ ಸಂವೇದನೆಯುಂಟಾಗುತ್ತದೆ. ಆಗ

ಪ್ರತಿಯೊಂದು ಜ್ಞಾನೇಂದ್ರಿಯವೂ ತನ್ನದೇ ಆದ ಕ್ರಿಯಾ ವಿಶೇಷತೆಯಿಂದ ಕೂಡಿದ್ದು ತನ್ನ ಮೂಲಕ ಹೊರ ಜಗತ್ತಿನ ವಾತಾವರಣ ಭಕ್ತರಿಗೆ ಮೂಡಿಸುತ್ತದೆ. ಹೀಗೆ ಬಾಹ್ಯಪ್ರಪಂಚದ ಸಂಗತಿಗಳು ಜ್ಞಾನೇಂದ್ರಿಯಗಳ ಮೂಲಕ ಮನಸ್ಸಿಗೆ ತಾಗಿ ವರ್ತನೆ ಪರಿವರ್ತನೆ ಹೊಂದುತ್ತದೆ. ಮಳೆ ಬರದೇ ಇದ್ದಾಗ ದೇವರಲ್ಲಿ ಪ್ರಾರ್ಥಿಸುತ್ತಾರೆ. "ಎಪ್ಪಾ ಹೋದ ವರ್ಷ ಬರಗಾಲ ಬಂತು ಈ ವರ್ಷವೂ ಬರಗಾಲ ನಾವು ಹೆಂಗ್ ಬದುಕಬೇಕು ಏನಾದರೊಂದು ಹಾದಿ ತೋರಿಸು ನಿನ್ನ ಜಾತ್ರಿ ಮಾಡಬೇಕಂದ್ರ ನಮಗ ಅನುಕೂಲ ಇಲ್ಲ ಉಡಿ ಒಡ್ಡಿ ಸೆರಗ ಒಡ್ಡಿ ಬೇಡಿಕೋತಿವಿ" ಎಂದು ಭಕ್ತರು ಅತ್ಯಂತ ದೈನ್ಯತೆಯಿಂದ ಒಡೆಯರರ ಮೂಲಕ ದೇವರಲ್ಲಿ ಬೇಡಿಕೊಳ್ಳುತ್ತಾರೆ. ಇದು ಒಂದು ರೀತಿಯ ಸಂವೇದನೆ. ಸಂವೇದನೆ ಒಂದು ದೈಹಿಕ ವ್ಯಾಪಾರ ಇಂದ್ರಿಯಗಳಿಂದ ಭೌತಿಕ ವಿವರಗಳನ್ನು ಪಡೆಯುವ ಕ್ರಿಯೆ ಭಕ್ತ ದೇವರಲ್ಲಿ ಅಂಗಲಾಚುವ ರೀತಿ ತನ್ನ ಭಾವನೆಗಳನ್ನು ಸಮರ್ಪಣಾ ಭಾವದಿಂದ ನಿವೇದಿಸುವ ಪರಿ ಆಗ ನಡೆಯುವ ಮಾನಸಿಕ ವ್ಯಾಪಾರ ಬಹಳ ಅರ್ಥಪೂರ್ಣವಾದುದು.

ಲೇ ಮಕ್ಕಳಿರ್ರ್ಯಾ ಅಂಜಬ್ಯಾಡರಲೇ
ಕಡಬಿ ಗುಡ್ಡದಾಗ ಮಂಜ ಕಾಣತತಿ
ಗುಡ್ಡದ ಹುಲಿ ಗಡಬಡಸಾಕ ಹತ್ತೈತಿ
ಮಾನವಗ ಸೊಕ್ಕ ಬರಬಾರದರಲೇ
ನಿಮ್ಮ ಸೊಕ್ಕ ಮುರಿಬೇಕಂತ ಮಳಿ ಬರಲಿಲ್ಲ
ಆಗುದಾಗೇತಿ ಚಿಂತಿ ಮಾಡಬ್ಯಾಡರ್ರೀ
ಈ ವರ್ಷ ಸಂಪನ್ನ ಆಕ್ಕತಿ
ಕಂಬಳಿ ಬೀಸರಲೇ ಹಿಡಿ ಭಂಡಾರ[೨೦೧]

ಇಲ್ಲಿ ಭರವಸೆಯ ಸಂಕೇತ ಇದೆ. ಇಲ್ಲಿಯೂ ಸಹಿತ ಭಕ್ತ ಮತ್ತು ಭಗವಂತನ ನಡುವೆ ಭಾಷೆಯ ಮೂಲಕ ವ್ಯಕ್ತವಾಗುತ್ತವೆ. ಸಂವೇದನೆಯ ಮೂಲಕ ಹೊರ ಹಾಕುವ ಸಂಗತಿಗಳು ವಿದ್ಯುತ್ ಪ್ರವಾಹದ ಜೊತೆಗೆ ಭಕ್ತರನ್ನು ತಲುಪುತ್ತದೆ. ಆಗ ಒಡೆಯರರ ಹೇಳಿಕೆ ಸಾವಿರಾರು ಜನ ಭಕ್ತರನ್ನು ಮುಟ್ಟಿರುತ್ತದೆ. ಅದುವೇ ಮಾನಸಿಕವಾಗಿ ಸುಧಾರಣೀಕರಣವಾಗುತ್ತದೆ.

ಸಂವೇದನೆಯು ಇಂದ್ರಿಯ ವ್ಯಾಪಾರವಾದರೆ ಪ್ರತ್ಯಕ್ಷಾನುಭವವು ಮಾನಸಿಕ ವ್ಯಾಪಾರ. ಒಡೆಯರರು ಹೇಳಿದಾಗ ಅದು ಭಕ್ತರ ಮನಸ್ಸಿನಲ್ಲಿ ಪ್ರವೇಶಿಸಿ ಒಂದು ಮಾನಸಿಕ ಕ್ರಿಯೆಯಾಗಿ ರೂಪಗೊಳ್ಳುತ್ತದೆ. ಒಂದು ಹೇಳಿಕೆಯು ಭಕ್ತರಲ್ಲಿ ಪ್ರವೇಶಿಸಿ ಸಂವೇದನೆಯಿಂದ ಆರಂಭಗೊಂಡು ಅವಧಾನದಿಂದ ಬಲಗೊಂಡು ಪ್ರತ್ಯಾಕ್ಷಾನುಭವದ ಮೂಲಕ ಅದು ಏನು? ಎಂಬುದು ತಿಳಿದುಬರುತ್ತದೆ. ಸಂವೇದನೆಗಳು ಬಾಹ್ಯ ಪ್ರಪಂಚದ ಸಂಗತಿಗಳನ್ನು ಮೆದುಳಿಗೆ ಒದಗಿಸುತ್ತವೆ.

ಪ್ರತ್ಯಾಕ್ಷಾನುಭವವು ತನ್ನದೇ ಆದ ಕ್ರಿಯಾ ವಿಶೇಷತೆಯಿಂದ ಕೂಡಿದ್ದು ಕೆಲವು ವಿಶಿಷ್ಟ ಲಕ್ಷಣಗಳನ್ನು ಹೊಂದಿದೆ. ಇದರಿಂದ ಭಕ್ತರ ಮನಸ್ಸಿನಲ್ಲಿ ಒಂದು ರೀತಿಯ ಮಾನಸಿಕ ಕ್ರಿಯೆ ನಡೆದು ಅವರನ್ನು ವಿಚಾರ ಮಾಡಲಿಕ್ಕೆ ಹಚ್ಚುತ್ತದೆ.

ಎಲೇ ಎತ್ತ ನೋಡಿದರತ್ತ
ಕರಿ ರಂಡಿ ಕಾಣತಾಳ
ದಿಲ್ಲಿ ಸಿಂಹಾಸನಕ್ಕ ಕರಿ ಝಂಡಾ ಹಚ್ಚತೀನಿ
ಜಾಡಿ ಪದರಾಗ ಐದ ಹನಿ ಕಟ್ಟತಿನಿ
ಸಿಕ್ಕವಗ ಸಿಕ್ಕಿತು, ಸಿಗದವಗ ಇಲ್ಲ
ನೆಲುವಂಗಿ ತಿರುವಿ ಒಕ್ಕಲಿಗ್ಯಾನ ಮಗನ
ಆನಂದದಿಂದ ಪಾಚಾಕ ಹಚ್ಚೇನಲೇ ಗಾಣಮಿಣಿ[೨೦೨]

ಇಂತಹ ಹೇಳಿಕೆಗಳಲ್ಲಿ ಸಂವೇದನೆಯ ಅಭಾವದಲ್ಲಿಯೂ ಪ್ರತ್ಯಾಕ್ಷಾನುಭವವು ಕಾರ್ಯನಿರ್ವಹಿಸುತ್ತದೆ. ಪ್ರತ್ಯಕ್ಷಾನುಭವ ಎಂದರೆ ಒಡೆಯರರು ಮತ್ತು ಭಕ್ತರು ಮುಖಾಮುಖಿಯಾದಾಗ ನಡೆಯುವ ಒಂದು ಬಗೆಯ ಭಾಷಾ ವ್ಯಾಪಾರ. ಭಕ್ತರು ಒಡೆಯರರ ನಡುವೆಯೇ ಸಮಕ್ಷಮವಾಗಿ ಅಂದರೆ ಪ್ರತ್ಯಕ್ಷವಾಗಿ ಈ ಭಾಷಿಕ ಕ್ರಿಯೆ, ಭಾಷಿಕ ಘಟನೆ ನಡೆಯುತ್ತದೆ. ಅದು ಇಂದ್ರಿಯಗಳನ್ನು ಸಂಪೂರ್ಣವಾಗಿ ಅವಲಂಬಿಸಿರುವುದರಿಂದ ಆ ಕ್ರಿಯೆಯಲ್ಲಿ ಪರಸ್ಪರ ನಂಬಿಕೆ ಬಲಗೊಳ್ಳುತ್ತದೆ ಎಂಬುದು ಗಮನಾರ್ಹ.

ಊರ ಅಗಸ್ಯಾಗ ಕ್ವಾಣ ಹೊಕ್ಕಿತು
ರಾಜಾ ಬಂದ ಅಗಸ್ಯಾಗ ರಾಜಕೀಯ ಕ್ರಾಂತಿ
ದಂಗೆ ಆಯಿತು.[೨೦೩]

ಈ ಹೇಳಿಕೆಯನ್ನು ವಿಶ್ಲೇಷಿಸಿದಾಗ ಒಂದು ಕಾಲಘಟ್ಟದ ರಾಜಕೀಯ ಬದಲಾವಣೆ ಅಥವಾ ರಾಜಕೀಯ ಸ್ಥಿತಂತರವನ್ನು ಗಮನಿಸಬಹುದು. ಇಂತಹ ಸಂವೇದನೆ ಮತ್ತು ಭಾವಾನುಭವದಿಂದ ಒಂದು ಘಟನೆಗೆ ಸಂಬಂಧಿಸಿರುವ ಇಂದ್ರಿಯಗಳ ಮೂಲಕ ಆ ಘಟನೆ ಸ್ಪಷ್ಟವಾಗುತ್ತದೆ. ಉದಾಹರಣೆ ದೂರದಲ್ಲಿ ಬರುತ್ತಿರುವ ವ್ಯಕ್ತಿಯ ಸಂವೇದನೆಗಳು ಅಸ್ಪಷ್ಟವಾಗಿದ್ದರೂ ಆ ವ್ಯಕ್ತಿಯನ್ನು ಗುರುತಿಸಲು ನಾವು ಶಕ್ಯರಾಗುತ್ತೇವೆ. ಮಾನಸಿಕವಾಗಿ ಮೂಡಿ ಬರುವಷ್ಟು ವಿವರಗಳೂ ಸ್ಪಷ್ಟತೆಯೂ ನಮಗೆ ಮೂಡಿಬರುತ್ತವೆ. ಆ ಒಂದು ಸಂವೇದನೆಗಳು ಅನುಭವ ಮತ್ತು ಉನ್ನತ ಮಾನಸಿಕ ಕ್ರಿಯೆಗಳ ಸಹಾಯದಿಂದ ಪರಿಶೀಲಿಸಬಹುದು.

ಪೂಜಾರಿ ಅಥವಾ ಒಡೆಯರರು ಮೈಮೇಲೆ ದೇವರ ಪ್ರವೇಶವಾಗುತ್ತದೆ. ಇಲ್ಲವೇ ಪೂಜಾರಿಯೇ (ಒಡೆಯರನೇ) ದೈವೀ ಶಕ್ತಿಯಲ್ಲಿ ತನ್ನನ್ನು ತಾನು ಒಪ್ಪಿಸಿಕೊಂಡಿರುತ್ತಾನೆ.

ಅಥವಾ ತಾದಾತ್ಮ್ಯ ಹೊಂದಿರುತ್ತಾನೆ. ಮನೋವೈಜ್ಞಾನಿಕವಾಗಿ ಇದನ್ನು ಗಮನಿಸಿದಾಗ ಅದಕ್ಕೆ ಆ ಸಂದರ್ಭದ, ಆ ಸನ್ನಿವೇಶದ ಪರಿಸರವೂ ಕಾರಣವಾಗುತ್ತದೆ. ಪಲ್ಲಕ್ಕಿ ಉತ್ಸವದಲ್ಲಾಗಲೀ, ದೇವರು ಗದ್ದುಗಿಗೊಳ್ಳುವ ಸಂದರ್ಭದಲ್ಲಾಗಲೀ, ಹೊನ್ನಾಟದ ಸಂದರ್ಭದಲ್ಲಾಗಲೀ ಆ ಒಂದು ಭಾಷಿಕ ಪರಿಸರದಲ್ಲಿ ಒಂದೇ ಸವನೆ ಡೊಳ್ಳಿನ ಬಡಿತ ಇರುತ್ತದೆ. ಆ ವಾತಾವರಣ ಭಾವನಾತ್ಮಕವಾಗಿರುತ್ತದೆ. ಒಮ್ಮಿಂದೊಮ್ಮೆಲೆ ಡೊಳ್ಳು ಹೊಡೆಯುವುದರಿಂದ, ಆ ನಾದ ದೇವರಸಿಯ ಮೈಮೇಲೆ ಬಂದಾಗ ಅವನಿಗೆ ದೇವರು ಬಂದಿದೆಯೇ ಎಂದು ಭಕ್ತರಲ್ಲಿ ಪ್ರಾಪ್ತವಾಗುತ್ತದೆ. ಆಗ ದೇವರಿಸಿ ಮಾನಸಿಕವಾಗಿ ಉನ್ಮಾದದಿಂದ ಪ್ರೇರಣೆಗೊಳ್ಳುತ್ತದೆ. ಆಗ ದೈವೀ ವಾತಾವರಣವುಂಟಾಗುತ್ತದೆ. ಇದು ಸಾಗಿ ಆ ಹೇಳಿಕೆಗಳ ಉಗಮಕ್ಕೆ ಕಾರಣವಾಗುತ್ತದೆ. ಆಗ ದೇವರಿಸಿ ಒಡೆಯರರು ದೈಹಿಕವಾಗಿ ನೆಲದ ಮೇಲಿದ್ದರೂ ಅವನ ಭಾವ ಹಾಲು ಮತ ದೈವಗಳಲ್ಲಿ ಸಮೀಕಣಗೊಂಡಿರುತ್ತದೆ. ದೈವೀ ಸ್ಫೂರ್ತಿಗೊಳಗಾಗುತ್ತಾನೆ. ಆಗ ಪೂಜಾರಿಯು/ ದೇವರ ಒಡೆಯರರು ತನಗಾದ ಅನುಭವವನ್ನು ಬೆಡಗಿನ ಮಾತುಗಳಲ್ಲಿ, ಆಡು ಮಾತುಗಳಲ್ಲಿ ಅರ್ಥಪೂರ್ಣವಾಗಿ ಮತ್ತು ಶಕ್ತಿಯುತವಾಗಿ ಹೇಳುತ್ತಾರೆ. ಅವುಗಳಿಗೆ ದೇವರ ಹೇಳಿಕೆ ಎಂದು ಕರೆಯುತ್ತಾರೆ.

ಈ ಒಂದು ಘಟನೆಯು ಒಡೆಯರರ ಇಂದ್ರಿಯದಿಂದ ಸಂವೇದನೆ ರೂಪುಗೊಳ್ಳುತ್ತದೆ. ಪ್ರತ್ಯಾಕ್ಷಾನುಭವ ಮತ್ತು ಸಂವೇದನೆಗಳಿಂದ ಭಾವಾನುವಾದ ರೂಪಗೊಳ್ಳುತ್ತದೆ. ಪ್ರತ್ಯಾಕ್ಷಾನುಭವವು ಸಂವೇದನೆಯ ಎಲ್ಲಾ ವಿವರಗಳನ್ನು ಅರ್ಥಗ್ರಹಣಕ್ಕಾಗಿ ಬಳಸಿಕೊಳ್ಳುವುದಿಲ್ಲ. ಒಂದು ಸಂಗತಿಗೆ ಸಂಬಂಧಿಸಿದಂತೆ ವಿವಿಧ ಇಂದ್ರೀಯಗಳಿಂದ ಬರುವ ಸಂವೇದನೆಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಆರಿಸಿಕೊಂಡು ಅವುಗಳಿಗೆ ಆಕರ್ಷಕವಾದ ರೂಪವನ್ನು ಪ್ರತ್ಯಾಕ್ಷಾನುಭವ ಕೊಡುತ್ತದೆ. ಉದಾಹರಣೆ ಹಬ್ಬ-ಹರಿದಿನ, ಅಮವಾಸ್ಯೆ-ಹುಣ್ಣಿಮೆ, ಜಾತ್ರೆ-ಉತ್ಸವ ಇಂತಹ ಸಾಂಸ್ಕೃತಿಕ ದಿನಗಳಲ್ಲಿ ಹೇಳಿಕೆಗಳಾದಾಗ ಭಕ್ತರು ತಮಗಾದ ಸಮಸ್ಯೆಯನ್ನು ಮಾತ್ರ ದೇವರಿಗೆ ಭಕ್ತಿ ಮತ್ತು ಶ್ರಧ್ಧೆಯಿಂದ ಬೇಡಿಕೊಳ್ಳುತ್ತಾರೆ.

ಎಪ್ಪಾ, ನಾಲ್ಕು ವರ್ಷ ಆತು ಮಗಗ ಮಕ್ಕಳಿಲ್ಲ
ನೀನು ನಮಗ ರಗಡ ಆಸ್ತಿ ಪಾಸ್ತಿ ಕೊಟ್ಟಿ
ಆದ್ರ ಸಂತಾನ ಭಾಗ್ಯಕೊಟ್ಟಿಲ್ಲ.
ನಿನಗ ಬೆಳ್ಳಿ ಕುದರಿ ಕೊಡತುನು
ನಮಗ ಮಕ್ಕಳ ಫಲಾ ಕೊಡು[೨೦೪]

ಎಂದು ದೇವರಿಗೆ ಪ್ರಾರ್ಥಿಸುತ್ತಾರೆ. ಆಗ ಒಡೆಯರರು

ಲೇ ಮಗನ ನಾಳಿ ಅಮಾಸಿಗೆ ಕವಲಕಟ್ಟು
ನನ್ನ ಹೂವಿನ ದಳ ಬಲಕ ಬೀಳತೈತಿ
ಮನಸನ್ಯಾಗಿಂದ ಆಗುದ ಅಕ್ಕತಿ
ಐದ ಅಮಾಸಿ ಗುಡಿಗೆ ಬಂದ ಹೋಗು
ಭಕ್ತೀಲೆ ಪಾಳಿ ಹಸನ ಮಾಡು
ನಿನ್ನ ಮಗಾ ಮತ್ತು ಸೊಸಿ
ನಾಳಿ ಜಾತ್ರೆಗೆ ಬಿಳಿಕಾಳ ಕೆಂಪಕಾಳ ತಗೊಂಡ
ನನ್ನ ಗುಡಿಗಿ ಬಂಡ ಹೋಗ್ಲಿ
ಆಗ ನೋಡ ಸಕ್ರಿ ತುಪ್ಪದಾಗ ಕೈ ತೋಳಿತಿನಿ
ಆಗ ಮಕ್ಕಳ ಫಲಾ ಅಕ್ಕಾವ ಚಂದಾಗಿ ಬದಕ ಮಾಡರಲೇ.[೨೦೫]

ಇನ್ನು ಕೆಲವು ಭಕ್ತರು ಮಳೆ ಬರಲಿಲ್ಲವೆಂದು ದೇವರಲ್ಲಿ ಹರಕೆ ಹೊರುತ್ತಾರೆ. ಎಪ್ಪಾ ನಾಲ್ಕು ವರ್ಷ ಆತು ಊರಾಗ ಮಳಿ ಬೆಳಿ ಇಲ್ಲ. ದನಾ ಕುರಿ ಆಡು ಇಂತಹ ಜಾನುವಾರಗಳನ್ನು ಸವದತ್ತಿ ಸಂತಿಗೆ ಹೋಗಿ ಮಾರಾಕ ಹಾಚ್ಚೀವಿ ಮಂದಿ ಗುಳ್ಳೇ ಹೊಂಟತಿ ದಯವಿಟ್ಟು ಮಳಿ ಬೆಳಿ ಕೊಡುವಂಗ ಮಾಡು ಎಂದು ಒಡೆಯರರ ಮೂಲಕ ದೇವರಲ್ಲಿ ಪ್ರಾರ್ಥಿಸುತ್ತಾರೆ.

ಎಲೇ ಮಕ್ಕಳ್ರ್ಯಾ
ಕಷ್ಟ ಬಂದಾಗ ಬೀರಪ್ಪ ನೆನಪ ಆಗತಾನ
ನಾಲ್ಕ ವರ್ಷ ಆತು ಊರಾಗ ಜಾತ್ರಿ ಮಾಡಿಲ್ಲ
ಕುಂಬಿ ಮ್ಯಾಗ ನವಲಕುಂತತಿ.
ಪಕ್ಕ ಇಲ್ಲದ ಹಾರ್ಯಾಡತತಿ
ಒಕ್ಕಲಿಗ್ಯಾ ಮಗನಿಗೆ ಎಷ್ಟು ಸುಧಾರಿಸಿ
ಹೇಳಿದ್ರೂ ಹಾದಿಗಿ ಬರ್ತಾ ಇಲ್ಲ
ಈಗ ನಿಮಗ ಅರು ಆಗೇತಿ
ತೊಗಲ ಹೋತು ತಗಲ ಬಂತು
ಎಚ್ಚರದಿಂದ ನಡಿರಿ ಮುಂದಿನ ಮಳಿಗಾಲಕ
ಮುಂಗಾರು ಮಳಿ ಗಿಂಡಿ ಗಾತ್ರದ ಮಳಿ ಬರ್ತತಿ

ಮಿರಗ ಮಿಂಚಲಿ. ಕೂರಗಿ ಸಾಗ ಮಾಡ್ರಿ

ಹಿಡಿ ಭಂಡಾರ[೨೦೬]

ಒಡೆಯರರ ಮೈಮೇಲೆ ದೇವರು ಬರುತ್ತದೆ ಎಂಬ ನಂಬಿಕೆ ಜನಪದದಲ್ಲಿ ಬಲವಾಗಿದೆ. ಹಳ್ಳಿಗಳಲ್ಲಿ ಉಗ್ರವಾದ ಕಾಯಿಲೆಯೋ , ಮಳೆ ಬೆಳೆ ಅಭಾವವೋ ಅಥವಾ ಊರಿನ ಸಾರ್ವತ್ರಿಕ ಸಮಸ್ಯೆಗಳೋ ಅಂದರೆ ಬಂಜೆತನ, ಬೆಳೆಹಾನಿ, ಪ್ರಕೃತಿ ವಿಕೋಪ, ಇತ್ಯಾದಿ ಬಂದಾಗ ಅದರ ಪರಿಹಾರಾರ್ಥ ಆ ಹಳ್ಳಿಯ ದೇವರ ಅಮಾನುಷ್ಯ ಶಕ್ತಿಯ ಸಹಾಯ ಪಡೆಯಲು ಪ್ರಯತ್ನಿಸುತ್ತಾರೆ. ಹುಣ್ಣಿಮೆ ಅಮವಾಸ್ಯೆ ದಿವಸ ಹಾಲುಮತ ದೈವಗಳ ಗುಡಿಗಳಿಗೆ ಹೋಗಿ ತಮ್ಮ ಸಮಸ್ಯೆಗಳನ್ನು ಸಂತೋಷಗಳನ್ನು ಹೇಳುತ್ತಾರೆ. ಆಗ ಪೂಜಾರಿಯ ಮೈಮೇಲೆ ದೇವರು ಬಂದು ಹೊರಗಿನಿಂದ ಮತ್ತು ದೇಹದ ಒಳಗಿನಿಂದ ಬರುವ ಅರ್ಥರಹಿತ ಸಂವೇದನೆಗಳನ್ನು ಹಿಂದಿನ ಅನುಭವ ಮತ್ತು ಮಾನಸಿಕ ಕ್ರಿಯೆಗಳ ಸಹಾಯದಿಂದ ಪೂಜಾರಿಯ ಮೈಮೇಲೆ ಬಂದು ವಿಶಿಷ್ಟವಾದ ದೈವೀಶಕ್ತಿ ಅನಾವರಣಗೊಳ್ಳುತ್ತದೆ. ಒಂದು ಸಂಗತಿಗೆ ಸಂಬಂಧಿಸಿದಂತೆ ಅದರಿಂದ ಬರುತ್ತಿರುವ ಸಂವೇದನೆಯು ಯಾವುದೇ ಜ್ಞಾನೇಂದ್ರಿಯಕ್ಕೆ ಸಂಬಂಧಿಸಿದರೂ ಉಳಿದ ಜ್ಞಾನೇಂದ್ರಿಯಗಳು ಕ್ರಿಯಾಶೀಲವಾಗುತ್ತವೆ. ಭಕ್ತರು ಒಡೆಯರರಿಗೆ ತಮ್ಮ ಸಮಸ್ಯೆಗಳನ್ನು ಕೇಳಿದಾಗ ಪೂಜಾರಿಯ ಮೈಮೇಲೆ ಒಂದು ರೀತಿಯ ಮಾನಸಿಕ ಕ್ರಿಯೆಯಾಗುತ್ತದೆ. ಆಗ ಅದನ್ನು ಸ್ವಲ್ಪ ಹೊತ್ತು ಮೌನವಾಗಿ ಡೋಲಿ ಹೊಡೆಯುತ್ತಾನೆ. ಭಕ್ತರು ಅವನ ಮೈಮೇಲೆ ಭಂಡಾರ ಎಸೆಯುತ್ತಾರೆ ಆಗ ಅವನ ಮೈಮೇಲೆ ದೇವರು ಬಂದಿದೆ ಎಂದರ್ಥ. ಅವನ ಬಾಯಿಂದ ಜನರ ಸಮಸ್ಯೆಗಳಿಗೆ ಪರಿಹಾರವಾಗಿ ದೇವರ ವಾಣಿಯಾದ ಹೇಳಿಕೆಗಳು ಪುಂಖಾನುಪುಂಕವಾಗಿ ಬರುತ್ತವೆ.ಅವನು ಹೇಳಿದರೆ ಸಾಕ್ಷತ್ ದೇವರೇ ಹೇಳಿದ ಹಾಗೆ. ಜನರು ಭಯ ಭಕ್ತಿಯಿಂದ ಶ್ರದ್ಧೆ ಗೌರವದಿಂದ ಆ ಹೇಳಿಕೆಗಳನ್ನು ಕೇಳುತ್ತಾರೆ. ಅವರಿಗೆ ತಮ್ಮ ಸಮಸ್ಯೆ ಅಥವಾ ಊರಿನ ಸಮಸ್ಯೆ ಪರಿಹಾರವಾಗುತ್ತವೆ ಎಂಬ ದೃಢಸಂಕಲ್ಪವಿರುತ್ತದೆ.

ಮಳೆ ಬರದೇ ಇದ್ದಾಗ ರೈತಾಪಿ ಕುಟುಂಬದ ಮಕ್ಕಳು ಊರಿನ ಹಿರಿಯರು ದೇವರಿಗೆ ನೀರು ಹಾಕುತ್ತಾರೆ. ಆಗ ಭಾವಾನುವಾದ ರೂಪುಗೊಂಡು ಮಳೆ ಬರುವಂತೆ ದೇವರಿಗೆ ಪ್ರಾರ್ಥಿಸುತ್ತಾರೆ. ಮಳೆರಾಯನ ಬೈಬ್ಯಾಡ್ರಿ, ಒಕ್ಕಲಿಗ್ಯಾನ ಮನೆಯಲ್ಲಿ ಹೊನ್ನ ಸೆರಗ ತುಂಬತೈತಿ ಎಂದು ಭಾವಿಸಿ ಮಳೆ ಬರುವುದಾಗಿ ಭರವಸೆ ತುಂಬುತ್ತಾರೆ. ಚಿಕ್ಕ ಮಕ್ಕಳು ಜೀರಪ್ಪನ ಗುಡಿ ಆವರಣದಲ್ಲಿ

ಮಳೆರಾಯ ಹುಯ್ಯಲಿ

ಕೆರೆಯ ರಾಯ ತುಂಬಲಿ

ಹನ್ನೆರಡು ಕೋಡಿ ಹರಿಯಲಿ

ಸಣ್ಣಕ್ಕಿ ಬಯಲು ಬೆಳೆಯಲಿ
ನಮ್ಮೂರು ತೇರ ಎಳೆಯಲಿ
ನಮ್ಮೂರು ಕೆರೆ ತುಂಬಲಿ[೨೦೭]

ವ್ಯಷ್ಠಿ ಮತ್ತು ಸಮಷ್ಠಿ ಜೀವನದ ಹಿತವನ್ನು ಬಯಸುವ ಇಂತಹ ಮಕ್ಕಳ ಹಾಡುಗಳು ಜನಪದ ಸಾಹಿತ್ಯದಲ್ಲಿ ಧಾರಾಳವಾಗಿ ಕಂಡುಬರುತ್ತವೆ. ಮಳೆ ಬೆಳೆಗಾಗಿ ಹಾಲುಮತ ದೈವಗಳಿಗೆ ಹರಕೆ ಹೊರುತ್ತಾರೆ. ಡೊಳ್ಳು ಬಾರಿಸುತ್ತಾರೆ. ಅನ್ನ ಸಂತರ್ಪಣೆ ಮಾಡುತ್ತಾರೆ. ದೇವರಿಗೆ ನೀರು ನೀಡಿ ವಾರ ಬಿಡುತ್ತಾರೆ. ಮುಂತಾದ ಆಚರಣೆಗಳನ್ನು ಆಯಾ ಪ್ರದೇಶದಲ್ಲಿ ಆಚರಿಸುವುದನ್ನು ಗಮನಿಸಿದ್ದೇವೆ. ಆಗ ಪೂಜಾರಿಯು ದೈವವನ್ನು ಉದ್ದೇಶಿಸಿ ಮಳೆಯನ್ನು ಕುರಿತ ಹೇಳಿಕೆಗಳು ಬರುತ್ತವೆ.

ಮಳಿ ಹೋತಂತ ಅಂಜಬ್ಯಾಡರಲೇ
ವಾರಾ ಬಿಟ್ಟ ನನ್ನ ಸೇವಾ ಮಾಡರಿ
ಒಕ್ಕಲಿಗ್ಯಾ ನಿನ್ನ ಸೆರಗದಾಗ ಈ ವರ್ಷ
ಹೊನ್ನ ಬರ್ತ್ತಿ.
ನೀ ಮಾಡಿದ ಸಾಲ ಹೊಕ್ಕತಿ
ಊರಾಗ ಮಳಿ ಬರ್ತ್ತಿ
ಕೆರಿ, ಭಾವಿ ತುಂಬತೈತಿ
ಮಕ್ಕಳಾ, ಹೆಣ್ಣಮಕ್ಕಳಾ ದನಾ ಕರ
ಸುಖದಿಂದ ಇರ್ತಾವ ಮುದಕರು
ತದಕರು ಸುಖದಿಂದ ಇರ್ತಾವ
ಗಂಡುಳ್ಳ ಬಾಲ್ಯಾರು ಬಿಕ್ಷಕ ಹೋಗುದಿಲ್ಲ
ಸ್ವಾತಿ ಮಳಿ, ಮಿರಗನ ಮಳಿ ಸಮೃದ್ದ
ಆಗತಾದ, ಹಳ್ಳಾ ಕೊಳ್ಳ ತುಂಬಿ ಹರಿತಾವ[೨೦೮]

ಎರಡು ಉದ್ಗಾರ ತೆಗೆದಾಗ ಭಕ್ತರ ಮನಸ್ಸಿನಲ್ಲಿ ಆಶಾಭಾವನೆ ಮೂಡುತ್ತದೆ. ಮಳೆ ಬಂದರೆ ಬದುಕು ಸುಖಮಯವಾಗುತ್ತದೆ ಎಂಬ ನಂಬಿಕೆ ಜನಪದದಲ್ಲಿದೆ. ದೇವರಿಸಿ ಹೇಳುವ ಮಳೆರಾಜನ ಬೈಯಬ್ಯಾಡ್ರಿ ಎನ್ನುವ ಮಾತು ಅರ್ಥಪೂರ್ಣವಾದುದು. ಮಳೆ ಬಂದರೆ ಮಾತ್ರ ಸುಖ ಸಮಾಜ ಕಟ್ಟಲು ಸಾಧ್ಯ ಎಂಬ ಭರವಸೆ ತಾಳಿರಿ ಎಂಬ ಮಾತು ಒಡೆಯರರ ಹೇಳಿಕೆ ಹಿಂದಿದೆ. ಮಳೆರಾಜ ಸರ್ವರ ಕಲ್ಯಾಣ ಮಾಡುತ್ತಾನೆ. ಒಡೆಯರರು ಮತ್ತು ಭಕ್ತರ ನಡುವೆ ನಡೆದ

ಸಂವೇದನೆಗಳನ್ನು ಸಂಘಟನೆ ಸಮಾನತೆ ಪ್ರಾಪ್ತವಾಗುತ್ತದೆ. ಒಂದು ಘಟನೆಯನ್ನು ಇಡಿಯಾಗಿ ನೋಡುವುದರ ಜೊತೆಗೆ ಬಿಡಿ ಬಿಡಿಯಾಗಿ ನೋಡಿದರೆ ಅದರ ಅರ್ಥವೈವಿಧ್ಯತೆ ತಿಳಿದು ಬರುತ್ತದೆ. ಅಂದರೆ ಹೇಳಿಕೆಗಳನ್ನು ವೈಯಕ್ತಿಕ ಸಮಸ್ಯೆಗಳನ್ನು ಬಿಡಿಯಾಗಿ ಇಡಿ ಗ್ರಾಮಕ್ಕೆ ಸಂಬಂಧಿಸಿದಂತೆ ಇಡಿಯಾಗಿ ನೋಡಿದಾಗ ಆಗ ನಡೆಯುವ ಮಾನಸಿಕ ವ್ಯಾಪಾರ ಬೇರೆಯಾಗುತ್ತದೆ. ಬಿಡಿಯಾಗಿ ನೋಡಿದಾಗ ಅಂದರೆ ಸಮಸ್ಯೆಗಳನ್ನು ವೈಯಕ್ತಿಕ ಮಟ್ಟದಲ್ಲಿ ಗಮನಿಸಿದಾಗ ಉದಾ: ಕೌಟುಂಬಿಕ ಕಲಹ, ಹೊಲಮನೆ ಜಗಳ ಇಂತಹ ಸಮಸ್ಯೆಗಳನ್ನು ದೇವರ ಮುಂದೆ ಹಂಚಿಕೊಳ್ಳುವಾಗ ಅಲ್ಲಿ ಏಕತಾನತೆ ಇರುತ್ತದೆ. ಅದು ಅವರಿಗೆ ಮಾತ್ರ "ಎಪ್ಪಾ ಮಕ್ಕಳಾ ಕೊಡು ಎನ್ನುವಾಗ" 'ಎಪ್ಪಾ ಸಣ್ಣ ಹುಡುಗಗ ಬುದ್ದಿ ಹೇಳ' ಅನ್ನುವಾಗ 'ಎಪ್ಪಾ ಹೊಂದಿಕಿ ಆಗವಲ್ತು ಬ್ಯಾರೆ ಮಾಡು' ಅನ್ನುವಾಗ ಇಂತಹ ವೈಯಕ್ತಿಕ ಸಮಸ್ಯೆಗಳನ್ನು ನಿವೇದಿಸುವಾಗ ಅದು ಅವರ ವೈಯಕ್ತಿಕಕ್ಕೆ ಸಂಬಂಧಿಸಿರುತ್ತದೆ. ಊರಲ್ಲಿ ಮಳಿ ಬೆಳಿ ಆಗದಿದ್ದಾಗ, ರೋಗ ರುಜಿನ ಬಂದಾಗ ಇಂತಹ ಘಟನೆಗಳನ್ನು ಇಡಿಯಾಗಿ ಕೇಳಿದಾಗ ಹೇಳಿಕೆಗಳ ಸ್ವರೂಪವೇ ಬೇರೆಯಾಗಿರುತ್ತದೆ. ಅವು ಸಾರ್ವತ್ರಿಕವಾಗಿರುತ್ತವೆ ಎಂಬುದು ಗಮನಾರ್ಹ.

ಬ್ಯಾಡ ಬ್ಯಾಡ ಏ ತಮ್ಮಾ
ಉರಿ ಕಿಚ್ಚು ಬಂದಾವು
ಹೋಗಬ್ಯಾಡ ತಡಕೊಂಡಷ್ಟು ಸುಖಾ
ಐತಿ ಚಿಂಚಲಿ ಮಾಯವ್ವ ಹೇಳ್ಯಾಳ[೨೦೯]

ಎಲೇ ! ಮಕ್ಕಳಿರ್‍ಯಾ
ಮುತ್ತಿನಂಥಾ ಮಾಯವ್ವ ಹೇಳ್ಯಾಳ
ಐದ ಅಮಸಿ ನನ್ನ ಗುಡಿಗಿ ತಪ್ಪದೇ
ಬರಬೇಕು ನನ್ನ ಅಂಗಳಾ ಸ್ವಚ್ಚ ಮಾಡಬೇಕು
ಬಂದ ದೆವ್ವ ಬಂದ ಹಾದೀಲೆ ಹೊಕ್ಕತಿ
ಏನ ಚಿಂತಿ ಮಾಡಬ್ಯಾಡರಿ
ಹಾಕರಲೇ ಡೊಳ್ಳ[೨೧೦]

ಲೋಕದಾಗ ಮಾನವಂತರೂ ಇಲ್ಲ ದಾನವಂತರೂ ಇಲ್ಲ
ಮಾನ ಹೋಗತಾ ಇದೆ ಅದಕ ಭೂಮಿ ಮ್ಯಾಲ
ಕರ್ಮ ಹೆಚ್ಚಾಗೇತಿ ತಿಳಿಕೊಂಡ ನಡಿರಲೇ[೨೧೧]

ಇತ್ಯಾದಿ ಹೇಳಿಕೆಗಳನ್ನು ಮನೋವೈಜ್ಞಾನಿಕವಾಗಿ ಗಮನಿಸಿದಾಗ ಅವುಗಳಲ್ಲಿಯ ಉಚ್ಚಾರಣೆಯ ಒತ್ತು ಧ್ವನಿಯ ಏರಿಳಿತ ತೀವ್ರತೆ ಇರುತ್ತದೆ. ಅಲ್ಲದೇ ಭಾಷಾ ಚಮತ್ಕಾರವೂ ಇರುತ್ತದೆ. ದೇವರನ್ನು ಹೂ ಕೇಳುವುದು ಒಂದು ಪದ್ಧತಿ, ದೇವರ ವಿಗ್ರಹಕ್ಕೆ ವಿಪುಲವಾಗಿ ಹೂವುಗಳನ್ನು ಮುಡಿಸಿರುತ್ತಾರೆ. ಪೂಜೆ ಆಗುತ್ತದೆ. ಆಗ ಭಕ್ತಾದಿಗಳು ದೇವರ ವಿಗ್ರಹವನ್ನು ಜಾತಕ ಪಕ್ಷಿಯಂತೆ ನೋಡುತ್ತಿರುತ್ತಾರೆ. ಹೂ ಬೀಳುವ ತನಕ ಜನರು ಕಾಯುತ್ತಾರೆ. ಹೂ ಎಡಗಡೆ ಬಿದ್ದರೆ ಕೇಳಿಕೊಂಡದ್ದು ಆಗುವುದಿಲ್ಲ. ಅದು ಅನಿಷ್ಟದ ಸಂಕೇತ. ಹೂ ಬಲಗಡೆ ಬಿದ್ದರೆ ಕೇಳಿದ ಕೆಲಸ ಆಗುತ್ತದೆ. ಇನ್ನೊಂದು ನೇರವಾದ ಮಾರ್ಗವಿದೆ. ದೇವರ ಅಭಿಪ್ರಾಯ ಅಥವಾ ವರವನ್ನು ಕೇಳಲು ದೇವಸ್ಥಾನದ ಮುಂದೆ ಕಿವಿ ಕಿವುಡಾಗುವಂತೆ ವಾದ್ಯಘೋಷಗಳು ಮೊಳಗುತ್ತಿದ್ದಂತೆಯೇ ಒಬ್ಬನು ಅಂದರೆ ಒಡೆಯರರು ಕೇಕೆ ಹಾಕುತ್ತಾರೆ ಮತ್ತು ಕೂಗುತ್ತಾರೆ. ಜನರು ತಮ್ಮ ಸಮಸ್ಯೆಗಳನ್ನು ದೇವರಲ್ಲಿ ಅರಿಕೆ ಮಾಡಿಕೊಂಡಾಗ ಆ ದೇವರು ಸೂಕ್ತ ರೀತಿಯಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿ ಆಶ್ವಾಸನೆಯನ್ನು, ಅಭಯ ಭರವಸೆಯನ್ನೋ ಕೊಡುತ್ತಾನೆ. ದೇವರು ಮೈಮೇಲೆ ಬಂದ ವ್ಯಕ್ತಿ ಇಡೀ ಸಮುದಾಯವನ್ನೇ ನಿಯಂತ್ರಿಸುತ್ತಾನೆ. ಅವನಿಗೆ ಸಮುದಾಯದಲ್ಲಿ ತುಂಬ ಗೌರವವಿರುತ್ತದೆ. ಏಕೆಂದರೆ ಅವನು ದೇವರ ಪ್ರತಿರೂಪ ತಾನೇ! ಹೇಳಿಕೆಗಳ ಹಿಂದಿರುವ ಮನೋವೃತ್ತಿ ಅದರ ಹಿಂದಿರುವ ತರ್ಕದ ವಿವೇಚನೆ ಚರ್ಚೆ ಆಗಬೇಕಾಗಿದೆ.

ಊರಿಗೆಲ್ಲಾ ಐತಿ ಬೀರಪ್ಪನ ಕಂಬಳಿ
ಎತ್ತಲಾರದ ಕೊಪ್ಪರಿಗಿ, ನಿಮ್ಮ ಮನಸ್ಸಿನ್ಯಾಗ
ಅಂದಂಗ ಆಗತಾವ ಮನ್ಯಾಗ ಗೆಜ್ಜಿ ಕುಣಿತಾವ[೨೧೨]

ಗಿಡಕ್ಕ ಹೂವಿಲ್ಲ, ಕಾಯಿಲ್ಲ, ಎಲಿ ಇಲ್ಲ
ಅಂತಾ ಗಿಡಕ ಏನ ಬೆಲೆ ಐತೋ
ಮನುಷ್ಯನ ಬಾಳೆ ಹಂಗ ಆಗಬಾರದು[೨೧೩]

ಮಗನ ನಿನಗ ಬಂದ ಸಂಕಟ ಪಾರ ಅಕ್ಕತಿ
ಮನಸಿನ್ಯಾಗ ಇದ್ದದ್ದ ಆಕ್ಕತಿ
ಇರಾವ ಒಬ್ಬ ಮಗಾ ಕುದರಿ ಹಂಗ
ಮೇಯಿಸರಿ ಬಹಳ ಬುದ್ದಿ ಹೇಳಬ್ಯಾಡ್ರಿ

ಅವಗ ಎಲ್ಲಾ ಗೊತ್ತತಿ ನನ್ನ ಮರೀಬ್ಯಾಡ್ರಿ
ಇದ ಬೀರಪ್ಪ ಹೇಳಿದ ಮಾತ[೨೧೪]

ದೆವ್ವ ಇಕಡೆ ಮೂಲಿ ಮ್ಯಾಲಿಂದ ಬಂದೈತಿ
ಮೂರ ಮೂಲಿ ಕೂಡುವಲ್ಲಿ ಅನ್ನ ಕಿಚಡಿ
ಇಟ್ಟ ಬರ್ರಿ ಬಂದ ದೆವ್ವ ಬಂದ ಹಾದೀಲೆ
ಹೊಕ್ಕತಿ ಏನ ವಿಚಾರ ಮಾಡಬ್ಯಾಡ್ರಿ
ಸುಮ್ಮನ ಹೋಗ್ರಿ[೨೧೫]

ಇಂತಹ ಹೇಳಿಕೆಗಳು ಕರ್ನಾಟಕ ತುಂಬೆಲ್ಲಾ ಪ್ರಚಲಿತದಲ್ಲಿವೆ. ಅವುಗಳ ಮೇಲೆ ಜನತೆಗೆ ನಂಬಿಕೆ ಇರುತ್ತದೆ. ಈ ತಲೆಮಾರು ಮಾತ್ರವಲ್ಲದೇ ತಲೆ ತಲಾಂತರಗಳಿಂದ ಬಂದ ವಿದ್ಯಾವಂತರು, ಅವಿದ್ಯಾವಂತರು, ನಾಗರಿಕರು, ಜನಪದರು ಮುಂತಾದ ಎಲ್ಲ ಸಾಮಾಜಿಕ ವರ್ಗಗಳಲ್ಲಿಯೂ ಬೇರೆ ಬೇರೆ ಮಟ್ಟದಲ್ಲಿ ಉಳಿದು ಬಂದಿವೆ. ಗ್ರಾಮೀಣ ಸಮುದಾಯದಲ್ಲಿ ಅಂತೂ ಹೇಳಿಕೆಗಳ ಪ್ರಭಾವ ಆಳವಾಗಿ ಬೇರು ಬಿಟ್ಟಿವೆ. ಇಂದಿನ ಆಧುನಿಕ ಕಾಲದಲ್ಲಿಯೂ ಸಹಿತ ಜನತೆಗೆ ಹೇಳಿಕೆಗಳ ಬಗ್ಗೆ ಅಪಾರವಾದ ಗೌರವ ಮತ್ತು ನಂಬಿಕೆ ಇದೆ.

ಒಡೆಯರರ ಮತ್ತು ಅವರು ಹೇಳುವ ಹೇಳಿಕೆಗಳ ಪ್ರಭಾವ ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಗೆ ಬಗೆ ಬಗೆಯ ಮಾದ್ಯಮ ಆಗಲು ಸಾಧ್ಯ. ಮಾತಿನ ಮೂಲಕ ಹಾಗೂ ಮನಸಿನ ಮೂಲಕ ಈ ಪ್ರಭಾವ ಉಂಟಾಗಬಹುದಾದರೂ ಕಾಲಾನುಕಾಲದಿಂದ ಜನ ಹೇಳಿಕೆಗಳಲ್ಲಿ ನಂಬಿಕೆ ಇಟ್ಟಿರುವುದು ಆಶ್ಚರ್ಯಪಡಬೇಕಾದ ಸಂಗತಿಯಲ್ಲ. ಸ್ವಲ್ಪ ವಿಚಾರ ಮಾಡಿ ಆಲೋಚನೆ ಮಾಡಿದಾಗ ಅದು ತೀರ ಸಹಜವಾದದು ಎಂಬ ನಂಬಿಕೆ ಬರುತ್ತದೆ. ಆದ್ದರಿಂದಲೇ ಅವನು ಹೇಳಿಕೆಯ ಬಗ್ಗೆ ವಿಶೇಷ ಗಮನ ಕೊಡುತ್ತಾರೆ. ದೇವರ ಹೇಳಿಕೆಗಳು ಕೇಳುವ ಜನರ ಮನಸ್ಸಿನ ಭಾವನೆಗಳನ್ನು ಕೆರಳಿಸುತ್ತವೆ. ಏಕಾಗ್ರತೆಗೊಳಿಸುತ್ತವೆ. ನಂಬಿರುತ್ತವೆ. ಹೇಳಿಕೆಗಳು ಜನಮನದಲ್ಲಿ ಬಲವಾಗಿ ಬೇರು ಬಿಟ್ಟಿವೆ.

ಈ ಸಲ ಮಿರಗನ ಮಳಿ ಸುಳ್ಳ
ರೋನಿ ಮಳಿ ಬರ್ತತಿ ಸ್ವಾತಿ ತಪ್ಪಸುದಿಲ್ಲ
ನಂಬಿ ಬಿತ್ತರಲೇ ಕಣದಾಗ ರಾಶಿ
ಹಬ್ಬತತಿ ಜಿಳಿಜ್ವಾಳಕ ಒಮ್ಮೆ
ಎಡಿ ಹೊಡದ್ರು ಪಡುಗಾಳಿ ಬರ್ತತಿ

ಮುತ್ತಿನಂತ ಜ್ವಾಳ ಮನ್ಯಾಗ

ಕಪ್ಪಿ ಮದುವಿ ಮಾಡಿ ಕತ್ತಿ ಕಾಲ ಹಿಡಿರಿ

ಮಳಿ ಬರ್ತದ ಎಕರೆ ಹೊಲದಾಗ

ಹನ್ನೆರಡು ಬೀಜಾ ಬಿತ್ತಬ್ಯಾಡರೀ[೨೧೬]

ಇಂತಹ ಹೇಳಿಕೆಗಳನ್ನು ಗಮನಿಸಿದಾಗ ಹೇಳಿಕೆಗಳು ಸಮಾಜದಲ್ಲಿ ನೀತಿ ಬೋಧನೆಯನ್ನು ಮಾಡುತ್ತವೆ. ರೈತರಿಗೆ ತಿಳುವಳಿಕೆಯನ್ನು, ಹಿತೋಪದೇಶವನ್ನು ಮಾಡುತ್ತವೆ ಎಂಬುದನ್ನು ಮನಃಶಾಸ್ತ್ರೀಯ ಹಿನ್ನೆಲೆಯಲ್ಲಿ ಗಮನಿಸಬೇಕಾಗಿದೆ. ಹೇಳಿಕೆಗಳನ್ನು ಹೇಳುವಾಗ ಒಡೆಯರರ ಮಾನಸಿಕ ವಿವರಗಳನ್ನು ಕಲೆ ಹಾಕುವಾಗ ಮೂರು ಅಂಶಗಳನ್ನು ಗಮನಿಸಬೇಕಾಗುತ್ತದೆ. ಮೊದಲನೆಯದಾಗಿ ಹೇಳಿಕೆಗಳ ಪರಿಣಾಮದ ಸ್ವರೂಪ, ಎರಡನೆಯದಾಗಿ ಹೇಳಿಕೆಗಳನ್ನು ಹೇಳುವ ಪೂಜಾರಿಗಳ ವ್ಯಕ್ತಿತ್ವದ ಸ್ವರೂಪ. ಮೂರನೆಯದಾಗಿ ಹೇಳಿಕೆಗಳು ಹೇಳುವ ಭಾಷಿಕ ಕ್ರಿಯೆಗಳ ಸ್ವರೂಪ. ಇವು ಮೂರು ಗಮನಿಸಬೇಕಾಗುವ ಸಂಗತಿಗಳು. ಹೇಳಿಕೆಗಳ ಪ್ರಭಾವ ಎರಡು ಬಗೆಯದಾಗಿರುತ್ತದೆ. ಒಂದು ನೈತಿಕ ಬಗೆ, ಇನ್ನೊಂದು ಸಹಜವಾದ ಬಗೆ. ಇಚ್ಛಾಶಕ್ತಿಯಿಂದ ಜನರ ಸಮಸ್ಯೆಗಳನ್ನು ಪರಿಹರಿಸುವುದೇ ಅವುಗಳ ಉದ್ದೇಶವಾಗಿದೆ. ಕೆಟ್ಟಕಣ್ಣು, ಅತೃಪ್ತಿ, ಅನಾವೃಷ್ಠಿ, ರೋಗ, ಪ್ರಕೃತಿ ವಿಕೋಪ ಇವುಗಳಿಂದ ಬದುಕು ಅಸ್ಥಿರವಾಗುತ್ತದೆ. ಸಮಸ್ಯೆಗಳು ಉಂಟಾಗುತ್ತವೆ. ಅವುಗಳ ಸ್ವರೂಪಕ್ಕೆ ದೈವಿಶಕ್ತಿ ಜನಪದರ ಜೀವನಕ್ಕೆ ಬಹುದೊಡ್ಡ ಆಸರೆಯಾಗುತ್ತದೆ. ಪರಿಹಾರಕ್ಕೆ ಪೂರಕವಾಗುತ್ತದೆ.

ಹೇಳಿಕೆಗಳ ಸಂಕೀರ್ಣ ಸ್ವರೂಪದ ಪರಿಹಾರಗಳೇ ಯಂತ್ರಗಳು (ತಾಯತಗಳು) ಅವು ಮೂರು ಬಗೆಯಾಗಿರುತ್ತವೆ. ಒಂದು ಬಟ್ಟೆ ಮೇಲೆ ಧರಿಸುವ ಯಂತ್ರಗಳು, ಎರಡು ಬಟ್ಟೆಯ ಒಳಗೆ ಧರಿಸಿದ ಯಂತ್ರಗಳು, ಮೂರು ಪವಿತ್ರವಾದ ಗ್ರಂಥಗಳ ಮಾತುಗಳನ್ನು ಬರೆದಿರುವ ಯಂತ್ರಗಳು. ಹೀಗೆ ಬಗೆ ಬಗೆಯ ಯಂತ್ರಗಳನ್ನು ಮಂತ್ರಗಳನ್ನು ಸಹ ಸಮಸ್ಯೆಗಳ ಪರಿಹಾರಕ್ಕೆ ಒಡೆಯರರು ಉಚ್ಚರಿಸುತ್ತಾರೆ. ಆಗ ಅವರ ಮಾತಿನಲ್ಲಿ ಒತ್ತು, ಗಂಭೀರತೆ ಹೆಚ್ಚಿರುತ್ತದೆ. ಆ ಸಂದರ್ಭದಲ್ಲಿ ಭಕ್ತರು ಭಂಡಾರ ತೂರುತ್ತಾರೆ.

ಎಲೇ! ಮುದುಕ

ಎಲೇ! ಮಗನ

ದೂರ ನಿಂತ ಕೇಳಬ್ಯಾಡರಲೇ

ಮುಂದಕ ಬಂದ ಕೇಳ್ರಿ

ತುದಿಗೈ ಹಿಡಿಬ್ಯಾಡ್ರಿ

ಮುಂಗೈ ಹಿಡಿರಿ
ಸಮುದ್ರಕ ಜೋಡ ಯಾತಾಳ ಹೂಡೂದ್ರಾಗ
ಒಂದ ಕೂರಗಿ ಕಸರ ಬಂತು
ಎತಗೋಳಿಗೆ ಈ ವರ್ಷ
ಹಸರ ಹುಲ್ಲ ಬರತ್ತತಿ
ಅಂದ್ರ ಮಳಿ ಬೆಳಿ ಸಂಪೂರ್ಣ ಅಕ್ಕತಿ
ಹಿಂಗಾರಿ ದೇಶಕ ಹಿಂಗಾರಿ
ಮುಂಗಾರಿ ದೇಶಕ ಮುಂಗಾರಿ
ಯರಗಟ್ಟಿ ಮ್ಯಾಲ ಗಾಳಿ ಕುಂತ
ಹೊಳ್ಯತಿ ಲೋಕಾಪೂರದಾಗ
ಬೆಂಕಿ ಬಿದ್ದತಿ ಬೆಂಕಿ ಬಿರುಗಾಳಿ
ನಮ್ಮ ಬಿರಪ್ಪಾ ಆರಿಸ್ತಾನ
ಕಂಬಳಿ ಬೀಸರಲೇ
ಹಿಡಿ ಭಂಡಾರ[೨೧೭]

ಸಮಸ್ಯೆಗಳ ಪರಿಹಾರಕ್ಕಾಗಿ ಹೇಳಿಕೆಗಳಲ್ಲಿ ಬಳಕೆಯಾಗುವ ವಸ್ತುಗಳಲ್ಲಿ ಉಗುಳು, ಉಪ್ಪು, ಭಂಡಾರ, ಕಂಬಳಿ ಇವು ಪ್ರಮುಖ ಪಾತ್ರವಹಿಸುತ್ತವೆ. ತಾಮ್ರ, ಕಬ್ಬಿಣ ಮೊದಲಾದ ಲೋಹಗಳು ಅದೇ ಪ್ರಯೋಜನಕ್ಕೆ ಬರುತ್ತವೆ. ಕೆಂಪು, ಹಳದಿ, ಕಪ್ಪು ಬಣ್ಣಗಳು ಸಹ ಸಮಸ್ಯೆಗಳ ಪರಿಹಾರಕ್ಕೆ ಹೆಚ್ಚು ಉಪಯುಕ್ತವಾಗುತ್ತವೆ. ಒಟ್ಟಾರೆ ಹೇಳಿಕೆಗಳಲ್ಲಿ ಸಮಸ್ಯೆಗಳಿಗೆ ಪರಿಹಾರಗಳು ಅನೇಕ ಸಂಖ್ಯೆಯಲ್ಲಿವೆ. ಮಕ್ಕಳಿಗೆ ದೃಷ್ಟಿ ದೋಷವಾದರೆ ಉರಿಯುತ್ತಿರುವ ಹಂಚಿ ಕಡ್ಡಿಗಳನ್ನು ನಿವಾಳಿಸಿ ಅದರ ಕಪ್ಪನ್ನು ಮಕ್ಕಳ ಹಣೆಗೆ ಇಡುತ್ತಾರೆ. ಉಪ್ಪು ಮತ್ತು ಮೆಣಶಿನಕಾಯಿಗಳನ್ನು ನಿವಳಿಸಿ ಒಲೆಗೆ ಹಾಕುತ್ತಾರೆ. ಸಕ್ಕರೆಯನ್ನು ಒಡೆಯರರಿಂದ ಮಂತ್ರಿಸಿ ಮಕ್ಕಳಿಗೆ ತಿನ್ನಲು ಹೇಳುತ್ತಾರೆ. ಕೆಟ್ಟ ಕಣ್ಣುಗಳಿದ್ದವರು ಹೋದ ಕಡೆ ಕರಿ ಕಂಬಳಿಯ ಕರಿಯನ್ನು ಕಟ್ಟುತ್ತಾರೆ. ಎಡುವಿದ ಕಲ್ಲಿಗೆ ಮೂರು ಸಲ ಉಗುಳಲು ಹೇಳುತ್ತಾರೆ. ಇಂತಹ ಪರಿಹಾರಗಳು ಹೇಳಿಕೆಗಳಲ್ಲಿರುತ್ತವೆ. ತಾತ್ಪರ್ಯ ಇಷ್ಟೇ ಹೇಳಿಕೆಗಳಲ್ಲಿ ಸಮುದಾಯವನ್ನು ನಿಯಂತ್ರಿಸುವ ಶಕ್ತಿ ಇರುತ್ತದೆ.

ಮೇಲೆ ಹೇಳಿದ ಹಾಗೆ ಹೇಳಿಕೆಗಳ ಬಗ್ಗೆ ಅಪಾರವಾದ ನಂಬಿಕೆ ಇದೆ. ಏಕೆಂದರೆ ಜನರ ಮನಸ್ಸಿನಲ್ಲಿ ಅದು ವೈಯಕ್ತಿಕವಾಗಿರಬಹುದು, ಸಾಮೂಹಿಕವಾಗಿರಬಹುದು, ಆಲೋಚನೆ ಮಾಡುವುದರ ಮೂಲಕ ತನ್ನ ಸುತ್ತಲೂ ಇರುವ ವ್ಯಕ್ತಿ ಅಥವಾ ಪ್ರಾಣಿಗಳು ತನಗೆ ಬೇಕಾದ ಪರಿಣಾಮವನ್ನುಂಟು

ಮಾಡಬೇಕೆಂಬುದು ಮುಖ್ಯವಾಗಿದೆ. ಮಾನವ ತನ್ನ ಇಂದ್ರಿಯಗಳ ಸಹಾಯವಿಲ್ಲದೆ ಕಾಲ ದೇಶವನ್ನು ಮೀರಿ ಭೌತಿಕ ಪ್ರಪಂಚದ ಘಟನೆಗಳನ್ನು ತಿಳಿಯಲು ಸಾಧ್ಯವಿಲ್ಲ. ಹಾಗೆಯೇ ಅತೀಂದ್ರಿಯ ಶಕ್ತಿಗಳ ಪ್ರಭಾವವಿಲ್ಲದೆ ಭೌತಿಕ ವಸ್ತುಗಳ ಮೇಲೆ ಹಿಡಿತ ಸಾಧಿಸಿ ಪ್ರಭಾವ ಬೀರಲು ಸಾಧ್ಯವಿಲ್ಲ. ಇದು ಎಷ್ಟು ಸರಿ ಎಷ್ಟು ತಪ್ಪು ಅಲ್ಲ. ಅದು ಬೇರೆ ವಿಷಯ ಆದರೆ ಜನ ಮತ್ತು ಪ್ರಕೃತಿಯನ್ನು ನಿಯಂತ್ರಿಸಲಿಕ್ಕೆ ದೇವವಾಣಿ ಹೇಳಿಕೆಗಳ ಮೇಲೆ ನಂಬಿಕೆ ಇರುತ್ತದೆ. ಜನರು ಆ ದೈವಿಶಕ್ತಿಯನ್ನು ಎಂದೂ ಉದಾಶೀನ ಮಾಡುವುದಿಲ್ಲ. ಆ ಚಲನಶೀಲ ಶಕ್ತಿಯ ಮೇಲೆ ಅವರಿಗೆ ನಂಬಿಕೆ ಇದೆ.

ದೇವರು ಮೈಮೇಲೆ ಬಂದಾಗ ಒಡೆಯರರಲ್ಲಿ ದೈವಿಶಕ್ತಿ ಹೊರಹೊಮ್ಮುತ್ತದೆ. ಅದಕ್ಕೆ 'ಮನಃಚಲನಶಕ್ತಿ' ಎಂದು ಕರೆಯುತ್ತಾರೆ. ಅವರ ಬಾಯಿಂದ ಬರುವ ಹೇಳಿಕೆಗಳು ವೈಯಕ್ತಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ವಾಸಿ ಮಾಡುತ್ತವೆ. ಇದು ಸಮಾಜ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಧರ್ಮದ ಮೇಲೆ ಮನಃಶಾಸ್ತ್ರದ ಪ್ರಭಾವ ಅಧಿಕವಾಗಿದೆ. ಮಾನವ ಕೇವಲ ಭೌತಿಕ ವಸ್ತು ಅಲ್ಲ. ಆತನಲ್ಲಿ ಅಭೌತಿಕವಾದ, ಆಧ್ಯಾತ್ಮಿಕವಾದ ವ್ಯಕ್ತಿತ್ವದ ಅಂಶವೊಂದು ದೇವರ ಬಗ್ಗೆ, ಪುನರ್ ಜನ್ಮದ ಬಗ್ಗೆ ಜನಪದರಿಗೆ ಗಾಢವಾದ ನಂಬಿಕೆ ಇದೆ. ಪ್ರಾರ್ಥನೆ ಮಾಡುವಾಗ ಪ್ರಾರ್ಥನೆಯ ಬಗ್ಗೆ ವ್ಯಕ್ತಿಗಳ ಮನಸ್ಸಿನಲ್ಲಿ ಧನಾತ್ಮಕ ಪರಿಣಾಮ ಇರುತ್ತದೆ. ಸಮಾಜದಲ್ಲಿ ವ್ಯಕ್ತಿಗಳು ಹಲವು ಸಂದರ್ಭದಲ್ಲಿ ಮಾನಸಿಕ ಅಸ್ತವ್ಯಸ್ತರಾದಾಗ ಜನಪದರು ಅಂತಹ ಘಟನೆಗಳಿಗೆ ಭೂತಪ್ರೇತಗಳಿಗೆ ಆರೋಪ ಮಾಡಿ, ದೇವರ ಹೇಳಿಕೆಗಳ ಮೊರೆಹೋಗುತ್ತಾರೆ. ಪರಾ ಮನೋವಿಜ್ಞಾನಗಳು ಈ ಘಟನೆಗಳನ್ನು ಅತೃಪ್ತ ವ್ಯಕ್ತಿ ಅತಿಯಾದ ಮಾನಸಿಕ ತೊಳಲಾಟಕ್ಕೆ ಒಳಗಾಗಿ ಜೀವನದಲ್ಲಿ ದಿಕ್ಕೆಟ್ಟು ನಿರಾಶೆಯಾಗಿ ವಿಚಿತ್ರ ಭಾವನೆಗಳು ಆತನಲ್ಲಿ ಬೆಳವಣಿಗೆ ಆಗುತ್ತವೆ. ಅಸಮಾಧಾನ ಅತಿಯಾದಾಗ ಸುತ್ತಮುತ್ತಲ ವ್ಯಕ್ತಿ ವಸ್ತುಗಳ ಮೇಲೆ ಕೆಟ್ಟ ಪರಿಣಾಮ ಬೀರುತ್ತವೆ. ಈ ಪರಿಣಾಮದಿಂದ ಪರಿಹಾರ ಹುಡುಕಲು ಜನಪದರು ದೇವರ ಹೇಳಿಕೆಗಳಿಗೆ ಮೊರೆಹೋಗುತ್ತಾರೆ. ಅವನೇ ಕಾಯುವವ ಎಂಬ ನಂಬಿಕೆ ಅವರಲ್ಲಿದೆ.

ಹೇಳಿಕೆಗಳ ಸಂದರ್ಭದಲ್ಲಿ ದೇವರಸಿಗಳ, ಮನಸ್ಸಿನ ತೀವ್ರವಾದ ತುಮುಲ ಆರಂಭವಾಗಿ ಎಳೆತ ಅಥವಾ ತುಯ್ತ ಹೆಚ್ಚಾದಾಗ ಅವರ ಮಾತಿನ ಶಕ್ತಿ ಬಿಡುಗಡೆಯಾಗುತ್ತದೆ. ಆಗ ಆತ ತನ್ನ ನಿಜ ಸ್ವರೂಪವನ್ನು ತೋರಿಸುತ್ತಾನೆ. ಹೇಳಿಕೆಗಳ ಮೂಲಕ ಮನಸ್ಸಿನ ಚಲನಶಕ್ತಿಗೆ ಜನರು ಗೌರವ ಕೊಡುತ್ತಾರೆ. ನಂಬುತ್ತಾರೆ. ಆ ಶಕ್ತಿ ಭಾಷೆಯ ಮೂಲಕ ಅಭಿವ್ಯಕ್ತವಾಗುತ್ತದೆ ಎಂಬುದು ಅರ್ಥಪೂರ್ಣವಾಗಿ ಕಾಣಿಸುತ್ತದೆ. ಆಗ ಸಮಸ್ಯೆಗಳು ಪರಿಹಾರವಾಗುತ್ತವೆ. ದೇವರು ರಕ್ಷಣೆ ಮಾಡಿದನು ಎಂದು ಜನರು ನಂಬುತ್ತಾರೆ.

ಹೇಳಿಕೆಗಳು ಮತ್ತು ಅವುಗಳ ಆಚರಣೆಗಳು ಮಾನವನ ಅಪ್ರಜ್ಞಾವಲಯದಲ್ಲಿ ಬೇರು ಬಿಟ್ಟಿರುವ ಅಂಶಗಳು ಇದು ಕೇವಲ ಗತಕಾಲಕ್ಕೆ ಸೀಮಿತವಾದುದಲ್ಲ. ಕೇವಲ ಅವಿದ್ಯಾವಂತರಿಗೆ

ಮಾತ್ರ ಸೀಮಿತವಾದುದಲ್ಲ. ಇವು ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಸೇರಿ ಹೋಗಿರುವ ಅಂಶ. ಕೆಲವು ಸಂದರ್ಭಗಳಲ್ಲಿ ಅಪ್ರಜ್ಞಾವಲಯಕ್ಕೆ ಬರುವ ಅಂಶ. ಅಗೋಚರ ಶಕ್ತಿಗಳಿಗೆ ಮಾನವರು ಹೆದರುವುದು ಸಹಜವೇ. ಅವುಗಳ ಪರಿಣಾಮ ತನಗೆ ಉಂಟಾಗದಂತೆ ತಡೆಯಲು ದೇವರ ಹೇಳಿಕೆಗಳಿಗೆ ಮೊರೆಹೋಗುತ್ತಾರೆ. ಹೇಳಿಕೆಗಳಿಂದ ಮಾನವನಿಗೆ ಪ್ರಯೋಜನ ಆಗಬಹುದು ಆಗದಿರಬಹುದು ಆದರೆ ಬೇಡಿಕೆಗಳನ್ನು ಕೇಳಿದ ವ್ಯಕ್ತಿಗೆ ಸಮಾಧಾನವಂತೂ ದೊರೆಯುತ್ತದೆ. ಉರುಳುದು (ದೀಡ ನಮಸ್ಕಾರ) ಭಂಡಾರ ಹಚ್ಚಿಕೊಳ್ಳುವುದು. ನೀವಳಿಸುವುದು. ಆರತಿ ಮಾಡುವುದು, ತಾಯತ ಕಟ್ಟಿಸಿಕೊಳ್ಳುವುದು ಇವುಗಳ ಉದ್ದೇಶ ಹಾಗೂ ಪರಿಣಾಮ ಇದೆ ಎಂದು ಹೇಳಬಹುದು. ಇವು ವ್ಯಕ್ತಿಗೆ, ಸಮುದಾಯಕ್ಕೆ ಹೆಚ್ಚಿನ ಮನಸ್ಥೈರ್ಯವನ್ನು ತಂದುಕೊಡುತ್ತದೆ ಎಂಬುದು ಪರಾಮನೋವಿಜ್ಞಾನದ ಮನಸ್ ಚಲನ ಶಕ್ತಿಯ ಅಧ್ಯಯನದಿಂದ ಅರ್ಥಮಾಡಿಕೊಳ್ಳಬಹುದು.

ಹೇಳಿಕೆಗಳಲ್ಲಿ ಬದುಕಿನ ಹಲವು ಮುಖಗಳು ಚಿತ್ರಿತವಾಗುವುದರಿಂದ ಅವುಗಳಿಗೆ ಸಾರ್ವತ್ರಿಕ ಮುದ್ರೆ ಬಿದ್ದಿರುತ್ತದೆ. ಹಾಲುಮತದ ಸಾರವನ್ನು ಸುಲಭವಾಗಿ ಗಮನಿಸಬೇಕಾದರೆ ಹೇಳಿಕೆಗಳ ಭಾಷೆಯನ್ನು ಇಂದ್ರಿಯಾನುಭವ ಹಾಗೂ ಸಾಮಾಜಿಕ ಚೌಕಟ್ಟಿನಲ್ಲಿ ಅಭ್ಯಸಿಸಿದರೆ ಅದು ಸಾಮಾಜಿಕ ಮತ್ತು ಮನಃಶಾಸ್ತ್ರದ ಅಧ್ಯಯನವಾಗುತ್ತದೆ.

ಒಡೆಯರರ ಭಕ್ತ ಜೀವನ ಹಾಗೂ ಮಾನಸಿಕವಾದ ಸಾಮಾಜಿಕ ಜೀವನದ ಅಂಶಗಳು ಒಂದೇ ಮುಖವಾದ ಅನುಭವವನ್ನು ತೋರಿಸುತ್ತದೆ. ಅಂಧಾನುಕರಣೆ ಮತ್ತು ಢಾಂಬಿಕತೆಗಳನ್ನು ಖಂಡಿಸಿ ನಿರ್ಮಲವಾದ ಅಂತಃಕರಣದ ಮಾನವೀಯ ಭಾವನೆಗಳಿಗೆ ಸ್ಪಂದಿಸುವ ಅವರ ನೇರ ನುಡಿಗಳು ಸಾಮಾನ್ಯರಿಗೆ ಮಾರ್ಗದರ್ಶಕವಾಗಿದೆ. ಇದಕ್ಕಾಗಿ ಅವರು ಬಳಸಿರುವ ಹೇಳಿಕೆಗಳಲ್ಲಿರುವ ಪ್ರತಿಮೆಗಳು ಮತ್ತು ಪ್ರತೀಕಗಳು ಸಾಮಾಜಿಕ ಜನಜೀವನದ ದೈನಂದಿನ ಚಿತ್ರಗಳ ಮೂಲಕವೇ ಮನಮುಟ್ಟುವಂತೆ ತೀಕ್ಷ್ಣವಾಗಿ ಹೇಳಿದ್ದಾರೆ.

ಹಾಲ ಕಂದಲು
ತುಪ್ಪದ ಮಡಕೆ
ಹಾಲುಕರಗಿ ತುಪ್ಪಕ್ಕೆ ಕಮ್ಮನೆ
ಭಂಡಾರಕ ಬೋನ ಹಾಕಿರೋ
ನಮ್ಮ ಬೀರಪ್ಪ ಒಲಿತಾನ[೨೧೮]

ಕಂಬಳ್ಯಾಗ ಕನಕಾ ನಾದಿದಂಗ
ನಿಮ್ಮ ಬಾಳೆ ಆಗಬಾರದು

ಪರಮ ನಿರಂಜನ ಇಟ್ಟಪ್ಪನ ನೆನೆದರ
ತುಂಬಿದ ಹರವಿ ಹಾಲು ಹಾಕಿದಂತೆ[೨೧೯]

ಬೀರಪ್ಪನ ಮಾತು ಮಾತಾಡಾಕ ಕಹಿಯಾದರೂ
ಮನಸಿಗೆ ಸಿಹಿ ಬೇವ-ಬೆಲ್ಲ ಇದ್ದಂಗೋ
ತಿಳಿದ ನಡಿರಿ[೨೨೦]
ಅಗ್ಗ ಅಗ್ಗ್ಯಾವಂತ ಬಹಳ ಹಿಗ್ಗಬ್ಯಾಡರೀ
ಬಗ್ಗಿಸಿ ಗುದ್ದ್ಯಾರ ಸರಕಾರದವರ
ಜ್ವಾಕೀಲೆ ಬಾಳೆ ಮಾಡ್ರಿ[೨೨೧]

ಇಂತಹ ಹೇಳಿಕೆಗಳನ್ನು ಮನೋವೈಜ್ಞಾನಿಕವಾಗಿ ಗಮನಿಸಿದಾಗ ಮನಸ್ಸಿನ ಹೊಯ್ದಾಟವನ್ನು ಮನಸ್ಸು ತನ್ನ ಸಾಧನೆಯ ಮಾರ್ಗದಲ್ಲಿ ಭಾದಕವಾಗಿರುವುದನ್ನು ಒಡೆಯರರು ಖಂಡಿಸಿದ್ದಾರೆ. ಆತ್ಮ ವಿಮರ್ಶೆಯ ಹಾದಿಯಲ್ಲಿ ಮನಸ್ಸು ಕಬ್ಬಿನದಂತೆ ದೃಢವಾದ ಗುಣವುಳ್ಳದ್ದಾಗಿರಬೇಕು. ಮನಸ್ಸು ಕಳವಳ ಪಡಬಾರದು ಬಂದದ್ದನ್ನು ಅನುಭವಿಸಬೇಕು ಎಂಬ ಅರಿವು ಇಲ್ಲಿ ಮೂಡಿಬಂದಿದೆ.

ಮೇಳಿಯವನ ಬೆನ್ನಿನಿಂದ
ಲಾಳಿಯ ಹತ್ತ್ಯಾನ
ಲಾಳಿಯವನ ಬೆನ್ನಿನಿಂದ
ಮೇಳಿಯ ಹತ್ಯಾನು
ತಿನ್ನುವ ಕಾಳ ಹೊರಗ ಹಚ್ಚು
ಬೀರಪ್ಪನ ಭಂಡಾರ ಒಳಗ ಹಚ್ಚು ಗಾಣಮಿಣಿ[೨೨೨]

ಕಂಡ ಕಂಡವರಿಗೆ ಶರಣಾಗುವವರನ್ನು ಒಡೆಯರರು ಖಂಡಿಸಿದ್ದಾರೆ. ಸಾವಿರ ದೈವಗಳಿಗೆ ಕೈ ಮುಗಿವಾತನನ್ನು ಅವರು ಖಂಡಿಸಿದ್ದಾರೆ. ಸಾಧಕ ತನ್ನ ಮಾರ್ಗದಲ್ಲಿ ಒಬ್ಬ ದೈವವನ್ನು ಆಳವಾಗಿ ನಂಬಬೇಕು. ಇದು ಅದರ ಮನಸ್ಸಿನ ಸಿದ್ಧಾಂತವಾಗಿದೆ. ಒಡೆಯರರು ಬಳಸುವ ಭಾಷೆ ಭಾವ ತೀವ್ರತೆಯನ್ನು ಹಿಡಿದಿಡುವ ಸರಳ ವಿಧಾನವಾಗಿದೆ. ಸಾಧಕ ತನ್ನ ಮಾರ್ಗದಲ್ಲಿ ಎದುರಿಸಬಹುದಾದ ನಿರಾಶೆ, ದ್ವಂದ್ವತೆ, ಹತಾಶ, ಸಂಶಯ ಭಾವಗಳು ಆಗಾಗ್ಗೆ ಭಕ್ತರ ಮನಸ್ಸಿನಲ್ಲಿ ಇಣುಕಿ ಫಾಸಿ ಮಾಡುವುದುಂಟು. ಎಲ್ಲಕ್ಕೂ ಕೊನೆಗೆ ಅಂತಿಮ ಬಿಂದುವನ್ನು ಸೇರುವ ಗುರಿ ಹೊಂದಿರುವುದರಿಂದ ಅವರ ಚಿಂತನೆ ಪ್ರಗತಿಪೂರ್ಣವಾಗಿದೆ.

ಗರಿ ಇಲ್ಲದ ನವಿಲು
ವಿಧವೆ ತೊಟ್ಟ ಬಂಗಾರವಂತೆ
ಗತಿ ಇಲ್ರೋ,
ಭಾವಸುದ್ಧ ಇದ್ರ ಭಾಗ್ಯಕ್ಕ ಏನ
ಕಡಿಮೆರ್‍ರ್ರೋ[೨೨೩]

ಇಂತಹ ಹೇಳಿಕೆಗಳನ್ನು ಮನಃಶಾಸ್ತ್ರೀಯವಾಗಿ ವಿಶ್ಲೇಷಿಸಿದರೆ ಸಜ್ಜನರ ಸಂಗ ದೊರೆತರೆ ಬದುಕು ಬಂಗಾರವಾಗುತ್ತದೆ. ಇರದಿದ್ದರೆ ಬದುಕು ವಿಧವೆಯರು ಹಾಕಿಕೊಂಡ ಒಲೆಯಂತೆ ಪ್ರಯೋಜನವಿಲ್ಲ. ಅದಕ್ಕಾಗಿ ಒಡೆಯರರು ತಮ್ಮ ಆಳು ಮಕ್ಕಳನ್ನು ನಂಬುವಂತೆ ಸಂದೇಶ ಕೊಡುತ್ತಾರೆ.

ಮುಂಗೈಗೆ ಕಂಕಣ ಕಟ್ರೋ
ಮನಸ್ ನಿಮ್ಮ ಕಯ್ಯಾಗ ಇರ್ಲಿ
ನೀರಿಗಿ ಬೆಂಕಿ ಹಚ್ಚಬ್ಯಾಡ್ರಿ
ವಾಗಾತಿಲಿ ಹೋಗ್ರಿ[೨೨೪]

ಮುಂಗೈಗೆ ಕಟ್ಟಿದ ಕನ್ನಡಿಯಂತೆ ಬದುಕು ಇರಬೇಕು. ಮೂರ್ಖನಂತೆ ಅಜ್ಞಾನಿ ಮನಸ್ಸು ಸಂಪತ್ತನ್ನು ತಿರಸ್ಕರಿಸಿ ಭಿಕ್ಷಾಟನೆಯನ್ನು ಅಪೇಕ್ಷಿಸುತ್ತದೆ. 'ಜಲಕ್ಕೆ ಬೆಂಕಿ ಹಚ್ಚು'ವುದು ಹೇಗೆ ಸಾಧ್ಯ ಅಂದರೆ ಅದು ಅತಿಶಯೋಕ್ತಿ ಆದರೂ ಕಷ್ಟಪಟ್ಟು ದುಡಿಯಬೇಕು ಎನ್ನುವ ಮೊನೋಭಾವ ಅದರಲ್ಲಿದೆ. ಭಕ್ತರಲ್ಲಿ ನಿಜವಾದ ಭಕ್ತಿ ಮೂಡಬೇಕು ಎಂದು ಒಡೆಯರರು ಆಗಾಗ ಹೇಳುತ್ತಿರುತ್ತಾರೆ.

ಈ ವರ್ಷ ಮಳಿ ಬಂದ
ಊರ ತಂಪ ಅಕ್ಕತಿ
ಈ ವರ್ಷ ಹೊಟ್ಟ ನೆತ್ತಿಗೆ
ಕಡಿಮಿ ಇಲ್ಲ
ತಪ್ಪ ಇದ್ರ ತಗದ ಹಾಕ್ರಿ
ಬೀರಪ್ಪನ ಉಡ್ಯಾಗ ಹಾಕ್ರಿ[೨೨೫]

ಎಂಬ ಹೇಳಿಕೆಯನ್ನು ಮನಃಶಾಸ್ತ್ರೀಯವಾಗಿ ನೋಡಿದಾಗ ಸತ್ಯ ಶುದ್ಧ ಕಾಯಕದಿಂದ ಬದುಕು ಸಾಗಿಸಿದಾಗ ಜೀವನದಲ್ಲಿ ಏನೂ ಕೊರತೆ ಆಗುವುದಿಲ್ಲ ಇಲ್ಲದಿದ್ದರೆ ಬದುಕು ಕ್ಷಣಮಾತ್ರ ಸುಖಕ್ಕೆ ಮಾರುಹೋಗುತ್ತದೆ. ಮನಸ್ಸಿನಲ್ಲಿ ಶುದ್ಧಭಾವ ಇಟ್ಟುಕೊಂಡು ದೈವತ್ವದ ಮಾರ್ಗಕ್ಕೆ ನಡೆಯಬೇಕೆಂದು ಒಡೆಯರರು ಸಾರಿ ಹೇಳಿದ್ದಾರೆ.

ಹೇಳಿಕೆಗಳ ಮನಶಾಸ್ತ್ರೀಯ ನೆಲೆಯ ಮುಖ್ಯ ಉದ್ದೇಶ ಸಮುದಾಯದ ಸದಸ್ಯರನ್ನು ಸಮಾಜೀಕರಣ ಮಾಡುವುದು. ಸಮಾಜದಲ್ಲಿ ನಡೆಯುವ ಜಾತ್ರೆ ಉತ್ಸವ ಮತ್ತು ಸಾಂಘಿಕ ಚಟುವಟಿಕೆಗಳಲ್ಲಿ ಸಮುದಾಯದ ಸದಸ್ಯರು ಭಾಗವಹಿಸುವಂತೆ ಮಾಡಬೇಕು. ಸದಸ್ಯರ ಸಹಜ ಶಕ್ತಿಯು ಹೊರಹೊಮ್ಮಬೇಕು. ಅವರ ಮನೋವೃತ್ತಿಗಳು ಸಮಾಜಕ್ಕೆ ಗೊತ್ತಾಗಬೇಕು. ಒಂಟಿತನ ಇರಬಾರದು ಎಂದು ಒಡೆಯರರು ಸಾರಿ ಹೇಳಿದ್ದಾರೆ.

ಗೂಗಿಯಂಗ್ ಒಂಟಿಯಾಗಿ ಇರಬಾರದು
ನಾಲ್ಕು ಮಂದ್ಯಾಗ ಬೆರಿಬೇಕು
ಇನ್ನೊಬ್ಬರ ಅನುವ ತನುವ ಕೇಳಬೇಕು
ಪ್ರಸಾದ ತಗೊಂಡ ಹೋಗ್ರೀ[೨೨೬]

ಈ ಹೇಳಿಕೆಯಲ್ಲಿ ಸಮುದಾಯದ ಸದಸ್ಯರು ವೈಯಕ್ತಿಕವಾಗಿ ಎಷ್ಟೇ ತೇಜಸ್ವಿಯಾಗಿದ್ದರೂ ನಾಲ್ಕು ಜನರಲ್ಲಿ ಬೆರೆಯದಿದ್ದರೆ ಏನು ಪ್ರಯೋಜನ ಎಂದು ಒಡೆಯರರು ಪ್ರಶ್ನೆ ಮಾಡಿದ್ದಾರೆ. ಸಮುದಾಯದ ಸದಸ್ಯರು ಉತ್ತಮ ಪೌರರನ್ನಾಗಿ ಮಾಡುವಿಕೆಯಲ್ಲಿ ಹೇಳಿಕೆಗಳು ನೀತಿ ಪರವಾಗಿವೆ. ಮೊದಲನೆಯದಾಗಿ ಅದು ಸಮಾಜದಲ್ಲಿ ಇರುವ ವಿವಿಧ ಸಂಸ್ಕೃತಿಗಳನ್ನು ಆಚಾರ ವಿಚಾರಗಳನ್ನು ಜನರಿಗೆ ಅವರದ್ದೇ ಆದ ಭಾಷೆಯಲ್ಲಿ ತಿಳಿ ಹೇಳುತ್ತವೆ. ಒಡೆಯರರು ತಮ್ಮ ಅನುಭವದಿಂದ ಸಮುದಾಯದಲ್ಲಿ ಸದಸ್ಯರ ಆಚಾರ ವಿಚಾರಗಳನ್ನು ವರ್ತನೆಗಳನ್ನು ಪರಿವರ್ತಿಸುತ್ತಾರೆ. ಇಂತಹ ಮಹತ್ಕಾರ್ಯವನ್ನು ಅವರು ಮಾಡುತ್ತಾರೆ. ನಾಗರಿಕ ಶಕ್ತಿಗಳ ಬಿಗಿ ಹಿಡಿತ ಅವರಲ್ಲಿ ಇರದಿದ್ದರು ಸದಸ್ಯರು ಇನ್ನೊಬ್ಬರ ಮೇಲೆ ಭಾರವಾಗದೇ ತಮ್ಮ ಸ್ವಂತ ಕಸುವಿನಿಂದ ಸಾಮರ್ಥ್ಯದಿಂದ ಬಾಳಬೇಕು. ಅವು ಕೃತ್ರಿಮ ಆಗಬಾರದು. ಮನುಷ್ಯ ಸಮಾಜ ಜೀವಿಯಾಗಿ ಬೆರೆಯಬೇಕೆಂಬುದೇ ಅವರ ಆಶಯವಾಗಿದೆ.

ಗುರು ಹಿರ್‍ಯಾರಿಗೆ ಗೌರವ ಕೊಡಬೇಕ್ರಲೇ
ಮನ್ಯಾನ ತಂದಿ ತಾಯಿನ್ನ ಜ್ವಾಪಾನ ಮಾಡ್ರಿ
ಪುಣ್ಯಾ ಬರ್ತತಿ. ಅವರ ಸತ್ತ ಹೋದ ಮ್ಯಾಲ
ಅವರ್‍ನ ನೆನಸಿರ ಏನ ಉಪಯೋಗ
ಇದ್ದಾಗ ನೋಡಿ ನಡೀರಿ[೨೨೭]

ಒಡೆಯರಿಗೆ ಮರ್ಯಾದೆಯನ್ನು ತೋರಿಸುವಾಗ ತುಂಬಾ ಎಚ್ಚರಿಕೆ ಇರಬೇಕು ಎನ್ನುವ ಲೋಕ ವ್ಯವಹಾರವನ್ನು ಇಲ್ಲಿ ಸಾಂಕೇತಿಕವಾಗಿ ಬಳಸಿ ಇದೇ ರೀತಿಯಲ್ಲಿ ಭಗವಂತನನ್ನು ನೆನೆಯುವುದು ಬಿಟ್ಟು ನನ್ನಿಂದಲೇ ಈ ಕೆಲಸವಾಯಿತು ಎಂದು ಅಹಂಕಾರ ಮೂಡಿದರೆ ಅಂತವರ ಅಹಂಕಾರಕ್ಕೆ ಧಕ್ಕೆ ಬರುತ್ತದೆ. ಒಡೆಯರಿಗೆ ತೋರಿಸಿದ ಎಚ್ಚರಿಕೆ ಮಾತಿದು.

ಮನುಷ್ಯಾಗ ನಾ ಅನ್ನುದ ಇರಬಾರದು
ಅದು ಬಹಳ ದಿನ ಉಳಿದುಲ್ಲಾ
ಕಲ್ಲ ತಗೊಂಡ ಅದರ ಮ್ಯಾಲ
ಮೆಳಿ ಹೊಡದ್ರ ಆ ಮೆಳಿ ಕಲ್ಲಿನ್ಯಾಗ
ಸಿಕ್ಕೋತತಿ ಆದ್ರ ಮೆಳಿ ಭಕ್ತ ಆಗುದಿಲ್ಲ
ಕಲ್ಲ ಭಕ್ತನಾಗುವುದಿಲ್ಲ ಆತ್ಮ ಶುದ್ಧಿ ಇರಬೇಕು[೨೨೮]

ಯಾವುದೇ ಕಲ್ಲನ್ನು ಮೇಳೆಯ ಮೇಲೆ ಇಟ್ಟರೆ ಅದು ಮೇಳಿಯಲ್ಲಿ ಸಿಲುಕಿದರೆ ಆ ಮೇಳಿ ಭಕ್ತನೆಂದು ಹೇಳಲಾಗುವುದಿಲ್ಲ. ಆ ಕಲ್ಲು ಭಕ್ತನಾಗುವುದಿಲ್ಲ. ನಿಜವಾದ ಭಕ್ತನಾಗಬೇಕೆಂದರೆ ಅಥವಾ ಹಾಲುಮತದ ದೈವದ ಆಳುಮಕ್ಕಳಾಗಬೇಕೆಂದರೆ ಅವರಲ್ಲಿ ಸತ್ಯ ಸದ್ಭಾವನೆ ಇವು ಇರಲೇಬೇಕು ಎಂದು ಒಡೆಯರರು ಸಾರಿ ಹೇಳಿದ್ದಾರೆ. ನಿಷ್ಠೆಯಿಂದ ಪೂಜೆ ಮಾಡದಿದ್ದರೆ ಆ ಪೂಜೆ ಪೂಜೆಯಲ್ಲ ಆ ಭಕ್ತ ಭಕ್ತನಲ್ಲ. ಆ ಭಕ್ತಿಯ ಸಾಧನೆಯಲ್ಲಿಯೂ ಮನಸ್ಸು ಬೇರೂರಬೇಕು.

ಹೇಳಿಕೆಗಳು ಹಳ್ಳಿಗಳಲ್ಲಿ ಭವಿಷ್ಯವನ್ನು ನಿರ್ಮಿಸಲು ಬಹುಮಟ್ಟಿಗೆ ಸಹಕಾರಿಯಾಗಿವೆ. ಹಾಲುಮತ ಕುರುಬರು ಇಂತಹ ಹೇಳಿಕೆಗಳನ್ನು ತಮ್ಮ ಸಾಂಸ್ಕೃತಿಕ ದಿನಗಳಲ್ಲಿ ಹೇಳುತ್ತಾರೆ. ಮೌಖಿಕ ಪರಂಪರೆಯಲ್ಲಿ ಸಾಗುವ ಈ ಹೇಳಿಕೆಗಳು ಹಾಲುಮತ ಚರಿತ್ರೆಯಲ್ಲಿ ಬರುವ ಸಾಂಸ್ಕೃತಿಕ ನಾಯಕರಾದ ಮೈಲಾರ, ಬೀರಪ್ಪ, ಮಾಳಿಂಗರಾಯ, ಅಮೋಘಸಿದ್ಧ, ಮಾಯವ್ವ ಮುಂತಾದವರು ದೇವತೆಗಳಾಗಿ ಪೂಜೆಗೊಳ್ಳುತ್ತಾರೆ. ಈ ದೇವರುಗಳ ಕುರಿತಾಗಿ ದೇವಸ್ಥಾನಗಳು ನಾಡಿನ ತುಂಬಾ ವ್ಯಾಪಿಸಿರುತ್ತವೆ. ಅಲ್ಲಿ ಉದ್ದಕ್ಕೂ ಆರಾಧಾನೆ ಆಚರಣೆಗಳು ನಡೆಯುತ್ತವೆ. ಭಕ್ತರನ್ನು ಕುರಿತು ಹೇಳಿಕೆಗಳು ನಡೆಯುತ್ತವೆ. ಹೇಳಿಕೆಗಳ ಸಂಪ್ರದಾಯವು ಸಮುದಾಯದಲ್ಲಿ ಪ್ರಬಲವೂ ವ್ಯಾಪಕವೂ ಆಗಿರುತ್ತದೆ. ಹೇಳಿಕೆಗಳ ಮೌಖಿಕ ಸಾಹಿತ್ಯದ ಭಾಗಗಳಾಗಿವೆ. ಅವುಗಳನ್ನು ಹೇಳುವ ಒಡೆಯರರು ಕುರುಬ ಸಮುದಾಯದ ದೈವೀ ಸ್ವರೂಪಗಳಾಗಿದ್ದಾರೆ.

- ಕೋಳಿ ಕೂಗುವಾಗ ಸುಟ್ಟು ಸರೋತ್ತ್ಯಾಗ ಎದ್ದು ಬಿಡ್ತಾರ
- ಅ ಮಗ್ಗಿಗಿ ತಣ್ಣೀರ ಮೈ ತೊಳ್ಯೋದು
- ಅರಿಸಿನ ಭಂಡಾರ ಹಚ್ಚೋದು
- ಬಿಳಿ ಅಂಗಿ ತೊಡ್ಸೋದು
- ಬಿಳಿ ಗಗ್ರಿ ಉಡ್ಸೋದು
- ಹಾಲ್ಸಕ್ರಿ ಹಾಕಿ ಉಣ್ಣೋದು

ಯೇಳು ಮಂದಿ ಅಣ್ಣೋರು ಪಾದಕ ಬಿದ್ದಾರ
ಯಮ್ಮ ಡೊಳ್ಳು ಹೊಡ್ಯೋರು
ಮ್ಯಾಳ ಊದೋರು
ಈಗ ಖಂಡಗ ಜ್ವಾಳಾ ಕುಟ್ಟಿನಿ
ಇವಾಗ ನೀನು ಮದ್ವಿಗೆ
ಒಲ್ಲೆ ಅಂದ್ರ ಹ್ಯಾಂಗಮ್ಮ
ಅಯ್ಯೋ ನಿನ್ನ ಪಾದಕ ಶರಣಮ್ಮ ತಂಗಿ
ಸರಿ ನೀವು ಮದಿವಿ ಮಾಡ್ತಿನಂತ್ರಿ[೨೨೯]

ಈ ಹೇಳಿಕೆಗಳನ್ನು ಮನೋವೈಜಾನಿಕವಾಗಿ ವಿಶ್ಲೇಷಿಸಿದರೆ ಆತ್ಮ ವಿಮರ್ಶೆಯೊಂದಿಗೆ ಸಾಮಾಜಿಕ ವಿಡಂಬನೆಯ ತೀವ್ರ ಅಭಿವ್ಯಕ್ತಿ ಕಂಡು ಬರುತ್ತದೆ. ಒಡೆಯರರಲ್ಲಿ ಸಾಮಾಜಿಕ ಕಳಕಳಿಯು ತೀವ್ರ ವಿಡಂಬನೆಯ ನಿಯುಕ್ತವಾಗಿದ್ದು. ಸಾಮಾಜಿಕವಾದ ದುಷ್ಟತೆ ಮತ್ತು ಪಿಡುಗುಗಳನ್ನು ತೀವ್ರವಾಗಿ ಖಂಡನೆ ಮಾಡಿ ಅದರ ಅರ್ಥಹೀನತೆಯನ್ನು ಹೊರತಂದು ಜನರಲ್ಲಿ ಅರಿವನ್ನುಂಟು ಮಾಡಿದರು. ಇದರೊಂದಿಗೆ ಅರ್ಥವತ್ತಾದ ಮತ್ತು ಸಕಾಲಿಕವಾದ, ಸರಳವಾದ ಸಾಮಾಜೋ ಧಾರ್ಮಿಕ ನೀತಿಗಳನ್ನು ಪ್ರಚುರಗೊಳಿಸಿದರು ಎಂಬುದು ಬಹುಮುಖ್ಯ ಸಂಗತಿಯಾಗಿದೆ. ಅವರ ಹೇಳಿಕೆಗಳಲ್ಲಿ ಮನಸಿನ ಭಾವನೆಗಳನ್ನು ನೇರವಾಗಿ ನಿವೇದಿಸಿಕೊಂಡಿದ್ದಾರೆ. ಆತ್ಮ ವಿಮರ್ಶೆ ಆತ್ಮ ಪರಿಶೀಲನೆ ಆತ್ಮ ಮತ್ತು ಸಾಮಾಜಿಕ ವಿಡಂಬನೆಗಳ ನೀತಿಯನ್ನು ಗಮನಿಸುವುದರಿಂದ ಅವರ ಅಂತರಂಗದ ವ್ಯಕ್ತಿತ್ವವು ಸ್ಪಷ್ಟವಾಗಿ ಗೋಚರಿಸುತ್ತದೆ.

ಒಡೆಯರರ ಹೇಳಿಕೆಗಳಲ್ಲಿ ಒಂದು ಪದಪುಂಜ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತದೆ. ಅಂದರೆ ಅವರ ಭಾಷೆ ನೇರ ಮತ್ತು ಸರಳವಾಗಿರುತ್ತದೆ. ಕೇಳುಗರ ಹೃದಯ ತಟ್ಟುವಂತೆ ಮಾಡುತ್ತದೆ.

ಪಡುಗಾಳಿ ಸೂತ್ಯಾಡಕತ್ತತಿ
ಯಾರ ಅಡ್ಡ ಬರಬ್ಯಾಡ್ರಿ
ಕೂಸಿನ ಕೈಯಾಗ ಬಲಗೈಯಾಗ
ಹಾಲಗಡಗ ಹಾಕ್ರಿ
ಉಧೋ ಅನ್ರಿ
ಎಲ್ಲಾ ಛಲೋ ಅಕ್ಕತಿ[೨೩೦]

ಇಂತಹ ಹೇಳಿಕೆಯನ್ನು ಮನಶಾಸ್ತ್ರೀಯ ನೆಲೆಯಲ್ಲಿ ನೋಡಿದಾಗ ಹೇಳಿಕೆಯ ನಾದ ಕಿವಿಗೆ ಅಪ್ಪಳಿಸುತ್ತದೆ. ಅವುಗಳ ಅರ್ಥಶಕ್ತಿ ಒಂದು ಘಟನೆಯನ್ನು ಯಥಾವತ್ತಾಗಿ ಚಿತ್ರಿಸುತ್ತದೆ.

ಎವ್ವಾ ವರ್ಷ ತುಂಬಗೊಡದ ಮದುವಿ ಆಕ್ಕತಿ
ಎವ್ವಾ ಚಿಂತಿ ಮಾಡಬ್ಯಾಡ
ಬಲಗಾಲ ಇಟ್ಟ ಒಳಗ ಹೋಗು[೨೩೧]

ಹೆಣ್ಣು ಮಕ್ಕಳು ಗಂಡನ ಮನೆಗೆ ಪ್ರವೇಶ ಮಾಡುವಾಗ ಅದು ಶುಭದ ಸಂಕೇತ ಅವರಿಗೆ ಬಲಗಾಲ ಇಟ್ಟು ಕಳಿಸಿ ಕಂಬಳಿ ಮೇಲೆ ಉಡಿಯಕ್ಕಿ ಹಾಕಬೇಕು. ಅದು ಹೇಳಿಕೆಗಳಲ್ಲಿ ಯಥಾವತ್ತಾಗಿ ಚಿತ್ರಿತವಾಗಿದೆ.

ಮೈತುಂಬಾ ಹುಣ್ಣ
ಪಿಳಿ ಪಿಳಿ ಹುಳಾ
ಕೀವಾ ರಕ್ತ ಇಳಿತೈತಿ
ಅನ್ನಾ ನುಂಗಾಕ ಬರುದಿಲ್ಲ
ವಯಸ್ಸ ಆಗ್ಯಾವ
ಚಂದಾಗಿ ನೋಡಿಕೋರಿ
ಇರುತನಕ ಜ್ವಾಪಾನ ಮಾಡಿಕೊಂತ
ಹೋಗ್ರಿ[೨೩೨]

ಈ ಹೇಳಿಕೆಗಳನ್ನು ಗಮನಿಸಿದಾಗ ಹಿರಿಯರ ಬಗ್ಗೆ ಮಕ್ಕಳ ಜವಾಬ್ದಾರಿಯನ್ನು ಒತ್ತಿ ಹೇಳುತ್ತದೆ. ಮಕ್ಕಳು ಹಿರಿಯರ ಬಗ್ಗೆ ಗುರುಗಳ ಬಗ್ಗೆ ಪ್ರೀತಿಯಿಂದ ಇರಬೇಕು ಎನ್ನುವ ಅರ್ಥ ಈ ಹೇಳಿಕೆಯಲ್ಲಿದೆ. ಇಂತಹ ಹೇಳಿಕೆಯಲ್ಲಿ ಒಡೆಯರರ ಸಾಮಾಜಿಕ ಕಳಕಳಿಯನ್ನು ಗಮನಿಸಬೇಕು. ನನ್ನ ಗುಡ್ಯಾಗ ಏನ ಐತೋ ಅಂಬಲಿ ಕಿಚಡಿ, ನವಣಿ ಅನ್ನ ಹುಣಸಿ ಚಟ್ನಿ ಅದನ ತಿಂದ ಹೋದ್ರ ಆನಿ ಕಸು ಬರ್ತತಿ ಎಂದು ಹೇಳುವ ಸನ್ನಿವೇಶದಲ್ಲಿ ಭಾಷೆ ಶಕ್ತಿಯುತವಾಗಿ ಬಳಕೆಯಾಗಿವೆ.

ಬಾಯಿ ಮಾತು ಹೇಳಿದರೆ ನಿಮಗ ನಂಬಿಗಿಲ್ಲ
ಬಲಗೈ ಭಾಷೆ ಕೊಡಬೇಕಂದಾವೋ
ಬೆಟ್ಟವ ಇಳಿವಾಗ ಬಿಟ್ಟವು ಪಾದದ ಗೆಜ್ಜೆ
ಉಷ್ಟಾಂಗದ ಉಡಿಗೆ ಸೊಡಲ್ಯಾವೆ । ಚಿತ್ತಯ್ಯ

ಬೆಟ್ಟಾವ ಇಳಿಯ ರವಸಿಗಿ ॥ಹಾರೋದು॥
ವಣಕೆ ವಣಕೆ ಬಂತ ಮಣಕಾಲಲಿ ಸಮರಂತ
ವಣಕೀಯ ಬಂತ ಈರಣ್ಣ। ಏಳಾಜಂಬಿ
ಮಣಕಾಲೇ ಊರಿ ಮಡುದಾವೆ.
ಗಾಡಿಯ ಹೂಡಣ್ಣ ಮ್ಯಾಲೆತ್ತು ಬಿಗಿರಣ್ಣ
ಗಾಡಿಗೆ ಭಂಡಾರ ಇಡಿರಣ್ಣ। ಗೌರಸಂದ್ರ
ಗಾಡಿ ಹೋಗುತಾವೆ ವನಗಳಿಗೆ ॥ಅಕ್ಕಕ್ಕ॥
ಬಂದು ಬಂದವನಲ್ಲ ಮುಂದೆ ಬೋಳು ಮಾಡಿ
ಬಂದ ಗಂಟುಗಳ ಸೆಳಕೊಂಡು ತಿಮ್ಮಯ್ಯ
ಗದ್ದೂಲ ಬಹಳಂದ ಇಳಿಯಂದ ॥ ಆಲಗಿರಿ॥
ಹೋದ ಹೋದರನೆಲ್ಲ ಮಾರಿ ಬೋಳು ಮಾಡಿ ಹೋದ ಗಂಟುಗಳ
ಸೆಳಕೊಡ । ತಿಮ್ಮಯ್ಯ
ಹಾವೂಳಿ ಬಹಳಂದ ಇಳಿಯಂದ ॥ಆಲಗಿರಿ॥[೨೩೩]

ಇಂತಹ ಹೇಳಿಕೆಗಳು ಸಮುದಾಯದ ಸದಸ್ಯರಲ್ಲಿ ಬಂದಿರುವ ಸಮಸ್ಯೆಗಳನ್ನು ಪರಿಹರಿಸುತ್ತವೆ. ಅವು ಆಯಾ ಭಾಷಿಕ ಸಂದರ್ಭಕ್ಕೆ ತಕ್ಕಂತೆ ವಿಶಿಷ್ಟ ಅರ್ಥವನ್ನು ಕೊಡುತ್ತವೆ. ಇಂತಹ ಪಡೆನುಡಿಗಳು ಮೌಖಿಕ ಸಾಹಿತ್ಯದಲ್ಲಿ ಧಾರಳವಾಗಿ ಸಿಗುತ್ತವೆ. ನೆಲ, ಉರಿ, ಹಾರು, ಬಿಗದಾಡಿ, ಗಂಟು ಕಟ್ಟು, ಬಾಯಿಗೆ ಬೀಗ, ಹಲ್ಲು ಕಡಿ, ಕಣ್ಣು ಮುಚ್ಚು, ಗಟ್ಟಿಸಿ ಹೇಳು ಮುಂತಾದವು ಮೌಖಿಕ ಸಾಹಿತ್ಯದಲ್ಲಿ ಭಾವಕ್ಕೆ ತಕ್ಕಂತೆ ಬಳಕೆಯಾಗಿ ಸಹಜವಾಗಿ ಕೂಡಿಕೊಳ್ಳುವುದರಿಂದ ಭಾವ ಭಾಷೆಗಳ ಹೊಂದಾಣಿಕೆ ಇಲ್ಲಿ ಕಾಣುತ್ತೇವೆ.

ಹುತ್ತದ ಕ್ವಾಮ್ಯಾಗ ಹುಟ್ಟುತಕ ಮಾರಿ
ಹಾವಿನ ಕ್ವಾಮ್ಯಾಗ ಮೂಡ್ಯಾಳ ತಾಯಿಮಾರಿ
ಮಟ್ಟ ಮದ್ಯಾನ್ನದಾಗ ಹುಟ್ಟಿತ್ತು ಬೇವಿನ ಮರ
ಹುಟ್ಟತಲೆ ಕಾಯಿ ಜಗವು ತಲೆ । ಮಾರಕ್ಕಿ
ಹುಟ್ಟ್ಯಾಳ ಬೇವಿನ ಮರದಾಗ[೨೩೪]

ಈ ಹೇಳಿಕೆಯ ಭಾಷೆಯನ್ನು ಮನಃಶಾಸ್ತ್ರೀಯ ನೆಲೆಯಲ್ಲಿ ಯೋಚಿಸಿದಾಗ ಭಾಷಾ ಸರಳತೆ, ಜಿಡಿ ಪದಗಳ ಬಳಕೆ ಇವುಗಳಿಂದಾಗಿ ಈ ಹೇಳಿಕೆಗಳು ಕೇಳುಗರ ಹೃದಯವನ್ನು ಸ್ಪರ್ಶಿಸುತ್ತವೆ. ಅಂತಹ ಹೇಳಿಕೆಗಳು ಸ್ವಭಾವೋಕ್ತಿಗಳ ಮೂಲಕ ಕಣ್ಣುಮುಂದೆ ಕಟ್ಟುವಂತೆ

ಹೇಳುತ್ತಾರೆ. ಹೇಳಿಕೆಗಳಲ್ಲಿ ಒಡೆಯರರು ಕೊಡುವ ಸೂಚನೆಗಳು ಜನಪದರಲ್ಲಿ ಬೇರೂರುವಂತೆ ಮಾಡಲು ಮೂರು ಉಪಾಯಗಳನ್ನು ಉಪಯೋಗಿಸುವದು. ಒಂದು ಪುನರಾವರ್ತನೆ. ಒಂದು ಸೂಚನೆಯನ್ನು ಪದೇ ಪದೇ ಜನರ ಮುಂದೆ ಇಡುವುದರಿಂದ ಆ ಸೂಚನೆ ದಿನದಿನಕ್ಕೂ ಪ್ರಬಲಗೊಂಡು ಜನರು ಅದನ್ನು ಸತ್ಯವೆಂದು ಒಪ್ಪಿಕೊಳ್ಳುವರು. ಸಂದೇಹಕ್ಕೆ ಎಡೆಕೊಡದಂತೆ ಯಾವ ವಿಧವಾದ ವಾದಕ್ಕೂ ಎಡೆಕೊಡದಂತೆ ದೃಢವಾಗಿ, ಗಟ್ಟಿಯಾಗಿ ಘೋಷಿಸುವುದು ಸೂಚನೆಗಳನ್ನು ಬಲಪಡಿಸಲು ಎರಡನೆಯ ಉಪಾಯ ಸಮಾಜದಲ್ಲಿ ಹೆಸರುಗಳಿಸಿದವರಿಂದ ಪ್ರತಿಷ್ಠೆ ಪಡೆದಿರುವವರ ಬಾಯಿಂದ ಸೂಚನೆಗಳನ್ನು ಹೊರಗೆಡಹುವುದು ಮೂರನೆಯ ಉಪಾಯ. ಹೀಗೆ ಬೇರೆ ಬೇರೆ ಉಪಾಯಗಳಿಂದ ಜನರನ್ನು ತಮ್ಮ ಸೂಚನೆಗಳ ಕಡೆಗೆ ಒಲಿಸಿಕೊಳ್ಳುವುದನ್ನು ತಡೆಗಟ್ಟಬೇಕಾದರೆ, ಜನರಲ್ಲಿ ವಿಚಾರಶಕ್ತಿ ಬೆಳೆಯುವಂತೆ ಮಾಡುವುದೊಂದೇ ಮಾರ್ಗ. ಯಾವ ಸೂಚನೆ ಬಂದರೂ ಅದಕ್ಕೆ ಸರಿಯಾದ ಆಧಾರವಿದೆಯೇ ಅದರ ಸಾಧಕ ಬಾಧಕಗಳೇನು? ಎಂಬುದನ್ನು ತರ್ಕಮಾಡಿ ನಿರ್ಧರಿಸುವ ಭಕ್ತಿಯನ್ನು ಬೆಳೆಸುವುದರಿಂದ ಪ್ರಜಾ ಮತ ವಿವೇಕಯುತವಾಗುವುದು. ಆದ್ದರಿಂದ ಯಾವ ದೇಶದಲ್ಲಿ ಪಾಠಶಾಲೆಗಳಿಲ್ಲೂ ಉಪನ್ಯಾಸ ಮಂದಿರಗಳಲ್ಲೂ ವಿಚಾರ ಪರ ವಾತಾವರಣ ಏರ್ಪಟ್ಟಿರುವುದೋ ಅಂಥಾ ದೇಶವೇ ಪ್ರಜಾ ಸರ್ಕಾರಕ್ಕೆ ಯೋಗ್ಯವಾದ್ದು. ಅಂಥಾ ದೇಶದಲ್ಲಿ ಪ್ರಜಾ ಸರ್ಕಾರ ಯಶಸ್ವಿಯಾಗಿ ನೆಲೆಗೊಳ್ಳಲು ಸಾಧ್ಯವಿರುತ್ತದೆ.

ನಮ್ಮ ಜೀವನದಲ್ಲಿ ಕಾಮಕ್ರೋಧಗಳು, ಮಮಕಾರ, ಪಕ್ಷಪಾತ ಬುದ್ಧಿ ಪೂರ್ವಗ್ರಹಗಳು ತುಂಬ ಪರಿಣಾಮಕಾರಿಗಳು. ಇವು ನಮ್ಮ ತಿಳಿವನ್ನು ವಿಶೇಷ ರೀತಿಯಲ್ಲಿ ನಿರ್ಧರಿಸುವವು. ನಮ್ಮ ಕಣ್ಣ ಮುಂದೆ ಪದಾರ್ಥಗಳು ಇದ್ದರೂ, ಇರುವುದನ್ನೆಲ್ಲಾ ಅವು ಇರುವಂತೆಯೇ ನಾವು ನೋಡುವ ಬಗೆ ನಮ್ಮ ಮಮಕಾರ, ಪಕ್ಷಪಾತ ಬುದ್ದಿ ನಮ್ಮ ಈರ್ಷ್ಯಾಸೂಯೆಗಳು ಇವು ನಮಗೆ ಬೇಕಾದ ಪದಾರ್ಥಗಳು ನಮ್ಮ ದೃಷ್ಟಿಯಿಂದ ಮರೆ ಮಾಚುತ್ತವೆ. ನಮ್ಮ ಮೂಗಿಗೆ ಸರಿಯಾಗಿ ನಾವು ನೋಡುವುದು ರೂಢಿ. ನಮಗೆ ಪ್ರೀಯರಾದವರ ನಡವಳಿಕೆಯಲ್ಲಿ ನಾವು ದೋಷ ಕಾಣುವುದಿಲ್ಲ. ಒಳ್ಳೆಯದನ್ನು ಕಾಣುತ್ತೇವೆ. ನಮಗೆ ಅಪ್ರೀಯರಾದವರ ನಡತೆಯಲ್ಲಿ ಒಳ್ಳೆಯದನ್ನು ಕಾಣುವುದಿಲ್ಲ.ಕೆಟ್ಟದ್ದನ್ನೇ ಕಾಣುತ್ತೇವೆ. ನಮ್ಮ ಗುಂಪಿನವರು ಒಳ್ಳೆಯವರು, ಬೇರೆಯ ಗುಂಪಿನವರು ಕೆಟ್ಟವರು. ಅಮೇರಿಕಾದವರಿಗೆ ರಷ್ಯಾದವರು ಹೇಳಿದ್ದು ಮಾಡಿದ್ದು ಎಲ್ಲವೂ ಅಸಾಧುವಾದುದು. ನಮ್ಮ ದೇಶದವರು ಹೇಳಿದ್ದು ಮಾಡಿದ್ದು ಸಾಧುವಾದರು ಹಾಗೆಯೇ ರಷ್ಯಾದವರಿಗೆ ಅಮೇರಿಕಾದವರ ಆಡಿಕೆಗಳು ಮಾಡಿಕೆಗಳು ಅಸಹ್ಯ ರಾಜಕೀಯ ಪಕ್ಷಾಭಿಮಾನದಂತೆಯೇ ಮತಾಭಿಮಾನ, ಕೋಮಿನ ಅಭಿಮಾನ, ಭಾಷಾಭಿಮಾನ, ವರ್ಣಾಭಿಮಾನ ಜನರ ಆಲೋಚನೆಗಳನ್ನು ನಿರ್ಧರಿಸುತ್ತವೆ. ಒಂದು ಮತದವರು ಬೇರೆಯ ಮತದವರನ್ನು ಕುರಿತು ವಿಧರ್ಮಿಗಳೆಂದು ನಿಕೃಷ್ಟವಾಗಿ ಮಾತನಾಡುತ್ತಾರೆ. ಬಿಳಿಯ ಬಣ್ಣದ ಜನರು ಕಪ್ಪು ಬಣ್ಣದ ಅಥವಾ ಹಳದಿ

ಬಣ್ಣದವರನ್ನು ಹೀನಾಯವಾಗಿ ನೋಡುತ್ತಾರೆ. ಒಂದು ಕೋಮಿನವರು ಇತರ ಕೋಮಿನವರ ಅಭಿಪ್ರಾಯಗಳು ಅಸಾಧುವೆಂದು ದೂಷಿಸುತ್ತಾರೆ. ಹೀಗೆಯೇ ಪಶ್ಚಿಮ ದೇಶದವರು ಪೂರ್ವ ದೇಶದವರ ಮತ, ಧರ್ಮ, ತತ್ತ್ವ ನೀತಿಗಳನ್ನು ಕುರಿತು ತಾತ್ಸಾರವಾಗಿ ನುಡಿಯುತ್ತಾರೆ.

ಆದರೆ ಅಭಿಮಾನ ಬರಿಯ ಕೆಟ್ಟ ಭಾವನೆಗಳನ್ನೇ ಹುಟ್ಟಿಸುವುದಿಲ್ಲ ಒಳ್ಳೆಯ ಭಾವನೆಗಳನ್ನು ಹುಟ್ಟಿಸುತ್ತದೆ. ನಮ್ಮ ನಾಡಿನ ವಿಷಯದಲ್ಲಿ ಪ್ರೇಮವನ್ನು ನಮ್ಮ ಮತದಲ್ಲಿ ಆಸಕ್ತಿಯನ್ನು ನಮ್ಮವರ ಶ್ರೇಯೋಭಿವೃದ್ಧಿಯನ್ನು ಬೆಳೆಸುತ್ತದೆ. ಅಭಿಮಾನ ಒಳ್ಳೆಯದಕ್ಕೂ ಕಾರಣ ಕೆಟ್ಟದ್ದಕ್ಕೂ ಕಾರಣ ಸದ್ಭಾವನೆಗಳಿಗೂ ಕಾರಣ ದುರ್ಭಾವನೆಗಳಿಗೂ ಕಾರಣ.

ನಮ್ಮ ತಿಳಿವನ್ನು ವಾಸ್ತವವಾಗಿ ಯಾವ ಯಾವ ಅಂಶಗಳು ಪ್ರಚೋದನೆಗೊಳಿಸುತ್ತವೆ ಎಂಬುದನ್ನು ಮನಃಶಾಸ್ತ್ರವು ತಿಳಿಸುತ್ತದೆ. ಅವು ನಮ್ಮಲ್ಲಿ ಸರಿಯಾದ ತಿಳಿವನ್ನು ಹುಟ್ಟಿಸಬಹುದು. ಅಥವಾ ತಪ್ಪಾದ ತಿಳಿವನ್ನು ಹುಟ್ಟಿಸಬಹುದು ನಮ್ಮ ತಿಳಿವು ಹೇಗೆ, ಯಾವ ರೀತಿಯಲ್ಲಿ ಹುಟ್ಟುತ್ತದೆ ಎಂಬುದನ್ನು ಮಾತ್ರ ಮನಃಶಾಸ್ತ್ರವು ತಿಳಿಸುತ್ತದೆ. ಸರಿಯಾದ ತಿಳಿವಿನ ಸ್ವರೂಪವೇನು ಎಂಬುದನ್ನು ಅದು ತಿಳಿಸುವುದಿಲ್ಲ. ತಿಳಿಸುವುದು ಅದರ ಕೆಲಸವಲ್ಲ ಸರಿಯಾದ ತಿಳಿವಿನ ಲಕ್ಷಣವೇನು? ಎಂಬುದನ್ನು ತಿಳಿಸುವುದು ತರ್ಕಶಾಸ್ತ್ರದ ಕೆಲಸ.

ನಾಲ್ಕುಮಂದಿ ಬರಲೇ
ಸುತ್ತ ಮೂರ ಗಾವುದ ದಾಟಿ ಸುದ್ದೀ ತಂದನ್
ಅಲ್ಲಿಂದ ಕಡೋಲಿ ಇಟ್ಟಪ್ಪ ಬಂದಾನ
ಭಂಡಾರ ಹಚ್ಯಾನ ಕೌಲ ಕೇಳ್ಯಾರ
ಮಕ್ಕಳಾ ಮರಿ ಆಗತಾವ
ಮೂರ ಅಮಾಸಿ ಬಂದ ಹೋಗ್ರೀ[೨೩೫]

ಹಾಲು, ಜೇನು ಮೊಸರು ಗಡಿಗ್ಯಾಗ ಇಲ್ಲ
ಇದು ದೂರದ ಮಾತ ಅಲ್ಲ
ಮನಿ ಮನಿಗೆ ಕಡಬಿ ಇಟ್ಟಪ್ಪ ಸಾರಿ ಹೇಳ್ಯಾನ[೨೩೬]

ದೀವಿಗೆ ದೀಪದ ಕುಡಿ ಹಾಂಗ್
ದಿನಮಾನ ಬಂದಾವು
ಗೊತ್ತ ನೋಡಿ ಹೊತ್ತ ಹೇಳಬೇಕು[೨೩೭]

ಇಂತಹ ಹೇಳಿಕೆಗಳಲ್ಲಿ ತರ್ಕಬದ್ಧವಾದ ಆಲೋಚನೆಯ ಸರಳ ರೂಪ ಪ್ರತಿಜ್ಞೆ ರೂಪವಾಗಿರುತ್ತದೆ. ಮನುಷ್ಯನು ಆಲೋಚಿಸುವ ಪ್ರಾಣಿ ಹೇಳಿಕೆಗಳು ಭಾವನಾತ್ಮಕವಾಗಿರುವುದರ ಜೊತೆಗೆ ವಾಸ್ತವದ ರೂಪದಲ್ಲಿರುತ್ತವೆ. ಹಾಗಾದರೆ ಭಾಷೆ ಇಲ್ಲದೆಯೇ ಆಲೋಚನೆ ಮಾಡಲಾಗುವುದಿಲ್ಲವೇ ಎಂದು ಕೇಳುವುದುಂಟು ಹೇಳಿಕೆಗಳಲ್ಲಿ ಬದುಕಿನ ಸಾಮಾಜಿಕ ಆಯಾಮವನ್ನು ತಿಳಿಯಬೇಕಾದರೆ ಮನಃಶಾಸ್ತ್ರ ಬೇಕೇ ಬೇಕು. ಭಕ್ತರ ಆಲೋಚನಾ ತರಂಗಗಳನ್ನು ವಾದ ವಿವಾದಗಳನ್ನು ತಿಳಿಯ ಪಡಿಸಲು ಭಾಷೆ ಅಗತ್ಯ ಕಾಲದಿಂದ ಕಾಲಕ್ಕೆ ಹೇಳಿಕೆಗಳಲ್ಲಿ ಸಾಮಾಜಿಕ ಬದಲಾವಣೆಗಳಾಗುವುದರಿಂದ ಸನ್ನಿವೇಶಕ್ಕೆ ಅನುಸಾರವಾಗಿ ಹೇಳಿಕೆಗಳು ರೂಪಗೊಳ್ಳುತ್ತವೆ. ಅವು ಸಾಮಾನ್ಯವಾಗಿ ವಾಚ್ಯಾರ್ಥದಿಂದ ಭಿನ್ನವಾದ ಅಥವಾ ಹೆಚ್ಚಿನ ಅರ್ಥ ಬರುತ್ತದೆ.

ಓನ್ಯಾಗ ಯಾರೂ ಇಲ್ಲ
ಮನ್ನಿ ಜಾತ್ರ್ಯಾಗ ಬರಾವರು ಬರಲಿಲ್ಲ
ಹೋದವರು ಹೋಗಲಿಲ್ಲ
ಊರಾಗ ಹಿರ್‍ಯಾರ ಕಿರ್‍ಯಾರ ಇಲ್ಲ
ನನ್ನ ಜಾತ್ರಿ ಈ ವರ್ಷ ಮಾಡಲಿಲ್ಲ
ಈ ವರ್ಷ ಮಳಿ ಬೆಳಿ ಆಗುದಿಲ್ಲಾ
ಜಾತ್ರೆ ಮಾಡ್ರಲೇ ತಿಳಿದ ನಡಿರಿ[೨೩೮]

ಇಲ್ಲಿ ಬರುವ ಓನ್ಯಾಗ ಯಾರಿಲ್ಲ ಎಂಬ ವಾಕ್ಯದಲ್ಲಿ 'ಓಣಿ' ಎಂಬುದಕ್ಕೆ ಓಣಿಯಲ್ಲಿ ಎಂದರೆ ಓಣಿಯಲ್ಲಿನ ಜನರೆಲ್ಲ ಎಂದು ಅರ್ಥ. ನೀವು ದೊಡ್ಡವರ ಊರಾಗ ಹಿರ್‍ಯಾರಿಲ್ಲ ಕಿರ್‍ಯಾರಿಲ್ಲ ಎಂಬ ವಾಕ್ಯದಲ್ಲಿ ದೊಡ್ಡವರು ಎಂಬ ಪದ ವಾಚ್ಯಾರ್ಥಕ್ಕೆ ವಿರುದ್ಧವಾದ ಅರ್ಥವನ್ನು ಪಡೆಯುತ್ತದೆ. ಹೇಳಿಕೆಗಳಲ್ಲಿ ಬಳಕೆಯಾದ ನುಡಿಗಳನ್ನು ಲಕ್ಷ್ಯಾರ್ಥಲ್ಲಿ ಬಳಕೆಯಾಗುತ್ತದೆ. ಸ್ಪಷ್ಟವಾದ ನ್ಯಾಯಬದ್ಧವಾದ ತಿಳಿವನ್ನು ಬೆಳಸಲಪೇಕ್ಷಿಸುವವರು ಪದಗಳನ್ನು ನಿರ್ದಿಷ್ಟವಾದ ಸ್ಪಷ್ಟವಾದ ಅರ್ಥದಲ್ಲಿ ಉಪಯೋಗಿಸಬೇಕು. ಅವರು ಪದಗಳನ್ನು ಬಹಳ ಜಾಗರೂಕತೆಯಿಂದ ಉಪಯೋಗಿಸಬೇಕು ಅಸ್ಪಷ್ಟತೆಗೆ ಎಳ್ಳಷ್ಟೂ ಅವಕಾಶ ಕೊಡಕೂಡದು ಈ ಕ್ಷೇತ್ರದಲ್ಲಿ ವ್ಯವಹರಿಸುವವರ ಮುಖ್ಯ ಗುರಿ ಸತ್ಯ. ಇದ್ದದನ್ನ ಇದ್ದಂತೆ ಹೆಚ್ಚು ಕಡಿಮೆ ಮಾಡದೆ ತಿಳಿಯುವುದು. ಉತ್ಪ್ರೇಕ್ಷೆ ಕಾವ್ಯದಲ್ಲಿ ಅಲಂಕಾರವಾಗಬಹುದು. ಅದು ವಸ್ತುವನ್ನು ಸುಂದರವಾಗಿ ತೋರಿಸಬಹುದು. ಆದರೆ ಶಾಸ್ತ್ರದಲ್ಲಿ ಉತ್ಪ್ರೇಕ್ಷೆ ಅಪಾಯಕರ. ವಿರೋಧ ಪಕ್ಷದವರ ಅಲ್ಪ ಅಪರಾಧವನ್ನು ಮಹತ್ತರವಾದುದನ್ನಾಗಿ ಮಾಡಿ ತಮ್ಮ ಪಕ್ಷದವರು ಮಾಡಿದುದು ದೊಡ್ಡ ಅಪರಾಧವಾದರೂ ಅದು ಸಣ್ಣವೆಂದು ತೋರಿಸುವುದು. ಜನರಲ್ಲಿ ಭಾವೋದ್ರೇಕ ಉಂಟುಮಾಡುವ ಮಾತುಗಳನ್ನು ಆರಿಸಿ ಉಪಯೋಗಿಸುವುದು, ಒಂದೇ ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿ ಜನರ

ಕಣ್ಣಿಗೆ ಮಣ್ಣೆರೆಚುವುದು ಇವು ರಾಜಕಾರಣಿಗಳ ಜಯಕ್ಕೆ ಅಗತ್ಯವಾದ ಅಸ್ತ್ರಗಳಾಗಬಹುದು. ಆದರೆ ಸತ್ಯವನ್ನೇ ಧ್ಯೇಯವಾಗಿ ಇಟ್ಟುಕೊಂಡಿರುವ ಶಾಸ್ತ್ರಗಳಲ್ಲಿ ಅವು ಸತ್ಯವನ್ನು ಮರೆಮಾಡಿ ಸತ್ಯಾನ್ವೇಷಣೆಗೆ ತಡೆಯಾಗುತ್ತವೆ. ವಿಷಯವನ್ನು ಪಾರದರ್ಶಕವಾಗಿ ಮಾಡಬೇಕಾದರೆ ಪದಗಳನ್ನು ಖಚಿತವಾದ ಕರಾರುವಕ್ಕಾದ ಅರ್ಥದಲ್ಲಿ ಉಪಯೋಗಿಸಬೇಕು.

ಭೂಮಿ ಮ್ಯಾಲ ನೀಚರ ಹೆಚ್ಚಾಗ್ಯಾರ
ಹಿಂಗ್ ಕೊಟ್ಟ ಹಿಂಗ್ ಇಲ್ಲ ಅಂತಾರ
ವಿಚಾರ ಮಾಡಿ ನಡೀರಲೇ[೨೩೯]

ಕಡೆಗಾಲ ಬಂದೈತಿ ಕರ್ಮ ಮಾಡಬ್ಯಾಡರಲೇ
ಆಚಾರ ಬಿಟ್ಟು ನೀಚ ಬುದ್ಧಿ ಮಾಡಬ್ಯಾಡರೀ
ಋಣಭಾರಕ್ಕ ಅಂಜಿ ಹೋಗರಲೇ[೨೪೦]

ಹಿಂದಕ್ಕ ಹತ್ತು ಮುಂದಕ್ಕ ಹನ್ನೊಂದು
ಇದರ ಅಂದಾವ ನಮ್ಮ ಆಳುಮಕ್ಳು ಬಲ್ಲರು[೨೪೧]

ಹೀಗೆ ಸರಿಯಾದ ಆಲೋಚನೆಗೆ ಹೇಳಿಕೆಗಳು ಪ್ರೇರಣೆ ಕೊಡುತ್ತವೆ. ಅವು ಸಮಾಜದ ಸದಸ್ಯರಲ್ಲಿ ನೀತಿ ನಿಯಮಗಳನ್ನು ಬೆಳೆಸಲು ಒಳ್ಳೆಯ ಭಾವನೆಗಳನ್ನು ಹುಟ್ಟಿಸುತ್ತವೆ. ನಮ್ಮ ನಾಡಿನ ವಿಷಯದಲ್ಲಿ, ಊರಿನ ವಿಷಯದಲ್ಲಿ, ಗ್ರಾಮದ ಅಭಿವೃದ್ಧಯಲ್ಲಿ ಪ್ರೇಮವನ್ನೂ, ನಮ್ಮ ಧರ್ಮದಲ್ಲಿ ಆಸಕ್ತಿಯನ್ನು ಸಮಾಜದ ಶ್ರೇಯೋಭಿವೃದ್ಧಿಯನ್ನು ಬೆಳೆಸುತ್ತವೆ ಎಂಬುದು ಬಹಳ ಮುಖ್ಯವಾದ ಸಂಗತಿ. ಒಡೆಯರರು ತಮ್ಮ ಅನುಭವದ ಸಾರವನ್ನು ಸಮಾಜದ ಜನಕ್ಕೆ ನೀಡುತ್ತಾರೆ. ಅವರ ಅಭಿಪ್ರಾಯಗಳನ್ನು ಒಪ್ಪುವುದು ಬಿಡುವುದು ಎರಡನೆಯ ಮಾತು. ಅದಕ್ಕೆ ಬೇಕಾದಂತಹ ನೀತಿ ಪಾಠವನ್ನು ಅವರ ಹೇಳಿಕೆಗಳು ತಿಳಿಸುತ್ತವೆ. ಭಕ್ತರು ಯೋಚಿಸಬೇಕು. ಹೇಳಿಕೆಗಳನ್ನು ಅನುಸರಿಸಬೇಕು ಎಂಬುದು ಮುಖ್ಯ. ಸಮಾಜದ ಸದಸ್ಯರಲ್ಲಿ ಮಮಕಾರ, ಪೂರ್ವಾಗ್ರಹ ಪಕ್ಷಪಾತ, ಅಸೂಯೆ, ಭಯ, ಉತ್ಸಾಹ, ಉದಾತ್ತ ಭಾವನೆ, ಧಾರ್ಮಿಕ ಆಸಕ್ತಿ, ವ್ಯಕ್ತಿ ಸ್ವಾತಂತ್ರ್ಯ, ಸತ್ಯ ಸೌಂದರ್ಯಗಳ ಮೇಲಿನ ಪ್ರೀತಿ ಇವೆಲ್ಲ ಮಾನಸಿಕ ಕ್ರಿಯೆಗಳು ನಮ್ಮ ಬೌದ್ಧಿಕ ಜೀವನದಲ್ಲಿ ತುಂಬಾ ಪರಿಣಾಮಕಾರಿಯಾಗಿದೆ. ಇವುಗಳನ್ನು ಕುರುಬರ ಹೇಳಿಕೆಗಳು ತಿಳಿಸುತ್ತವೆ.

ಕುರುಬರ ಹೇಳಿಕೆಗಳಲ್ಲಿ ಗ್ರಹಿಕೆ ಮತ್ತು ಮಾತು ಬಹುಮುಖ್ಯ ಪಾತ್ರವಾಗಿಸುತ್ತವೆ. ಅವರ ಮಾತು ನೇರ ಮತ್ತು ಸ್ಪಷ್ಟವಾಗಿರುತ್ತವೆ. ಹಳ್ಳಿಯ ಜನರ ಅಥವಾ ಕೇಳುಗರ ಮನಸ್ಸಿನ ಇಂಗಿತ

ಒಡೆಯರರಿಗೆ ಚೆನ್ನಾಗಿ ಗೊತ್ತಿರುತ್ತದೆ. ಅವರ ಮಾನಸಿಕ ಮಟ್ಟಕ್ಕೆ ತಕ್ಕಂತಹ ಪದ ವಾಕ್ಯಗಳನ್ನು ಧ್ವನಿರೂಪಕ್ಕೆ ತಕ್ಕಂತೆ ಔಚಿತ್ಯಪೂರ್ಣ ಅರ್ಥ ತಿಳಿಸುವುದರ ಮೂಲಕ ಸತ್ವಪೂರ್ಣ ಅರ್ಥವನ್ನು ಗ್ರಹಿಸುವ ಶಕ್ತಿ ಬೆಳೆಯುತ್ತದೆ. ಅದಕ್ಕಾಗಿ ಒಡೆಯರರು ತಮಗೆ ಅನಿಸಿದ್ದನ್ನು ಸ್ಪಷ್ಟವಾಗಿ ಹೇಳುತ್ತಾರೆ ಅದನ್ನು ಕೇಳುಗರು ಅರ್ಥಮಾಡಿಕೊಂಡು ಆಲಿಸುವುದರ ಜೊತೆಗೆ ಹೇಳಿಕೆ ಕೊಡುವ ಅರ್ಥವನ್ನು ಗ್ರಹಿಸಿ ತಮ್ಮ ಬದುಕಿನಲ್ಲಿ ಅನ್ವಯಿಸಿಕೊಳ್ಳುತ್ತಾರೆ.

ತಪ್ಪದ ನಡಕೋರಿ ನಮ್ಮ ಬೀರಪ್ಪಗ
ಹಿಂದಾಗಡೆ ಮಂಗ್ಯಾ ಆಗಬ್ಯಾಡ್ರಿ
ನೀವು ನಡಕೊಂಡ್ರ ಬೀರಪ್ಪ
ನಿಮಗ ಬೇಕಾದ ಕೊಡತಾನ[೨೪೨]

ಎಂಬ ಹೇಳಿಕೆಯನ್ನು ನೋಡಿದಾಗ ಸಮಾಜದ ಸದಸ್ಯರು ಈ ಹೇಳಿಕೆಯನ್ನು ತಿಳಿದು ದೇವರ ಮೇಲಿನ ಶ್ರದ್ದೆ, ಭಕ್ತಿ ಮತ್ತು ಯಾವ ರೀತಿ ವ್ಯವಹರಿಸಬೇಕೆಂಬುದನ್ನು ಈ ಹೇಳಿಕೆ ಮನವರಿಕೆ ಮಾಡಿಕೊಡುತ್ತದೆ.

ಕುರುಬರ ಹೇಳಿಕೆಗಳು, ಹಾಲುಮತ ಸಮುದಾಯದ ಒಳಪದರುಗಳನ್ನು ನಿರೂಪಿಸಬಲ್ಲ ಶಕ್ತಿಯನ್ನು ಪಡೆದುಕೊಂಡಿವೆ. ಉದಾ: ಮಾಳಿಂಗರಾಯ, ಮೈಲಾರಲಿಂಗ, ಬೀರಪ್ಪ, ರೇವಣಸಿದ್ಧ ಇವರ ಕುರಿತು ಜಾತ್ರೆ ಉತ್ಸವಗಳಲ್ಲಿ ಹೇಳಿಕೆಗಳನ್ನು ಅರ್ಥಗರ್ಭಿತವಾಗಿ ಮತ್ತು ಮಾರ್ಮಿಕವಾಗಿ ನಡೆಯುತ್ತವೆ. ಅವುಗಳನ್ನು ಕೇಳಿದಾಗ ಭಯ, ಭಕ್ತಿ ಮತ್ತು ಗೌರವ ಮೂಡುತ್ತದೆ. ಮಕ್ಕಳಿಲ್ಲದವರು, ಮಕ್ಕಳಾಗದೇ ಕೊರಗುತ್ತಿದ್ದವರು ಸಹಜವಾಗಿಯೇ ಹಾಲುಮತ ದೈವಗಳಿಗೆ ಪೂಜೆ ಮಾಡುತ್ತಾರೆ. ಬಂಜೆತನದಿಂದ ಮುಕ್ತರಾಗಲು ಹವಣಿಸುತ್ತಾರೆ.

ಕೇಳೋ ಕೇಳೋ ಏ ತಮ್ಮಾ ಕೇಳೋ
ಕವಲ ಕಟ್ಟು ಈ ಸ್ವಾಮಾರ ನಿನ್ನ ನೆತ್ತಿಯ
ಬಾಗಿಲ ತೆರಿತತಿ ಏನ ಚಿಂತಿ ಮಾಡಬ್ಯಾಡ[೨೪೩]

ಎಂದು ಹಾಲುಮತ ದೈವದ ಒಡೆಯರರು ಹೇಳುತ್ತಾರೆ ದೇವರಿಗೆ ನಡೆದುಕೊಂಡರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ಸಮುದಾಯದಲ್ಲಿದೆ. ಹೇಳಿಕೆಯನ್ನು ಕೇಳುವವರು ದೈವದ ಆಶೀರ್ವಾದದಿಂದ ಸಂತಾನ ಭಾಗ್ಯ ಪ್ರಾಪ್ತವಾದರೆ ಆ ದೈವದ ಹೆಸರಿಡುತ್ತಾರೆ. ಉದಾ. ಕರಿಸಿದ್ದನ ಆಶಿರ್ವಾದದಿಂದ ಮಕ್ಕಳಾದರೆ ಸಿದ್ದಪ್ಪ, ಕರಿಸಿದ್ದಪ್ಪ, ಬೀರಪ್ಪನ ಆಶೀರ್ವಾದವಾದಿಂದ ಮಕ್ಕಳಾದರೆ ಬೀರಪ್ಪ, ಬೀರಲಿಂಗ, ಬೀರೇಶ್ವರ ಅದರಂತೆ ರೇವಣಸಿದ್ಧ, ಮಾಳಿಂಗರಾಯ, ಮಾಯಪ್ಪ, ಇಟ್ಟಪ್ಪ, ಹುಲ್ಲಪ್ಪ, ಚಂದಪ್ಪ ಇವರ ಕೃಪೆಯಿಂದ ಮಕ್ಕಳಾದರೆ ಹೇಳಿಕೆಯನ್ನು ಕೇಳುವವರು ಯಾವುದೇ ಸಮುದಾಯದವರೂ ಹಾಲುಮತ ದೈವದ ಹೆಸರಿಡುವುದು

ಸಾಮಾನ್ಯವಾಗಿದೆ. ಇದನ್ನು ಗಮನಿಸಿದಾಗ ಜನ ಸಾಮಾನ್ಯರಲ್ಲಿ ಹಾಲುಮತ, ದೈವಗಳ ಬಗ್ಗೆ ಇರುವ ಭಕ್ತಿ ಗೌರವದ ದ್ಯೋತಕವಾಗಿದೆ. ಅಷ್ಟೇ ಅಲ್ಲ ಸಂತಾನ ಭಾಗ್ಯವಾದರೆ ಆ ದಂಪತಿಗಳಿಗೆ ಪ್ರತಿವರ್ಷ ಹಾಲುಮತ ಸಮುದಾಯದ ಆ ದೈವಗಳ ಹಬ್ಬ ಉತ್ಸವ, ಜಾತ್ರೆಗಳಿಗೆ ತಪ್ಪದೇ ಹೋಗುತ್ತಾರೆ. ಇದರಂತೆ ಒಂದು ವೇಳೆ ಕರಿಸಿದ್ದಪ್ಪ, ಬೀರಪ್ಪ, ಮಾಳಿಂಗರಾಯ ಆ ಹಳ್ಳಿಗೆ ಬಂದರೆ ಸಂತಾನ ಭಾಗ್ಯವಾದ ದಂಪತಿಗಳು ಆ ದೈವವನ್ನು ತಮ್ಮ ಮನೆಗೆ ಆಹ್ವಾನಿಸಿ ಒಂದು ದಿನ ಉಳಿದುಕೊಳ್ಳುವಂತೆ ವ್ಯವಸ್ಥೆ ಮಾಡುತ್ತಾರೆ. ಆ ದೈವದ ಜೊತೆಗೆ ಬಂದಿರುವ ನೂರಾರು ಜನ ಆಳು ಮಕ್ಕಳ ಊಟ ತಿಂಡಿ (ಪ್ರಸಾದ) ವ್ಯವಸ್ಥೆ ಮಾಡುತ್ತಾರೆ. ತಾತ್ಪರ್ಯ ಇಷ್ಟೇ. ಸಂತಾನ ಭಾಗ್ಯವಾದ ದಂಪತಿಗಳು ಆ ದೈವದ ಕೃಪೆಯಿಂದ ನಮಗೆ ಮಕ್ಕಳಾದವು ಎಂಬುದರ ಗೌರವದ ದ್ಯೋತಕ ಇದಾಗಿದೆ. ಇದಲ್ಲದೆ ತಮಗೆ ಶಕ್ಯ ಇದ್ದಷ್ಟು ಕಾಣಿಕೆಯನ್ನು ಆ ದೈವಗಳಿಗೆ ಸಮರ್ಪಿಸಿ ದೈವದ ಪೂಜಾರಿಗಳಾದ ಒಡೆಯರರ ಆಶೀರ್ವಾದ ಪಡೆದುಕೊಳ್ಳುತ್ತದೆ. ಹೆಣ್ಣು ಮಕ್ಕಳು ಬಂಜೆತನದಿಂದ ಮುಕ್ತರಾಗಲು ಆತನಿಗೆ ಬೇಡಿಕೊಳ್ಳುತ್ತಾರೆ.

ನೀರು ಬಿಸಿ ಮಾಡಿ ಹಾಕರಲೇ
ಎಣ್ಣೆ ಬೆಣ್ಣೆಯಲಿ ತಿಕ್ಕರಿ
ವಿದ್ಯೆ ಬುದ್ದಿ ಕೋಡರಿ
ರಟ್ಟಿ ಗಟ್ಟಿ ಮಾಡ್ರಿ[೨೪೪]

ಎಂದು ಒಡೆಯರರು ಆ ದಂಪತಿಗಳಿಗೆ ಹರಸುತ್ತಾರೆ. ಆ ದಂಪತಿಗಳು ಉಡಿಯೊಡ್ಡಿ, ಸೆರಗೊಡ್ಡಿ ಅತ್ಯಂತ ವಿನಯದಿಂದ ಆ ಹಾಲುಮತ ದೈವಕ್ಕೆ ಕೋರುತ್ತಾರೆ.

ಎಪ್ಪಾ ಮಕ್ಕಳಿಲ್ಲದರ ಮನಸ ಮರಗತಿತ್ತು
ದಿನಕ ಎರಡು ಹೊತ್ತು
ಇಪತ್ನಾಲ್ಕು ತಾಸ ಮಳಿ ಸುರಿತಿತ್ತು
ದಡಬಡಿಸಿ ಸಿಡಿಲ ಬಂತ
ಹನ್ನೆರಡು ವರಸ ತಪಸ್ಸು ಮಾಡಿ
ನೀವು ಬೇಡಕೊಂಡ್ರಿ ಈಗ ನನಗ
ಅರು ಆತು ಚಿಂತಿ ಮಾಡಬ್ಯಾಡ್ರಿ
ನೆಂಪ ಆದಾಗ ನನ್ನ ಗುಡಿಗಿ ಬರ್ರಿ
ಒಡಿರಿ ಭಂಡಾರ[೨೪೫]

ಆ ದಂಪತಿಗಳ ತಪಸ್ಸು ಹಾಗೂ ಶ್ರದ್ಧೆಗೆ ಹಾಲುಮತ ದೈವವು ಮೆಚ್ಚಿ ಪುತ್ರ ಸಂತಾನ ಕೊಡುತ್ತಾನೆ. ಇದನ್ನು ಗಮನಿಸಿದಾಗ ಮನಃಶಾಸ್ತ್ರೀಯವಾಗಿ ಇವುಗಳನ್ನು ನೋಡಿದಾಗ ಭಕ್ತ ಮತ್ತು ಭಗವಂತ ಇವರ ನಡುವಿನ ಸಂಬಂಧ ಗುರು-ಶಿಷ್ಯರ, ತಂದೆ-ಮಕ್ಕಳ ಸಂಬಂಧವನ್ನು ಮೀರಿಸುವುದಾಗಿದೆ. ಅವರ ಮಾನಸಿಕ ಕ್ರಿಯೆ ಗಮನಿಸಿದಾಗ ಭಕ್ತರು ತಮ್ಮ ಸುಖ ದುಃಖಗಳನ್ನು ಬದುಕಿನ ಕಷ್ಟ ನಷ್ಟಗಳನ್ನು ನಿಸ್ಸಂಕೋಚವಾಗಿ ದೇವರಿಗೆ ಮೊರೆ ಇಡುತ್ತಾರೆ.

ಅಂದರೆ ಮಾನವೀಯ ಸಂಬಂಧಗಳು ಆಯಸ್ಸು ಪೂರ್ಣವಾಗಿ ಉಳಿಯುತ್ತವೆ. ಹೆಚ್ಚಾಗಿ ಕೃಷಿ ಸಂಸ್ಕೃತಿಯನ್ನು ಬಿಂಬಿಸುವ ಹೇಳಿಕೆಗಳಿಗೆ ಪಶುಗಳೇ ಪ್ರಧಾನ ಸಂಪತ್ತು, ಪಶುಪಾಲನೆಯೇ ಗುರುವಿನ ಸೇವೆ ಎಂದು ಅವರು ನಂಬಿರುತ್ತಾರೆ.

ಗುರುವಿನ ಕಿಲ್ಲಾರ ಈಗ
ನಮ್ಮ ಹತ್ತೇಕ ಬಂದತಿ
ಮರಗಬ್ಯಾಡ್ರಿ ತಮ್ಮಾ
ಅದದ್ದೆಲ್ಲ ಚಲೋ ಅಕ್ಕತಿ
ಹೊಟ್ಟಿ ತುಂಬತೈತಿ ನೆತ್ತಿಗೆ ಎಣ್ಣಿ ಅಕ್ಕತಿ
ಹುಣ್ಣಿವಿ ಚಂದ್ರನಂಗ ಮಕ್ಕಳ ಬೆಳೀತಾರ
ಜೋಡಿ ದೀಪ ಮನ್ಯಾಗ ಹಚ್ಚತೀರಿ[೨೪೬]

ಇಂತಹ ಹೇಳಿಕೆಗಳು ಭಕ್ತರ ಮಾನಸಿಕ ಕ್ರಿಯೆಯನ್ನು ಭಗವಂತನೆಡೆಗೆ ಸೆಳೆಯುತ್ತವೆ. ಪುಟ್ಟ ಪುಟ್ಟ ವಾಕ್ಯಗಳ ಹೇಳಿಕೆಗಳು ಭಕ್ತರ ಮನಸ್ಸನ್ನು ಹೃದಯವನ್ನು ಗೆದ್ದು ಭಗವಂತನಿಗೆ ಸಮರ್ಪಣಾ ಮನೋಭಾವದಿಂದ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತವೆ. ಈ ಕುರುಬರ ಹೇಳಿಕೆಗಳಲ್ಲಿ ಅಚ್ಚ ಕನ್ನಡ ಮಾತುಗಳೇ ಅಧಿಕ. ಒಂದು ಕ್ರಿಯೆಯನ್ನು ಸಾಮಾಜಿಕವಾಗಿ ಮತ್ತು ಮನಃಶಾಸ್ತ್ರಿಯವಾಗಿ ನೋಡಿದಾಗ ಭಕ್ತರಲ್ಲಿ ಮಾನಸಿಕ ಸ್ಥೈರ್ಯವನ್ನು ಮಾನಸಿಕ ಧೈರ್ಯವನ್ನು ನೈತಿಕತೆಯನ್ನು ಗಟ್ಟಿಗೊಳಿಸುವುದೇ ಆಗಿದೆ. ಇವುಗಳಲ್ಲಿ ಇನ್ನೊಂದು ಅಂಶ ಗೋಚರವಾಗುತ್ತದೆ. ಅವರ ಮಾತುಗಳಲ್ಲಿ ಪರಸ್ಪರ ಸಂವಾದ ರೂಪದಲ್ಲಿ ಇರುತ್ತದೆ. ಭಕ್ತ ಮತ್ತು ಭಗವಂತ ಅವರದ್ದೇ ಆದ ಆಡು ನುಡಿಯಲ್ಲಿ ಮಾತನಾಡಿಕೊಳ್ಳುತ್ತಿದ್ದಾರೇನೋ ಎಂಬ ಭಾಸ ಸಹಜವಾಗಿ ಗೋಚರಿಸುತ್ತದೆ.

ಕಡಿಬಿ ಮ್ಯಾಲ ದಡ್ಡಿ ಐತಿ
ನಾ ಹಾಕಿದ ದಡ್ಡಿ
ಹೆಗಲ ಮ್ಯಾಲ ಬಿಳಿ ಕಂಬಳಿ ಹೊತಗೊಂಡ
ಕೈಯಾಗ ನೇಮದ ಬೆತ್ತ ಒಡಕೊಂಡು

ನಾ ಕುರಿ ಕಾಯತಿನಿ ಹೇಳತಿನ ಕೇಳಲೇ
ನಾ ಕಾಯು ದೊಡ್ಡ್ಯಾಗ ಕುರಿ ಹಿಕ್ಕಿ ಬಿಳತಾವ
ಹಾಕರಲೇ ನಿಮ್ಮ ಹೊಲಕ
ನೋಡ ಹೆಂಗ್ ಫಸಲ ಬರತತಿ
ಹಿಡಿ ಭಂಡಾರ ಗಾಣಮಣಿ[೨೪೭]

ಒಡೆಯರರ ಮಾನಸಿಕ ಅಭಿವ್ಯಕ್ತಿ ಭಕ್ತರನ್ನು ಒಂದು ಕ್ಷಣ ರೋಮಾಂಚನಗೊಳಿಸುತ್ತದೆ. ಮನಸ್ಸಿನ ಭಾವನೆಗಳು ಭಾವ ಮತ್ತು ಲಯಕ್ಕೆ ಅನುಕೂಲವಾಗುವಂತೆ ಪದಗಳನ್ನು ಎಳೆದೋ, ಮೆಲಕುಗೊಳಿಸಿಯೋ ಉಚ್ಚರಿಸುತ್ತಾರೆ. ಇದರಿಂದ ಭಾವನೆಗಳು ವೈವಿದ್ಯಮಯವಾಗಿ ಅಭಿವ್ಯಕ್ತಿಸಲು ಸಾಧ್ಯವಾಗುತ್ತದೆ. ಕರಿ ಕಂಬಳಿ, ಕುರಿದೊಡ್ಡಿ, ನೇಮದ ಬೆತ್ತ, ಬಗ್ಗಿಸಿ ಹೂಡೋದು, ಕುರಿ ಹಿಕ್ಕಿ, ಫಸಲ ಬರ್ತಾವು ಇಂತಹ ಮಾತುಗಳನ್ನು ಕೇಳಿದಾಗ ಭಕ್ತರಿಗೆ ಒಡೆಯರರ ಜೊತೆಗೆ ಒಂದು ಆತ್ಮೀಯ ಸನ್ನಿವೇಶ ನಿರ್ಮಾಣವಾಗುತ್ತದೆ. ಅಲ್ಲಿ ಹಿತೋಪದೇಶವಿದೆ. ನೀತಿಯೂ ಇದೆ. ಬಗ್ಗಿ ಬರಲೇ ಎಂದಾಗ ವಿನಯವನ್ನು ಸೂಚಿಸುತ್ತದೆ. ಹೇಳಿಕೆಗಳನ್ನು ಒಂದು ನೆಲೆಯಿಂದ ಮಾತ್ರ ನೋಡಲಾಗದು ಅದರ ಬಳಕೆಯ ವಿವಿಧ ಸಾಧ್ಯತೆಗಳನ್ನು ಮನಃಶಾಸ್ತ್ರೀಯವಾಗಿ ನೋಡಿದಾಗ ಅವುಗಳ ಮುಂದಿರುವ ಸಾಧ್ಯತೆಗಳು ವ್ಯಾಪಕತೆ ಕಂಡುಬರುತ್ತದೆ. ಭಕ್ತರಿಗೂ ಹಾಲುಮತ ದೈವದ ಬಗ್ಗೆ ವ್ಯಾಪಕವಾದ ಮತ್ತು ಆಳವಾದ ನಂಬಿಕೆ ಇದ್ದೇ ಇರುತ್ತದೆ. ಆ ದೈವಗಳಿಗೆ ಹಾಲುಮತದವರಷ್ಟೇ ಅಲ್ಲ ಬಹುತೇಕ ಎಲ್ಲ ಸಮುದಾಯದವರೂ ನಡೆದುಕೊಳ್ಳುತ್ತಾರೆ. ಹುಣ್ಣಿಮೆ ಅಮವಾಸ್ಯೆ ದಿವಸ ದೇವರಿಗೆ ಮೀಸಲಾದ ಎಡೆ ಮಾಡಿಕೊಂಡು ಆ ದೇವಸ್ಥಾನಗಳಿಗೆ ಹೋಗುತ್ತಾರೆ. ಆಗ ಅವರವರಲ್ಲಿಯೇ ಮಾತನಾಡುವ ರೀತಿ ಮಾರ್ಮಿಕವಾಗಿದೆ. ಉದಾ: ಬೀರಪ್ಪನ ಮಹಿಮೆಯನ್ನು ಹೇಳುವಾಗ ಭಕ್ತರ ಭಾವನೆ ಹೀಗಿದೆ.

ಎಪ್ಪಾ ಬೀರಪ್ಪ ಮಕ್ಕಳಿಲ್ಲದವರಿಗೆ
ಮಕ್ಕಳಾ ಕೊಡತಿ
ಕಾಲ ಇಲ್ಲದವರಿಗೆ ಕಾಲ ಕೊಟ್ಟಿರಿ
ಕುರುಡ ಇದ್ದವಗ ಕಣ್ಣ ಕೊಟ್ಟಿರಿ
ಕಿವಡಗ ಕಿವಿ ಕೊಟ್ಟಿರಿ ಎಪ್ಪಾ
ನಾನಾತರ ಬ್ಯಾನಿ ಬಂದವರ ಪಾರಮಾಡಿರಿ
ನಿನಗ ಬಂದ ಭೆಟ್ಟಿ ಆಗೂದು ನಮ್ಮ ಧರ್ಮ
ಎಪ್ಪಾ ಕಾಲೀಲೆ ಅಲ್ಲ ತಲೀಲೆ ಬರ್ತಿವಿ[೨೪೮]

ಇಂತಹ ನಿತ್ಯ ಬದುಕಿನ ಭಾವನೆಗಳನ್ನು ಮನಸಿನ ಇಂಗಿತವನ್ನು ಸರಳವಾದ ಶೈಲಿಯಲ್ಲಿ ಹೇಳುವ ರೀತಿ ಮನೋಜ್ಞವಾಗಿದೆ. ಕುರುಬರ ಕಂಬಳಿಯ ಬಗ್ಗೆ ವಿಶೇಷ ಗೌರವ ಸಾಮಾನ್ಯವಾದ ಒಡೆಯರರು ಕಂಬಳಿಯ ಮೇಲೆ ಕುಳಿತು ಹೇಳಿಕೆ ಹೇಳುತ್ತಾರೆ. ಅದು ಅವರ ಪವಿತ್ರ ಪೀಠ ಆ ಕಂಬಳಿಯ ಮಹತ್ವ ಒಡೆಯರರಿಗೆ ಮತ್ತು ಭಕ್ತರಿಗೆ ಚನ್ನಾಗಿ ಗೊತ್ತು.

ಕೇಳರಲೇ ಕೇಳ್ರಿ
ಕೇಳರಪ್ಪೋ ಕೇಳ್ರಿ
ಕಂಬಳಿ ಮ್ಯಾಲ ಕುಂತ
ಇಟ್ಟಪ್ಪ ಹೇಳತಾನ
ನನ್ನ ಕಂಬಳಿ ಅಂದ್ರ
ಇಟ್ಟಪ್ಪನ ಸದರ ಇದ್ದಾಂಗ
ಮೂಲ ಮಂತ್ರಕ ಮೇಲಾದ ಕಂಬಳಿ
ಬೀರಪ್ಪ ಇಟ್ಟಪ್ಪ ಹೊರುವ ಕಂಬಳಿ
ಕಡಬಿ ಮ್ಯಾಲ ಇದ್ದ ಕಂಬಳಿ
ಬೀಸ್ಯಾಡಿ ಮಳಿ ತರುವ ಕಂಬಳಿ
ಕಂಬಳಿ ಮ್ಯಾಲ ಕುಂತ ಆಡಿದ ಮಾತ
ಹುಸಿ ಹೋಗುದಿಲ್ಲ ಹೊಡಿರಲೇ ಡೊಳ್ಳು[೨೪೯]

ಒಡೆಯರರ ಕಂಬಳಿಗೆ ಅದರದೇ ಆದ ಸಾಂಸ್ಕೃತಿಕ ಮಹತ್ವವಿದೆ. ಮೇಲಿನ ಹೇಳಿಕೆಯಲ್ಲಿ ಕಂಬಳಿ ಎನ್ನುವ ಪದ ಪುನಃ ಪುನಃ ಆವೃತ್ತಿಯಾದರೂ ಅದು ಹೊತ್ತುಕೊಳ್ಳುವ ಭಾರ ದೊಡ್ಡದಾಗಿದೆ. ಈಗಲಾದರೂ ಹಳ್ಳಿಗಳಲ್ಲಿ ಕುರುಬರಲ್ಲಿ ಅಥವಾ ಇತರ ಸಮುದಾಯದವರಲ್ಲಿ ಕಂಬಳಿಗೆ ಪವಿತ್ರ ಸ್ಥಾನವಿದೆ. ಮಗು ಹುಟ್ಟಿದಾಗ, ಹೆಸರಿಡುವಾಗ, ಜೋಗುಳ ಹಾಡುವಾಗ, ಮೊದಲ ಬಾರಿ ಮಗುವನ್ನು ತೊಟ್ಟಿಲಕ್ಕೆ ಹಾಕುವಾಗ, ಮದುವೆ ನಿಶ್ಚಯ ಮಾಡುವಾಗ, ಹಾಸಕ್ಕಿ ಹೊಯ್ಯುವಾಗ, ಬೀಗ ಬೀಗರು ಎದುರುಗೊಳ್ಳುವಾಗ, ಅಕ್ಕಿಕಾಳ ಬೀರುವಾಗ, ಬಿತ್ತುವಾಗ, ಹಂತಿ ಹೊಡೆಯುವಾಗ, ರಾಶಿಯನ್ನು ಮನೆಗೆ ತರುವಾಗ ಮುಂತಾದ ಎಲ್ಲ ಮಾನವನ ಕ್ರಿಯಾ ಚಟುವಟಿಕೆಗಳಿಗೆ ಕಂಬಳಿ ಬೇಕೇ ಬೇಕು. ಹೇಳಿಕೆಯಲ್ಲಿ ಬರುವಂತೆ ಬೀಸಾಡಿ ಮಳಿ ತರುವ ಕಂಬಳಿ ಎಂಬ ಮಾತು ತುಂಬಾ ಧ್ವನಿ ಪೂರ್ಣವಾಗಿದೆ. ಈಗಲಾದರೂ ಹಳ್ಳಿಯ ಕಡೆಗೆ ಕುರುಬರು ಕಂಬಳಿ ಬೀಸಿದರೆ ಮಳೆಯಾಗುತ್ತದೆ ಎಂಬ ಭಾವನೆ ಬಲವಾಗಿದೆ. ಶಿಥಿಲತೆ, ಸಹಜತೆ, ಪುನರಾವರ್ತನೆ ಇವು ಹೇಳಿಕೆಗಳ ಸಾಮಾನ್ಯ ಲಕ್ಷಣಗಳಾಗಿವೆ. ಒಂದು ಘಟನೆಯ

ಸುತ್ತ ವಿವರಗಳನ್ನು ಹೇಳುವಾಗ ಮಾಹಿತಿಗಳನ್ನು ಕೊಡುತ್ತಾ ಹೋಗುವುದು ಕೆಲವು ಹೇಳಿಕೆಗಳ ಅಭಿವ್ಯಕ್ತಿಯ ಕ್ರಮವಾಗಿದೆ. ಅಂತಹ ಸಂದರ್ಭದಲ್ಲಿ ಆ ಪ್ರದೇಶದ ವ್ಯವಹಾರಿಕ ಕನ್ನಡ ಬಳಕೆಯಾಗುತ್ತದೆ.

ಹವಳ ಮುತ್ತ ತೂಕಾ ಮಾಡೊದ್ರಾಗ
ಹವಳ ಒಂದ ಗುಂಜಿ ಹೆಚ್ಚಾತು
ಮುತ್ತ ಒಂದು ಗಂಜಿ ಕಡಮಿಯಾಯ್ತಿ
ಬೀರಪ್ಪನ ಪಾಲಕಿ ಹೇಳಿತಿತ್ತು
ಆಗ ಮಿರಗ ಮಿಂಚತಿತ್ತು ಆರಿದ್ರಾ ಬರ್ತಿತ್ತು
ಊರಿಗೆ ಮಳಿ ಸಂಪನ್ನ ಆಗತತಿ[೨೫೦]

ಇಂತಹ ಹೇಳಿಕೆಗಳ ಅರ್ಥಗಳು ತಟ್ಟನೆ ಅರ್ಥವಾಗುವುದಿಲ್ಲ. ಅವುಗಳನ್ನು ಸಂದೇಹದಿಂದ ನೋಡಬೇಕಾಗುತ್ತದೆ. ಒಗಟಿನ ರೂಪದಲ್ಲಿ ಅಥವಾ ಬೆಡಗಿನ ರೂಪದಲ್ಲಿ ಇರುವ ಹೇಳಿಕೆಗಳನ್ನು ಮನಃಶಾಸ್ತ್ರೀಯ ನೆಲೆಯಲ್ಲಿಯೇ ನೋಡಬೇಕಾಗುತ್ತದೆ. ಹೇಳಿಕೆಗಳಲ್ಲಿ ಆಯಾ ಸಂದರ್ಭದ ಹಿನ್ನಲೆಯಲ್ಲಿ ಗಮನಿಸಿದಾಗ ಸಮಾಜದಲ್ಲಿ ಆರೋಗ್ಯಕರ ವಾತಾವರಣವನ್ನು ಸೃಷ್ಟಿಸುವುದೇ ಆಗಿದೆ. ಆಗ ಒಡೆಯರರು ಸಸ್ಯ ಪ್ರತಿಮೆಳನ್ನು, ಪ್ರಾಣಿ ಪ್ರತಿಮೆಗಳನ್ನು, ಸಾಮಾಜಿಕ ಪ್ರತಿಮೆಗಳನ್ನು ಬೆಡಗಿನ ರೂಪದಲ್ಲಿ ತರುತ್ತಾರೆ. ಉದಾಹರಣೆ

– ಕೋಳಿ ಮರಿಗಳು
  ಗಾಳಿಗೆ ಇದಿರಾಗಿ
  ಪುಕ್ಕ ಎತ್ತಿ ನಿಂತಕೊಂಡರೆ

– ಗಾಳಿಗೆ ವಿರುದ್ದ ದಿಕ್ಕಿನಿಂದ ಮೋಡಬಂದರೆ
– ಮುಸ್ಸಂಜೆಯಲ್ಲಿ ಗೂಗೆಗಳು ಕೂಗಿದರೆ

ಮಳೆಯಾಗುತ್ತದೆ ಎಂಬ ಪ್ರತೀತಿ ಇದೆ. ಮೇಲಿನ ವಾಕ್ಯಗಳು ಹೇಳಿಕೆಗಳ ಮಧ್ಯಭಾಗದಲ್ಲಿ ಬಂದು ಅರ್ಥ ಪುಷ್ಟಿಕೊಡುತ್ತವೆ. ಎಂಬುದು ಬಹಳ ಮುಖ್ಯವಾದ ಸಂಗತಿ.

ಎಲೇ ಮಗನ ಹಾರಲಾಕ ರಾಮಣ ಬಾಣ ಅಲ್ಲ
ತಿರಗಲಾಕ ಕಾಮನ ಬೂದಿ ಅಲ್ಲ
ನಡು ಗದ್ದಿಗೆ ಎದ್ದಿತು

ಅಲಕನೂರ ಅಗಸಿ ಇದ್ದಿಲಾಯ್ತು
ಚಿಂಚಲಿ ಅಗಸಿಗೆ ಬೆಂಕಿ ಹತ್ತಿತು
ಎಲೇ ಮಗನ ಪಕ್ಕ ಇಲ್ಲದ ಹಕ್ಕಿ
ಲೆಕ್ಕ ಇಲ್ಲದ ಬಂತು
ದಕ್ಕೆ ಆಗದಂಗ ತೆಕ್ಕ್ಯಾಗ ಹಿಡಿದಿ
ತೆಕ್ಕ್ಯಾಗ ಹಿಡಿದಿ ಎಲ್ಲೋ ತಮ್ಮಾ[೨೫೧]

ಇಂತಹ ಹೇಳಿಕೆಗಳನ್ನು ಮನಃಶಾಸ್ತ್ರಿಯ ನೆಲೆಯಲ್ಲಿ ವಿಶ್ಲೇಷಣೆ ಮಾಡಿದಾಗ ಅವರು ಕೊಡುವ ಶಬ್ದ ಚಿತ್ರಗಳು ಅರ್ಥಪೂರ್ಣವಾಗಿವೆ. 'ತಿರುಗಲಿಕ್ಕೆ ರಾಮಣ ಬಾಣ ಅಲ್ಲ' ಎಂಬ ಮಾತನ್ನು ವಿಶ್ಲೇಷಣೆ ಮಾಡಿದರೆ ರಾಮನ ಬಾಣ ತನ್ನದೇ ಆದಂತಹ ವ್ಯಾಪಕತೆಯನ್ನು ಪಡೆದುಕೊಂಡಿದೆ. ಕಾಮನ ಬೂದಿಯೂ ಅಷ್ಟೇ ಎಲ್ಲರಿಗೂ ಸಿಗುತ್ತದೆ. ಕುರುಬರ ಹೇಳಿಕೆಗಳು ಅವುಗಳಂತೆ ಅಲ್ಲ ಎಂಬುದು ಇದರ ಮತಿತಾರ್ಥವಾಗಿದೆ. ಅದರಂತೆ ಹಕ್ಕಿಗಳಿಗೆ ಪಕ್ಕ ಇಲ್ಲದೇ ಇದ್ದಾಗ ಮನುಷ್ಯನ ಬದುಕು ಒಂದು ತನ್ನದೇ ಆದಂತಹ ವೈಶಿಷ್ಟತೆ ಇಲ್ಲದೇ ಇದ್ದಾಗ, ನಿರ್ಧಿಷ್ಟ ತಿಳುವಳಿಕೆ ಇಲ್ಲದೇ ಇದ್ದಾಗ ಅವನ ಜೀವನ/ಬದುಕು ಹಾಳಾಗುವ ಸಂಭವ ಹೆಚ್ಚು ಆ ರೀತಿ ಅಗಬಾರದೆಂದು ಕುರುಬರ ಹೇಳಿಕೆಗಳು ವಿದ್ಯಾವಂತರಿಗೆ, ಅವಿದ್ಯಾವಂತರಿಗೆ ಅಷ್ಟೆ ಅಲ್ಲದೇ ಸಾಮಾನ್ಯ ಜನರಿಗೂ ತಿಳುವಳಿಕೆಯನ್ನು ಕೊಡುತ್ತವೆ. ಇಂತಹ ಹೇಳಿಕೆಗಳನ್ನು ಕಲೆ ಹಾಕಬಹುದು.

- ಕಳ್ಳಿಗೆ ಕಳ್ಳಿ ತೊಡಕ ಬಿದ್ದಿತೋ
- ಅರ್ಗುಣ ಅಳಿದು ಮೂರ್ಗುಣ ತಿಳಿದು
- ನರಿ ಹೊಕ್ಕಂಗ ನೋಡೋ ಕಬ್ಬಿನ ಪಡಕ
- ಮಾಯದ ಬಜಾರ ಯಾರಿಗೆ ಬಿಟ್ಟಿಲ್ಲೋ
- ತ್ವಾಳ ಹೊಕ್ಕಂಗ ಕುರಿ ಹಿಂಡಕ
- ಎಡದಲ್ಲಿ ಎಳಿಗಾಳಿ, ಸುಳಿದಲ್ಲಿ ಸುಳಿಗಾಳಿ

ಈ ಹೇಳಿಕೆಗಳನ್ನು ಭಕ್ತ ಭಗವಂತನ ಮನಸ್ಥಿತಿಯಲ್ಲಿ ಮಾನಸಿಕ ನೆಲೆಯಲ್ಲಿ ಕೆಲವು ಭರವಸೆಯ ಬೀಜಗಳನ್ನು ಬಿತ್ತುತ್ತವೆ. ಅವು ಹೃದಯಸ್ಪರ್ಶಿಯಾದ ರಾಗ ಭಾವನೆಗಳಿಗೆ ಕಾರಣವಾಗಿವೆ. ಇಂತಹ ಹೇಳಿಕೆಗಳು ಅನುಭವದ ನೆಲೆಯಿಂದ ಮೂಡಿಬಂದಿವೆ. ಅವುಗಳಲ್ಲಿ ಹಲ ಕೆಲವು ಹೊಚ್ಚ ಹೊಸತನದಿಂದಲೂ ತುಂಬಿದ ಶಕ್ತಿಯಿಂದಲೂ ಶೋಭಿಸಿವೆ.

- ಹಿರಿಯರಿಲ್ಲದ ಮನಿತನಾ ಅಲ್ಲ ನೋಡಾ
  ಗುರು ಇಲ್ಲದ ಮಠಾ ಸುಳ್ಳೋ

- ಗುರುವಿನ ಹೊರತು ದಾರಿ ಸಿಗುವುದಿಲ್ಲೋ ಮಳ್ಳಾ
- ಗುರು ಮಾರ್ಗ ಮರತ್ಯಾಕೋ
- ಅರುವಿಟ್ಟು ನಡದರ

ಮಾನವ ಜನ್ಮ ಗಟ್ಟಿ
ತಿಳಕೊಂಡು ನಡದರ
ಮುಕ್ತಿ ಆಗೋದು ಗಟ್ಟಿ
ಜ್ಞಾನಿಗಳು ಇರಬೇಕೋ ನಮ್ಮನೆರೀ[೨೫೨]

ಸೂತ್ರ ಪ್ರಾಯವಾದ ಇಂತಹ ಅನುಭವದ ಮಾತುಗಳು, ನೀತಿವಾಕ್ಯಗಳು ಬಳಕೆಯಾಗಿವೆ. ಈ ಸಾಲುಗಳ ಅರ್ಥ ಲಯಕ್ಕೆ ಅನುಗುಣವಾಗಿ ಪುನರ್‌ವಿನ್ಯಾಸಗೊಂಡಿವೆ. ಸಂವಾದದ ನೆಲೆಯಿಂದ ಔಚಿತ್ಯಪೂರ್ಣವಾಗಿ ಬಳಕೆಯಾಗಿವೆ.

ಗ್ರಾಮೀಣ ಸಂಸ್ಕೃತಿ ಹಳ್ಳಿಯ ನಡೆ ನುಡಿ, ಆಚಾರ-ವಿಚಾರ ಇವುಗಳು ಕುರುಬರ ಹೇಳಿಕೆಗಳಲ್ಲಿ ಅಭಿವ್ಯಕ್ತವಾಗಿವೆ. ಹಳ್ಳಿಗಳಲ್ಲಿ ಕೌಟುಂಬಿಕ ಕಲಹ, ಊರಿನ ಸಮಸ್ಯೆಗಳು ಇತ್ಯಾದಿಗಳಿದ್ದರೆ ಹಳ್ಳಿಯ ದೈವದವರು ಹಾಲುಮತ ದೈವಗಳಿಗೆ ಮೊರೆಹೋಗುತ್ತಾರೆ. ಒಡೆಯರರು ಊರಿನ ಎಲ್ಲ ಸಮಸ್ಯೆಗಳನ್ನು ಆಲಿಸಿ ಒಂದು ತೀರ್ಪು ಕೊಡುತ್ತಾರೆ. ಹೊಂದಕೊಂಡ ಹೋಗ್ರಿ ವ್ಯಾಜ್ಯ ಮುಂದ ಹೋಗಬ್ಯಾಡ್ರಿ ಎಂಬ ತಿಳುವಳಿಕೆಯ ಸಂದೇಶವನ್ನು ಒಡೆಯರರು ಸೂಕ್ಷ್ಮವಾಗಿ ಹೇಳುತ್ತಾರೆ. ಅದನ್ನೆ ಅವರದೇ ಆದ ಪರಿಭಾಷೆಯಲ್ಲಿ ಹೇಳುವದಿದೆ.

ಬೂದಿಗೊಪ್ಪ, ಮಾಳಿಂಗರಾಯನ ಮುಂದ
ಖರೇ ಹೇಳರಲೇ ತಗಲ ಮಾತಾಡಬ್ಯಾಡ್ರಿ
ಮುರದ ಹಾಕತಾನ
ಖರೇ ಹೇಳಿದ್ರ ಕಾಪಾಡತಾನ
ಹೇಳ್ರೀ ಹೇಳ್ರೀ ಮಗನ ಜುಟ್ಟು ಕಿತ್ತ ಬಾಯಾಗ ಕೊಡತನ
ಹಿಡಿ ಭಂಡಾರ[೨೫೩]

ಎಂಬ ಹೇಳಿಕೆಯನ್ನು ಗಮನಿಸಿದಾಗ ದೈವದವರು ಮಾಳಿಂಗರಾಯನ ಮಾತನ್ನ ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ತಮ್ಮ ಮನಸ್ಸಿನ ಭಾವನೆಗಳನ್ನು ಯಾವುದೇ ಸಂಕೋಚವಿಲ್ಲದೇ ಹೇಳಿ ಎಪ್ಪಾ ಈ ವರ್ಷ ಓಂಗಾಗೇತಿ ಎಲ್ಲಾ ನಿನ್ನ ಕೂಡೇತಿ, ಇದಕೊಂದ ಪರಿಹಾರ ಕೂಡು, ಊರಾಗ ಮಂದಿ ಗೂಳಿ ಹೊಂಟತಿ ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ಹೇಳಿಕೆಗಳಲ್ಲಿ ಒಂದು ನೀತಿ ಬೋಧನೆ ಇದೆ. ಯಾರಿಗೂ ತಾರತಮ್ಯ ಆಗದಂತೆ ಸಮಚಿತ್ತದಿಂದ ತಮ್ಮ ಅಭಿಪ್ರಾಯಗಳನ್ನು ಹೇಳುತ್ತಾರೆ. ಆಗ ದೈವದವರು ಹಣೆಯ ಮೇಲೆ ಭಂಡಾರವನ್ನು ಹಚ್ಚಿಕೊಂಡು ಕೇಳುತ್ತಾರೆ.

ಕೇಳ್ರಲೇ ಕೇಳ್ರೀ
ಬಡವರನ ಬಗ್ಗಸಬ್ಯಾಡರಿ
ಅವರಿಗೆ ಕೊಡುವುದ ಕೊಡ್ರಿ
ಇಲ್ಲದಿದ್ರ ಚಲೋ ಮಾಡೊದಿಲ್ಲ
ಬಾಳೆ ಮುರುದ ಮೂರಾಬಟ್ಟಿ ಆಗತೈತಿ
ತಿಳದ ನಡಕೋ[೨೫೪]

ಎಲೇ ಎಲೇ ತಂಗೀ ಏನ್ ಆಗೊದಿಲ್ಲ
ನಾಲ್ಕ ಅಮಾಸಿ ನನ್ನ ಗುಡ್ಯಾಗ ಇರ್ರಿ
ನನ್ನ ಪೌಳಿ ಸೇವಾ ಮಾಡ
ಬಡಕೊಂಡ ದೆವ್ವ, ಗಾಳಿ, ಧೂಳಿ ಪತಾ ಆಗಿ
ಹೊಕ್ಕತಿ ಹಿಡಿ ಭಂಡಾರ[೨೫೫]

ಎಲೇ ಮಕ್ಕಳಿರ್ಯಾ ಮೆಲ್ಲಕ ಮಾತಾಡ್ರಿ
ಎತ್ತ ಉಚ್ಚಿ ಹೋದ ಹಾಗೆ ಬ್ಯಾಡ
ಎದ್ದಾಗ ಜುಟ್ಟು ಹಿಡಿಬ್ಯಾಡರಲೇ
ಬಿದ್ದಾಗ ಕಾಲ ಹಿಡಿಬ್ಯಾಡರಲೇ
ಬಗ್ಗಿ ನಡಿರಲೇ[೨೫೬]

ಇಂತಹ ಹೇಳಿಕೆಗಳಲ್ಲಿ ಸಾಮಾಜಿಕ ಬದುಕಿನ ವೈಪರೀತ್ಯಗಳು, ವೈವಿಧ್ಯಗಳು ಹೆಪ್ಪುಗಟ್ಟಿವೆ. 'ಬಡವರನ್ನ ಬಗ್ಗಿಸಬ್ಯಾಡರಲೇ' ಎನ್ನುವಾಗ ಆ ಸಾಮಾಜಿಕ ಕಳಕಳಿಯನ್ನು ಗಮನಿಸಬೇಕು. ಹೇಳಿಕೆಗಳು ಯಾವಾಗಲೂ ರೀತಿ ನೀತಿ ಧರ್ಮ ನ್ಯಾಯದ ಪರವಾಗಿ ಇರುತ್ತವೆ. ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಅವುಗಳ ಭಾವ, ವೈವಿಧ್ಯ, ಭಾಷಾ ವೈವಿಧ್ಯ ಹೃದಯ ಸ್ಪರ್ಶಿಯಾಗಿದೆ. ಸಮುದಾಯದ ಬದುಕು ನಡೆದುಕೊಳ್ಳುವ ರೀತಿ ಹೃದಯಸ್ಪರ್ಶಿಯಾಗಿ ಮೂಡಿ ಬಂದಿದೆ. ಹೇಳಿಕೆಗಳಲ್ಲಿ ಭಾವ ತೀವ್ರತೆ, ಮಾನಸಿಕ ಒತ್ತಡ ಹೆಚ್ಚಿರುತ್ತದೆ. ಏಕೆಂದರೆ ಒಡೆಯರರು ಹೇಳಿಕೆಯನ್ನು ಹೇಳುವಾಗ ಬಾಹ್ಯ ಪ್ರಪಂಚವನ್ನು ಮರೆತಿರುತ್ತದೆ. ಧ್ವನಿ ತರಂಗಗಳು ಕಂಪನ ವಿಸ್ತಾರವನ್ನು ಅವಲಂಬಿಸಿರುತ್ತವೆ. ಅದರ ಭಾವನೆಗಳು ಸಮುದಾಯದ ಸಮಸ್ಯೆಗಳ ಪರಿಹಾರಕ್ಕೆ ಯತ್ನಿಸುತ್ತವೆ. ಅವುಗಳ ನೆನಪುಗಳು ಬಿಡಿ ಬಿಡಿಯಾಗಿ ಸರಪಳಿಯಂತೆ ಬೆಸೆದುಕೊಂಡಿರುತ್ತವೆ.

ಬದುಕಿನ ಪೂರ್ವಾನುಭವಕ್ಕೆ ಹೆಚ್ಚಿನ ಆದ್ಯತೆ ಕೊಟ್ಟಿರುತ್ತಾರೆ. ಹೊಸ ಜ್ಞಾನ ಹಳೆಯ ಅನುಭವದೊಂದಿಗೆ ಬೆಸೆದುಕೊಂಡಿರುತ್ತದೆ ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಕೆಲವು ಹೇಳಿಕೆಗಳು ಪ್ರಶ್ನೆಯೊಡನೆ ಬರುತ್ತವೆ.

ಭಕ್ತ – ಎಪ್ಪಾ ಮನ್ಯಾಗ ನೂರಾ ಎಂಟು ಸಮಸ್ಯೆಗಳು
ತಿನ್ನಾಕ ಒಂದ ಹೊತ್ತ ಕೂಳಕೂ ಗತಿ ಇಲ್ಲ
ಹೆಂಗ ಮಾಡ್ಲಿ

ಒಡೆಯರರು – ಚಿಂತಿ ಮಾಡಬ್ಯಾಡರಲೇ
ರಟ್ಟಿಮುರದ ರೊಟ್ಟಿ ತಿನ್ನರಿ
ಮಗ್ಗಲ ಎಲುವ ಮುರದೀನು
ಚಂದಾಗಿ ದುಡೀರಿ![೨೫೭]

ಭಕ್ತ – ಎಪ್ಪಾ ನನ್ನ ಮಗಗ ಎಲ್ಲಾ ಹೆಣ್ಣ ಹುಟ್ಯಾವು
ಹೆಂಗ ಮಾಡೂದು ಮನಿ ದಿಪಕ್ಕ ಒಂದ
ಗಂಡ ಬೇಕಲ್ರಿ

ಒಡೆಯರರು – ಹುಚ್ಚ ಮಗನ ಹೆಣ್ಣ ಗಂಡ ಒಂದ ಸಮಾ
ಹೆಣ್ಣ ಹುಟ್ಯಾವಂತ ಮರಗಬ್ಯಾಡರಲೇ
ಹೆಣ್ಣಿ ಹಡದರ ಮನಿ ತಂಪ ಆಕ್ಕತಿ
ಗಂಡ ಮಗನಂಗ ಹೆಣ್ಣ ಮಗನ ಬೆಳಸಬೇಕು
ಗಂಡ ಮಗನಂಗ ಒಂದ ಮನಿ ದೀಪಾ ಹಚ್ಚತತಿ
ಎಲ್ರೂ ಇದನ್ನ ತಿಳದ ನಡೀರಲೇ[೨೫೮]

ಇಂತಹ ಅನುಭವೋಕ್ತಿಗಳು ಜನಪದರ ಬದುಕಿನ ರೀತಿ ನೀತಿಗಳನ್ನು ಬಿಂಬಿಸುತ್ತವೆ.

ಹೀಗೆ ಹೇಳಿಕೆಗಳ ಮನೋವೈಜ್ಞಾನಿಕ ನೆಲೆ ತುಂಬಾ ಮಹತ್ವ ಪೂರ್ಣವಾಗಿದೆ. ಸಮುದಾಯದ ಬದುಕಿನಲ್ಲಿಯ ಘಟನೆಗಳು, ಸಂಗತಿಗಳು, ವಿಚಾರಗಳು, ಸಮಸ್ಯೆಗಳು ಪರಿಹಾರಕ್ಕೆ ಸುವ್ಯವಸ್ಥಿತವಾದ ಚಿಂತನೆ ಹೇಳಿಕೆಗಳಲ್ಲಿ ಇರುತ್ತದೆ. ಹೇಳಿಕೆಗಳು ಸಮುದಾಯದ ಸದಸ್ಯರ ಭಾವ ಮತ್ತು ಭಾವನೆಗಳನ್ನು ಉದ್ದೀಪನಗೊಳಿಸುತ್ತದೆ. ಸಮುದಾಯದ ಸದಸ್ಯರನ್ನು ಆಲೋಚನೆಗೆ ಹಚ್ಚುತ್ತವೆ. ಅವರು ಸಾಮಾಜಿಕವಾಗಿ ಧಾರ್ಮಿಕವಾಗಿ ಮತ್ತು ನೈತಿಕವಾಗಿ ಹೆಚ್ಚು ಹೆಚ್ಚು ಬೆಳೆಯುವಂತೆ ತಿಳುವಳಿಕೆ ಕೊಡುತ್ತವೆ. ಜನರ ಭಾವನೆಗಳು ವಿಕಾಸವಾದಂತೆ ಅವರ ಬೆಳವಣಿಗೆ ಕ್ರಮದಲ್ಲಿ ವಿನ್ಯಾಸವಾಗುತ್ತದೆ. ಭಾಷಾನುಕರಣೆ ಸರಮಂಡಲದಲ್ಲಿ ಪೂರ್ಣ ವಿಕಾಸವಾದಾಗ ಮಾತಿನ

ಅನುಕರಣೆ ಪ್ರಬುದ್ಧವಾಗುತ್ತದೆ. ಈ ಎಲ್ಲ ನಿಲುವುಗಳಿಂದ ಅಂದರೆ ಕಲಿಕೆ, ಅನುವಂಶೀಯತೆ ಮತ್ತು ಪರಿಸರ, ಭಾಷಾ ವಿಕಾಸ, ಸಂವೇದನೆ ಭಾವನೆ, ನೆನಪು ಮರೆವು, ಆಲೋಚನೆ ಈ ಎಲ್ಲ ನಿಲುವುಗಳಿಂದ ಕುರುಬರ ಹೇಳಿಕೆಗಳು ಒಂದು ಸಮುದಾಯದ ಅಧ್ಯಯನಕ್ಕೆ ತುಂಬ ಅಕರಗಳಾಗುತ್ತವೆ. ಅವುಗಳ ಅಧ್ಯಯನದಿಂದ ಮನಃಶಾಸ್ತ್ರದ ಅರಿವಿನ ಎಲ್ಲೆ ವಿಸ್ತಾರವಾಗುತ್ತದೆ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**೪.೪ ಭಾಷಿಕ ನೆಲೆ :**

ಸಾಮಾನ್ಯವಾಗಿ ಭಾಷಾಸಮುದಾಯವೆಂದರೆ ಅದು ಸಾಮಾನ್ಯ ಭಾಷೆ ಆಡುತ್ತಿರಬೇಕು. ಆ ಸಮುದಾಯದ ಸದಸ್ಯರು ನಿರಂತರವಾಗಿ ಮಾತನಾಡುತ್ತಿರಬೇಕು. ಅವರು ಬಳಸುವ ಭಾಷೆ, ಸಮಾನ ಭಾಷಾ ಅಂಶಗಳಿಂದ ಕೂಡಿರಬೇಕು. ಬೇರೆ ಬೇರೆ ಸಮುದಾಯದೊಡನೆ ಹೋಲಿಸಿದಾಗ ಭಾಷೆಯನ್ನು ಬಳಸುತ್ತಿರುವ ರೀತಿಯಲ್ಲಿ ವ್ಯತ್ಯಾಸವಿರಬೇಕು. ಹೀಗೆ, ಸಮಾನ ಮಾತುಗಳಿಂದ ಸಂಪರ್ಕವಾದ ಗುಂಪು ಭಾಷಾ ಸಮುದಾಯವೆನಿಸಿಕೊಳ್ಳುತ್ತದೆ. ಕರ್ನಾಟಕದಲ್ಲಿ ಲಿಂಗಾಯತ ಮತ್ತು ಒಕ್ಕಲಿಗ ಭಾಷಾಸಮುದಾಯಗಳನ್ನು ಹೊರತು ಪಡಿಸಿದರೆ ಮೂರನೆಯ ಬಹುದೊಡ್ಡ ಭಾಷಾಸಮುದಾಯ ಕುರುಬ ಸಮುದಾಯವಾಗಿದೆ. ಕುರುಬರು ಪಶುಪಾಲಕರು: ಶ್ರಮಜೀವಿಗಳು, ಕರ್ನಾಟಕದ ತುಂಬೆಲ್ಲ ಆ ಸಮುದಾಯದವರು ವಾಸವಾಗಿದ್ದಾರೆ. ಭಾಷೆ–ಕಲೆ–ಸಾಹಿತ್ಯ–ಸಂಸ್ಕೃತಿಯಲ್ಲಿ ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ. ಆ ಸಮುದಾಯದ ವಿಶಿಷ್ಟ ಭಾಷಿಕ ಅಂಶಗಳಿಂದ ಪ್ರತ್ಯೇಕ ಭಾಷಾ ಸಮುದಾಯವಾಗಿ ಕಾಣಿಸಿಕೊಂಡಿದೆ.

ಕುರುಬರ ಕುಲದೈವ ಬೀರಪ್ಪನೆನಿಸಿದರೂ ಹಳ್ಳಿ ಹಳ್ಳಿಯಲ್ಲಿ ಅವರು ಕಟ್ಟಿಕೊಂಡ ಭರಮದೇವರ ಗುಡಿಗಳೇ ಕಂಡುಬರುತ್ತವೆ. ತೀರ ಪ್ರಾಚೀನರೂ ಮೂಲ ದ್ರಾವಿಡರೂ ಆದ ಹಾಲುಮತದವರು, ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣರಾದ ಮೂವರು ದೇವತೆಗಳಲ್ಲಿ ಸೃಷ್ಟಿಕರ್ತನೆನಿಸುವ ಬ್ರಹ್ಮದೇವನನ್ನೇ ಉಪಾಸಿಸುವುದು ವಾಸ್ತವಿಕವಾಗಿದೆ. ಕುರುಬರು ಕೆಲವರಲ್ಲಿ ಕೆಲವರು ಕಾಲಕ್ರಮೇಣ ಲಿಂಗಾಯತ ಸಂಸ್ಕೃತಿಗೆ ಸಮೀಕರಣವಾದಂತೆ ತೋರುತ್ತದೆ. ಆದರೂ ಅವರು ತಮ್ಮ ಮೂಲದೈವ–ಭರಮದೇವರಿಗೆ ಈಗಲೂ ನಡೆದುಕೊಳ್ಳುತ್ತಿದ್ದಾರೆ. ಡೊಳ್ಳುವಾದ್ಯದಲ್ಲಿ ಬ್ರಹ್ಮದೇವರ ಅಗ್ಗಳಿಕೆಯನ್ನೇ ಅವರು ಹೇಳುತ್ತಾರೆ. ಹೇಗೆಂದರೆ:

ಬ್ರಹ್ಮದೊಡ್–ಡಾಂವ/ಬ್ರಹ್ಮದೊಡ್–ಡಾಂವ
ಹಿಡಿದ್ಹ್ಯಾಂಗ್/ಬಿಟ್ಹ್ಯಾಂಗ್
ಹಿಡಿದ್ಯಾಂಗ್/ಬಿಟ್ಹ್ಯಾಂಗ್
ಡುಬ್ಬದ್ಡುರಿ/ಡುಬ್ಬದ್ಡುರಿ/ಡುಬ್ಬದ್ಡುರಿ[೨೫]

ಇದು ಡೊಳ್ಳುವಾದ್ಯದ ಮೊಳಗಿನಲ್ಲಿ ಕೇಳಿಬರುವ ಅರ್ಥ. ಉಪಾಸ್ಯದೈವತವಾದ ಬ್ರಹ್ಮದೇವರನ್ನು ಡೊಳ್ಳುವಾದ್ಯದ ವಾಲಗದಲ್ಲಿ ಹೊಗಳಿ ಹೊಗಳಿ, ಮೊಳಗು ಮುಗಿಲಿಗೆ ಮುಟ್ಟುವಂತೆ ಮಾಡಿದ ಮೇಲೆ ಮುಗಿಸುವುದು ವಾಡಿಕೆ. ಆ ಮೇಲೆ "ಡೊಳ್ಳು ಬಡಿದು ಸಾಕಾಯ್ತು/ಹುಗ್ಗಿಯ ಪರಿಯಾಣ ಬೇಕಾಯ್ತು" ಎನ್ನುತ ಹಸಿವೆಯನ್ನು ತಣಿಸುವುದಕ್ಕೆ ಹಾತೊರೆಯುವರು. ಆ ಸಂದರ್ಭವನ್ನು ವರ್ಣಿಸುವ

ಕಳ್ಳಿಯ ಸಾಲ್ಯಾಗ/ಕಟ್ಟಂಬಲಿ ಊರ್ಯಾದ/
ಬಟ್ಟಲು ತಗೊಂಡು ಬಾರಯ್ಯ//
ದೇವರ ಬಂದಾವ್ ಬನ್ನಿರೇ[೨೬೦]

ಎಂಬ ಹಾಡೊಂದಿದೆ. ದೈವೋಪಾಸನೆಯನ್ನು ಅನುಸರಿಸಿ ಉದರೋಪಾಸನೆಯೂ ಕ್ರಮ ಪ್ರಾಪ್ತವಾಗಿದೆ. ಭಾಷೆ ನಿರಂತರವಾಗಿ ಬದಲಾಗುತ್ತ ಬೆಳೆಯುತ್ತಿರುತ್ತದೆ. ಅದರ ಬಳಕೆ ಮತ್ತು ಉಚ್ಚಾರಣೆಯಲ್ಲಿ ಆದಷ್ಟು ಸರಳ ಹಾಗೂ ಸುಲಭಗೊಳಿಸುವುದು ಈ ಬದಲಾವಣೆಯ ಮುಖ್ಯ ಉದ್ದೇಶ. ಭಾಷೆಯ ರಚನೆಯಲ್ಲಾಗುವ ಬದಲಾವಣೆ ಮೊದಲು ಧ್ವನಿರಚನೆ, ಪದರಚನೆಯಲ್ಲಿ ಕಾಣಿಸಿಕೊಂಡು ನಂತರ ಪ್ರತ್ಯೇಕ ಉಪಭಾಷೆಗಳ ಅಸ್ತಿತ್ವಕ್ಕೆ ಕಾರಣವಾಗುವುದು. ಈ ಅಧ್ಯಾಯದಲ್ಲಿ ಕುರುಬರ ಹೇಳಿಕೆಗಳಲ್ಲಿ ಬಳಕೆಯಾಗುವ ಭಾಷೆಯನ್ನು ಸಾಮಾಜಿಕ ಚೌಕಟ್ಟಿನಲ್ಲಿ ಒಳಪಡಿಸಿ ಅದರ ಭಾಷಿಕ ವೈಲಕ್ಷಣಗಳನ್ನು ಕುರಿತು ಚರ್ಚೆ ಬೆಳೆಸಲಾಗಿದೆ.

ಬಳ್ಳಾರಿ ಪರಿಸರದ ಕುರುಬ ಭಾಷಾಸಮುದಾಯದ ಒಡೆಯರರಲ್ಲಿ ಶಬ್ದಾದಿಯ 'ಕ'ದ ಮುಂದೆ ಸಜಾತಿಯ ದ್ವಿತ್ವವಿದ್ದರೆ ಶಬ್ದಾದಿಯ 'ಕ' ದಲ್ಲಿಯ 'ಅ' ಧ್ವನಿ 'ಒ' ಆಗಿ ಪರಿವರ್ತನೆ ಹೊಂದುವುದು ತುಂಬ ಸ್ವಾರಸ್ಯದ ಸಂಗತಿಯಾಗಿದೆ. ಆ ಸಮುದಾಯದ ವಿದ್ಯಾವಂತ ಮತ್ತು ಅವಿದ್ಯಾವಂತರ ಆಡುನುಡಿಯಲ್ಲಿ ಈ ಕ್ರಿಯೆ ಧಾರಾಳವಾಗಿ ನಡೆಯುತ್ತಿದೆಯಾದರೂ ಆಧುನೀಕರಣ ಮತ್ತು ನಗರೀಕರಣಗಳ ಪ್ರಭಾವದಿಂದ ಈಗ ವಿದ್ಯಾವಂತರ ಆಡು ನುಡಿಯಲ್ಲಿ ಕಡಿಮೆಯಾಗುತ್ತಿದ್ದು ಅವಿದ್ಯಾವಂತರ ಆಡುನುಡಿಯಲ್ಲಿ ಉಳಿದಿದೆ.

ಕಲ್ಲು > ಕೊಲ್ಲು
ಕಣ್ಣು > ಕೊಣ್ಣು
ಕಬ್ಬು > ಕೊಬ್ಬು
ಕಪ್ಪು > ಕೊಪ್ಪು
ಕಪ್ಪೆ > ಕೊಪ್ಪೆ

ಇಲ್ಲಿ ಪದಾದಿಯಲ್ಲಿರುವ 'ಅ' ಧ್ವನಿ 'ಒ' ಆಗಿದೆ. (ಅ>ಒ) 'ಅ' ಪೂರ್ವಸ್ವರ 'ಒ' ಪಶ್ಚಸ್ವರವಾಗಿ ಬದಲಾವಣೆಯಾಗಿದೆ. ನಾಲಗೆಯ ಸ್ಥಿತಿ ಬದಲಾಗದೆ ತುಟಿಗಳ ಸ್ಥಿತಿ ಮಾತ್ರ

ಬದಲಾಗುತ್ತದೆ. ಆವೃತ್ತ ಸ್ವರ (Unrounded Vowel) ಸಂವೃತ್ತ ಸ್ವರವಾಗಿ (rounded Vowel) ಪರಿವರ್ತನೆಯಾಗಿದೆ. ಈ ಕ್ರಿಯೆ ಪದಾದಿಯ 'ಕ' ವ್ಯಂಜನ ಧ್ವನಿಯಾಗಿದ್ದಾಗ ಮಾತ್ರ ನಡೆಯುತ್ತದೆ. ಉಳಿದೆಡೆ ನಡೆಯುದಿಲ್ಲ.

ಗಲ್ಲ ಗೊಲ್ಲ

ಬಣ್ಣ ಬೊಣ್ಣ

ಹಕ್ಕಿ ಹೊಕ್ಕಿ

ಮಣ್ಣು ಮೊಣ್ಣು

ಪದಾದಿ 'ಕ' ಹೊರತುಪಡಿಸಿ ಬೇರೆ ಧ್ವನಿಗಳಿದ್ದರೆ 'ಒ' ಆಗುವುದಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಪದಾದಿ 'ಕ' ಧ್ವನಿಯಲ್ಲಿ 'ಅ' ಸಜಾತಿಯ ದ್ವಿತ್ವವಿದ್ದಾಗ 'ಒ' ಆಗುವ ಈ ಕ್ರಿಯೆಗೆ ಅಪವಾದಗಳಿವೆ. ಕಟ್ಟಿ >ಕಡ್ಡಿ ಇವು ಕ್ರಮವಾಗಿ ಕೊಟ್ಟಿ> ಕೊಡ್ಡಿ ಆಗಬೇಕಿತ್ತು. ಆದರೆ ಆಗಿಲ್ಲ. ಕೆಲವು ವರ್ಷಗಳ ಹಿಂದೆ ಅವುಗಳಿಗೆ ಕೊಟ್ಟಿ, ಕೊಡ್ಡಿ ಎಂದು ಕರೆಯುತ್ತಿದ್ದರು. ಈಗ ಕರೆಯುವುದಿಲ್ಲ ಎಂದು ಕೆಲವು ವಯೋವೃದ್ಧ ಒಡೆಯರರು ನನಗೆ ತಿಳಿಸಿದರು. ಈ ರೀತಿಯ ಧ್ವನಿ ಬದಲಾವಣೆ ಕೆಲವು ಶಬ್ದಗಳಿಗೆ ಮಾತ್ರ ಸೀಮಿತವಾಗಿದೆ. ಸಾವಕಾಶವಾಗಿ ಆ ಪ್ರದೇಶದ ಭಾಷೆಯನ್ನು ವ್ಯಾಪಿಸಿರಬೇಕು ಮುಂದೆ ಸ್ವಜಾತಿಯ ದ್ವಿತ್ವವಿದ್ದಾಗ ನಿಯಮಿತವಾಗಿ ನಡೆಯುತ್ತಿದ್ದಿರಬೇಕೆಂದು ಹೇಳಬಹುದು.

ಅ > ಒ ಧ್ವನಿ ವ್ಯತ್ಯಾಸ ಯಾವಾಗ ಪ್ರಾರಂಃವಾಯಿತು ? ಅನ್ಯ ಭಾಷೆಯ (ನೆರೆಯ ತೆಲಗು ಭಾಷೆಯ) ಪ್ರಭಾವವಾಗಿದೆಯೇ? ಅದಕ್ಕೆ ಕಾರಣವೇನು? ಇವುಗಳಿಗೆ ಉತ್ತರಿಸುವುದು ಕಷ್ಟಸಾಧ್ಯ. ದ್ರಾವಿಡ ಭಾಷೆಗಳಲ್ಲಿ ಒಂದಾದ ತೊದ ಭಾಷೆಯಲ್ಲಿ ಕೊಲ್ಲ' ರೂಪವಿದೆ. ಆ ಭಾಷೆಯ ಪ್ರಭಾವ ಈ ಪ್ರದೇಶದ ಭಾಷೆಯ ಮೇಲೆ ಆಗಿರಬಹುದು ಎಂದು ಊಹಿಸಿದೆ. 'ಕೊಲ್ಲ' ಹೊರತುಪಡಿಸಿ ಕೊಬ್ಬು, ಕೊಣ್ಣು ಮುಂತಾದ ರೂಪಗಳು ತೊದ ಭಾಷೆಯಲ್ಲಿ ದೊರಕುವುದಿಲ್ಲ ಎಂದು ತಿಳಿದಿರುವುದರಿಂದ ಅಷ್ಟಕ್ಕೆ ಕೈ ಬಿಟ್ಟೆನು (ಅದು ಸೂಕ್ತವೂ ಅಲ್ಲ). ನೆರೆಯ ತೆಲಗು ಭಾಷೆಯ ಪ್ರಭಾವ ಅಗಿರಬಹುದೆಂಬುದಕ್ಕೆ ಸುಳುಹುಗಳು ದೊರಕುವುದಿಲ್ಲ. ಇನ್ನೊಮ್ಮೆ ಆ ಪ್ರದೇಶಗಳತ್ತ ಕ್ಷೇತ್ರಕಾರ್ಯ ಕೈಕೊಂಡು ಹೆಚ್ಚು ಹೆಚ್ಚು ಭಾಷಿಕ ಸಾಮಗ್ರಿಗಳನ್ನು ಸಂಗ್ರಹಿಸಿದಾಗ ಹೊಸ ಅಂಶಗಳು ಗೋಚರವಾಗಬಹುದು. ಆಗ ಮೇಲಿನ ನಿಯಮವನ್ನು ಇನ್ನೂ ಉತ್ತಮಗೊಳಿಸಬಹುದು. ಇದು ಬಳ್ಳಾರಿ ಪ್ರದೇಶದ ಕುರುಬರ ಉಪಭಾಷೆಯಲ್ಲಿ ಕಂಡುಬರುವ ಧ್ವನಿ ಬದಲಾವಣೆಯಾಗಿದೆ.

ಅದರಂತೆ ಕರ್ನಾಟಕ, ಮಹಾರಾಷ್ಟ್ರ ಗಡಿಪ್ರದೇಶವಾದ ಬೆಳಗಾವಿ ಸುತ್ತಮುತ್ತಲಿನ ವಿಶಿಷ್ಟವಾದ ಕನ್ನಡವೇ ಬಳಕೆಯಲ್ಲಿದೆ. ಕುರುಬರ ಹೇಳಿಕೆಯಲ್ಲಿ ಆ ಜಿಲ್ಲೆಯನ್ನು ಭಾಷೆಯ ದೃಷ್ಟಿಯಿಂದ

ಮೂರು ಘಟಕಗಳಾಗಿ ವಿಂಗಡಿಸಬಹುದು. ಅ. ಚಿಕ್ಕೋಡಿ ಸುತ್ತಮುತ್ತಲಿನ ಕನ್ನಡ, ಉತ್ತರ ಬೆಳಗಾವಿಯ ದಕ್ಷಿಣ ಮತ್ತು ಪೂರ್ವಭಾಗ. ಆ. ಸವದತ್ತಿ ಕನ್ನಡ, ದಕ್ಷಿಣ ಬೆಳಗಾವಿ ತಾಲೂಕಿನ ಪ್ರದೇಶದ, ಗೋಕಾಕ, ಸವದತ್ತಿ, ಬೈಲಹೊಂಗಲ ಮತ್ತು ರಾಮದುರ್ಗ ಪ್ರದೇಶದ ಕನ್ನಡ, ಇಲ್ಲಿ ಸಮಾವೇಶಗೊಳ್ಳುವುದು. ಇ. ಮಹಾರಾಷ್ಟ್ರ ಗಡಿನಾಡಿನ ಕನ್ನಡ ಬೆಳಗಾವಿ ತಾಲೂಕು (ಬಾಗೆವಾಡಿ ಭಾಗವನ್ನು ಹೊರತುಪಡಿಸಿ) ಚಿಕ್ಕೋಡಿ ತಾಲೂಕಿನ ನಿಪ್ಪಾಣಿ ಭಾಗ, ಖಾನಾಪೂರ ಪಶ್ಚಿಮ ಭಾಗ ಇಲ್ಲಿ ಸಮಾವೇಶಗೊಳ್ಳುತ್ತವೆ. ಈ ಪ್ರದೇಶದ ಕನ್ನಡವನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಕುತೂಹಲಕರವಾದ ಭಾಷಿಕ ಕ್ರಿಯೆಗಳು ಕಂಡುಬರುತ್ತವೆ. ಅದು ಬೇರೊಂದು ಸಂಪ್ರಬಂಧದ ವಸ್ತುವಾಗುತ್ತದೆ. ಇಲ್ಲಿ ನಾನು ಆ ಪ್ರದೇಶದ ಕುರುಬರ ಹೇಳಿಕೆಗಳ ವ್ಯವಹಾರಿಕ ಕನ್ನಡದಲ್ಲಿ ಕಂಡುಬರುವ ಕೆಲವು ಧ್ವನಿ ವ್ಯತ್ಯಾಸಗಳನ್ನು ಮಾತ್ರ ಕಲೆಹಾಕಿ, ಬರಹದ ಕನ್ನಡಕ್ಕಿಂತ ಅದು ಹೇಗೆ ಭಿನ್ನವಾಗಿದೆ ಎಂಬುದನ್ನು ಗುರುತಿಸುವುದೇ ಆಗಿದೆ.

ತೃತೀಯಾಕ್ಷರ ಯುಕ್ತವಾದ ಪದ ರಚನೆಯಲ್ಲಿ ದ್ವಿತೀಯಾಕ್ಷರ 'ರ' ಕಾರವಿದ್ದು ತೃತೀಯಾಕ್ಷರ ಪರಿವೇಷ್ಟಿತ ಧ್ವನಿಗಳಾದ (retroflex Sound) ಟ, ಠ, ಡ, ಢ, ಣ, ಳ ಗಳಿದ್ದರೆ 'ರ' ಕಾರದ ಮುಂದಿನ ಸ್ವರವು ಲೋಪಹೊಂದಿ ವ್ಯಂಜನದೊಡನೆ ಸಮರೂಪ ಧಾರಣೆಯಾಗುತ್ತದೆ.

ಕರಡಿ > ಕಡ್ಡಿ/ಖಡ್ಡಿ

ಅರಳೆ > ಅಳ್ಳಿ

ಕರುಳ > ಕಳ್ಳ

ಒರಳು > ಒಳ್ಳು

ಅರಳು > ಅಳ್ಳ

ಹೊರಳು > ಹ್ವಳ್ಳ

ಕೊರಳು > ಕ್ವಳ್ಳ

ಜಿರಡಿ > ಜಿಡ್ಡಿ

ಬೆರಳು > ಬೆಳ್ಳ/ಬಳ್ಳು

ಪದರಚನೆಯಲ್ಲಿ ಪರಿವೇಷ್ಟಿತ ಧ್ವನಿಗಳನ್ನುಳಿದು ಬೇರೆ ವ್ಯಂಜನಗಳಿದ್ದರೆ ಸಮರೂಪಧಾರಣೆಯ ಕ್ರಿಯೆ ನಡೆಯುವುದಿಲ್ಲ.

ಬೆರಕೆ > ಬೆರಕೆ/ ಬೆರಕಿ

ಕರಿಕೆ > ಕರಿಕೆ/ ಕರಕಿ

ಗೊರಕೆ > ಗೊರಕೆ/ ಗ್ವರಿಕಿ

ಬರಲು > ಬರ್ಲ (ಪೊರಕೆ)

ಉರಲು > ಉರ್ಲ (ನೇಣು)

ಪದಾದಿಯ 'ಒ', 'ಓ' ಧ್ವನಿಗಳು 'ವ'ಕಾರವಾಗುತ್ತದೆ.

ತೋಟ > ತ್ವಾಟ

ಕೋಟೆ > ಕ್ವಾಟಿ

ಜೋಳ > ಜ್ವಾಳ

ಕೋರೆ > ಕ್ವಾರಿ

ಒರಗೆ > ವಾರ್ಗಿ

ಕೆಲವೆಡೆ ಈ ಪರಿವರ್ತನೆಯಿಲ್ಲ. ಉದಾಹರಣೆಗೆ. ಜೋರು–ಜೋರು, ಗೋಣು–ಗೋಣು (ಕುತ್ತಿಗೆ) 'ಅ'ಕಾರಾದಿಯಾದ ಸಂಬಂಧವಾಚಕ ಪದಗಳನ್ನು ಸಂಬೋಧಿಸುವಾಗ ಮಾತ್ರ 'ಯ'ಕಾರಾದಿಯಾಗಿ ಬಳಸಲ್ಪಡುತ್ತದೆ. ಉದಾಹರಣೆಗೆ. ಯಪ್ಪಾ ಲವೂಟ್ ಬಾ (ಅಪ್ಪ ಬೇಗ ಬಾ).

ಅಪ್ಪ > ಯಪ್ಪ

ಅಕ್ಕ > ಯಕ್ಕ

ಅವ್ವ > ಯವ್ವ

ಅಣ್ಣ < ಯಣ್ಣ

ಅಜ್ಜ > ಯಜ್ಜ

ಅತ್ತೆ > ಯತ್ತಿ

'ಉ' ಕಾರಾಂತ ನಾಮಪದಗಳು'ಅ' ಕಾರಾಂತವಾಗುತ್ತವೆ. ಬಾಗಿಲ > ಬಾಗ್ಲ , ಮುಳ್ಳ. ಮುಳ್ಳ. ಮಧ್ಯದಲ್ಲಿರುವ 'ಏ' ಆ್ಯ ಆಗುತ್ತದೆ.

ಬೇಸಿಗೆ > ಬ್ಯಾಸಿಗೆ

ಪೇಟೆ > ಪ್ಯಾಟಿ

ಬೇಟೆ > ಬ್ಯಾಟಿ

ಮೇಲೆ > ಮ್ಯಾಲೆ

ಆದರೆ ಕೇಳು, ಹೇಳು ಏರು ಮುಂತಾದ ಕ್ರಿಯಾಪದಗಳಲ್ಲಿ ಈ ಕ್ರಿಯೆ ಕಂಡುಬರುವುದಿಲ್ಲ. ಪದಾದಿಯಲ್ಲಿ 'ಸ' ಕಾರವಿದ್ದು ಅನಂತರದ ದ್ವಿತೀಯಾಕ್ಷರದಲ್ಲಿ 'ಚ', 'ಜ'ಗಳಿದ್ದರೆ ಪದಾದಿಯ

'ಸ' ಕಾರ 'ಚ' ಆಗಿ ವ್ಯತ್ಯಾಸ ಹೊಂದುವುದು ಉದಾಹರಣೆಗೆ. ಸಜ್ಜಿ > ಚಜ್ಜಿ, ಸೂಜಿ > ಚೂಜಿ, ಸಂಜೆ > ಚಂಚೆ. ಸ, ಶ, ಷ ಧ್ವನಿಗಳಲ್ಲಿ 'ಷ' ಧ್ವನಿ ಬಳಕೆ ಕಡಿಮೆ. ಸ, ಶ ಗಳಲ್ಲಿ 'ಶ' ದ ಬಳಕೆ ತುಂಬ ಕಡಿಮೆ. ಸ ಹೆಚ್ಚು ಬಳಕೆಯಲ್ಲಿದೆ. ಉಚ್ಚಾರಣೆಯಲ್ಲಿ ಮರಾಠಿ ಭಾಷೆಯ ಪ್ರಭಾವದಿಂದಾಗಿ ಗಡಿಪ್ರದೇಶದಲ್ಲಿ ಮಹಾಪ್ರಾಣಗಳ ಬಳಕೆ ಹೇಳಿಕೆಗಳಲ್ಲಿ ಹೆಚ್ಚಾಗಿದೆ. ಕುರುಬರ ವ್ಯವಹಾರಿಕ ಕನ್ನಡ ಗಡಿನಾಡಿನ ಕುರುಬರ ಹೇಳಿಕೆಗಳಲ್ಲಿ ಕ ಮಹಾಪ್ರಾಣ ಖ ವಾಗಿ ಪರಿವರ್ತನೆಯಾಗುತ್ತದೆ.

ಕಣ > ಖಣ

ಕರೆ > ಖರೆ (ಸತ್ಯ, ನಿಜ)

ಕುರುಪಿ > ಖುರುಪಿ

ತಾಲಿ > ಥಾಲಿ

ದನಿ > ಧ್ವನಿ

ಸ್ವರಗಳಲ್ಲಿ ಅನುನಾಸಿಕತೆ ಕಂಡುಬರುತ್ತದೆ.

ನಾನು ನಾ

ನೀನು ನಿ

ನಾವು ನಾವ

ಅನುನಾಸಿಕತೆಯು ಪ್ರತ್ಯೇಕ ಧ್ವನಿಮಾಕ್ಕೆ ಕಾರಣವಾಗಿದೆ. ಹೂ– ಹೂ–ಹೌದು (ಐಛ) ಪಾದಾದಿಯಲ್ಲಿ ಪೂರ್ವಮಧ್ಯ ಸ್ವರಗಳಾದ ಎ, ಏ ಗಳು ಯ, ಯಾ ಗಳಾಗಿ ಪರಿವರ್ತನೆ ಹೊಂದುತ್ತವೆ.

ಎಲೆ > ಯಲಿ ಕೆನಿ > ಕ್ಯನಿ ಎಲಕಿ > ಯಾಲಕ್ಕಿ

ಎಲ್ಲ > ಯಲ್ಲ ಏಕೆ > ಯಾಕೆ ಏನಾದರೂ > ಯಾನಾದರು

ಕೆಲವೆಡೆ ಈ ಕ್ರಿಯೆ ನಡೆಯುವುದಿಲ್ಲ. ಉದಾ. ಬೇಕು >ಬೇಕ್, ತೇರು > ತೇರ್. ಸ್ವೀಕರಣ ಪದಗಳಲ್ಲಿ ಆದಿ 'ವ' ಕಾರ 'ಇ' ಕಾರವಾಗುತ್ತದೆ. ವಿಮಾನ > ಇಮಾನ, ವಿಚಾರ > ಇಚಾರ, ವಿಷ > ಇಸ. 'ಇ' ಕಾರಾದಿಯಾಗಿ ಬಂದಿರುವ ಪದಗಳು ಹಾಗೆಯೇ ಉಳಿಯುತ್ತವೆ. ಉದಾ. ಇಂಜೇನ್, ಇಂಜಕ್ಷನ್ ಇವು ಬದಲಾವಣೆ ಆಗುವುದಿಲ್ಲ. ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಮತ್ತು ದೈನಂದಿನ ಬದುಕಿನಲ್ಲಿ ವ್ಯವಹಾರಕ್ಕಾಗಿ ಬಳಸುವ ನುಡಿಗಟ್ಟುಗಳು ಅವರ ಹೇಳಿಕೆಗಳಲ್ಲಿ ಭಾಷಾ ಬಳಕೆಯಲ್ಲಿ ಸಹಜವಾಗಿ ಬಳಕೆಯಾಗಿದೆ.

– ಮೂಗುಕೋದ ಕನ್ನಡಿ

– ಹಲ್ಲತಿನ್ನು

– ಚಂಡಿ ಚಿವುಟು

– ನಿರವಂಶ ಆಗಲಿ

– ಲಟಕ ಮುರಿ

– ಕಡಬೆರಿಕೆ

ಮುಂತಾದ ನುಡಿಗಟ್ಟುಗಳು ಅವರ ಭಾಷಿಕ ಶಕ್ತಿ ಹೆಚ್ಚಿಸಿವೆ. ಕುರುಬರ ಭಾಷಾ ಬಳಕೆಯಲ್ಲಿ ನುಡಿಗಟ್ಟುಗಳಂತೆ ಹಲವಾರು ವಿಶಿಷ್ಟ ಪದಪುಂಜಗಳನ್ನು ಬಳಸುತ್ತಾರೆ.

– ಹೆಜ್ಜೆಕುತ್ತಿ

– ಅವತಾರ ಮುಗಿದಿದೆ

– ಚಟ್ ಬೆಳಗಿತ್

– ತೊಂದರೆಯಾಯಿತು

– ಮೂರಾಬಟ್ಟಿ ಆತ್

– ಹಾಳಾಯಿತು

– ಹುಳಿ ಹಿಂಡಿದರ್

– ಅಡ್ಡ ಹಾಕು

– ನುಂಗಿ ನೀರ್ ಕುಡದ್ರ

– ಮುಗಿಸಿದರು ಕೇಳಲೇ ಕೇಳ್

ಇಂತಹ ವಿಶಿಷ್ಟ ಪದಪುಂಜಗಳು ಒಡೆಯರರ ಭಾಷಾ ಬಳಕೆಯಲ್ಲಿ ಕಂಡುಬಂದಾಗ ಲಕ್ಷಣಾರ್ಥವನ್ನು ಕೊಡುತ್ತವೆ. ವಿಶಿಷ್ಟ ಅವ್ಯಯಗಳನ್ನು ಅವರ ಭಾಷಾ ಬಳಕೆಯಲ್ಲಿ ಕಂಡುಬರುತ್ತವೆ.

ನಿಂದರಕಿಲೆ – ಒಮ್ಮೆಲೆ ಗಸಕ್ನ –ಕೂಡಲೆ

ಹಿಂದಾಗಡೆ – ಆಮೇಲೆ ಬುದಂಗ್ನ ಕೂಡಲೆ

ಅಂತರ್ಕಿಲೆ – ಒಮ್ಮೆಲೆ

ಆಹಾ

ಓಹೋ – ಭಾವಸೂಚಕ ಅವ್ಯಯಗಳು

ಛೀ

ಥೂ

ಇಂತಹ ಅವ್ಯಯಗಳು ಭಾಷಿಕ ಕ್ರಿಯೆಯು ನಡೆಯುವ ರೀತಿಯನ್ನು ಹೇಳುತ್ತವೆ. ಅವರ ಭಾಷೆಯು ಆಡುನುಡಿಯ ಮೂಲಕ ಸಾಗುವುದರಿಂದ ಆಯಾ ಪ್ರದೇಶದ ಪ್ರಾದೇಶಿಕ ಶಬ್ದಗಳು ಅವರ ಮಾತುಗಳಲ್ಲಿ ಸಹಜವಾಗಿ ದೊರೆಯುತ್ತವೆ ಎಂಬುದರ ಬಗ್ಗೆ ಬೇರೆ ಹೇಳಬೇಕಾಗಿಲ್ಲ. ಕೆಲವೊಂದು ಇಲ್ಲಿ ಕೊಡಲಾಗಿದೆ.

ಅಡಗ – ಮರೆಯಾಗು

ಅಡರು – ಹತ್ತು, ಮೇಲೇರು

ಇದರ – ಎದರು, ಈಟ್ – ಸ್ವಲ್ಪ

ಒತ್ತರ – ಬೇಗ, ಅವಸರ, ಒಲ್ಲಿ – ನಿರಾಕರಣೆ

ಐತಿ, ಇದೆ ಕಾರಭಾರ ಕೆಲಸ ಮಾಡುವಾಗ, ಮಧ್ಯಪ್ರವೇಶಿಸಿ, ಕೇಡನ್ನುಂಟು ಮಾಡುವುದು

ಕುಂದ – ಕಳಂಕ

ಕುಸಿ – ಕುಗ್ಗ, ಜಾರು

ಖುದ್ದ – ಸಮಕ್ಷಮ ಕುವ್ವತ್ತ – ಶಕ್ತಿ, ಸಾಮರ್ಥ್ಯ

ಗಪ್ಪ – ಸುಮ್ಮನೆ, ಖಾತ್ರಿ – ವಿಶ್ವಾಸ

ಗುಲ್ಲ – ಗಲಾಟೆ, ಸಪ್ಪಳ ಗಡಗಿ – ಮಣ್ಣಿನಪಾತ್ರೆ

ಗೋಣ – ಕತ್ತು, ಕುತ್ತಿಗೆ ಗುದಮುರಗಿ – ಗಲಾಟೆ

ಡೌಲ್ – ಒಯ್ಯಾರ್ ಚಲೋ – ಒಳ್ಳೆಯ, ಚೆನ್ನಾಗಿ

ತಾಬಡತೋಬಡ – ಆಗಿಂದಾಗೆ, ಬೇಗ ಜಗ್ಗ – ಎಳೆ

ತಿವಿ – ಚಿವುಟು ತಾಕೀತು – ಸೂಚನೆ

ತುರ್ತ – ಈಗಿಂದೀಗ, ಸದ್ಯ, ತಿವಿ – ಚಿವುಟು

ದರಕಾರ – ಗಮನ, ಲಕ್ಷ್ಯ, ಥೇಟ – ಅದೇ ರೀತಿ, ಹಾಗೆ

ಧಿಮಾಕು – ಸೊಕ್ಕು, ದಿಗರ – ಭಯ, ಅಂಜಿಕೆ

ನಾಜೂಕು – ಮೃದು ಮೆತ್ತಕೆ, ನದರ್ – ದೃಷ್ಟಿ, ದೈವ

ಪಸಂದ – ಮನಸ್ಸಿಗೆ ಬರುವ, ನಿವಳ – ಚೆನ್ನಾಗಿ

ಬಡಿವಾರ – ಡೊಡ್ಡಸ್ತನ, ಒಣಹೆಮ್ಮೆ, ಪುರಮಾಸೆ – ಹೆಚ್ಚು, ಬಹಳ

ಜಿರಿಕಿ – ಜಾಣ, ಜಾಣಾಕ್ಷ, ಬುಡ – ಕೆಳಭಾಗ, ತಳ

ಭಾಳ – ಬಹಳ, ಭರೋಸ್ – ವಿಶ್ವಾಸ

ಮಸಲತ್ತು – ಹಂಚಿಕೆ, ಉಪಾಯ ಮಜಕೂರ – ಮಾಹಿತಿ, ಹಂಚಿಕೆ, ವಿಚಿತ್ರ

ಮಾರಿ – ಮುಖ, ಮಸ್ತ – ಹೇರಳ, ಬೇಕಾದಷ್ಟು

ಮೂರು ಸಂಜೆ – ಇಳಿಹೊತ್ತು ಮ್ಯಾಲ್ – ಮೇಲೆ

ಲಗು – ಬೇಗ ಯಬಡ್ – ಒಂದು ರೀತಿಯ ಬೈಗುಳ

ಸ್ವಾಟಿ – ತುಟಿ ಸವಡು – ಬಿಡುವ

ಸುಸ್ತ – ಆಯಾಸ, ಬಳಲಿಕೆ ಸುಮ್ನ – ಸುಮ್ಮನೆ

ಹರ್‍ಯಾಗ – ಮುಂಜಾನೆ ಹನಗಲ – ಗಲಾಟೆ, ಗದ್ದಲ

ಹೆಣ್ತಿ – ಹೆಂಡತಿ ಹಿಂಥಾ – ಇಂತಹ

ಮುಂತಾದ ಅನೇಕ ಪ್ರಾದೇಶಿಕ ಶಬ್ದಗಳು ಸಹಜವಾಗಿ ಹೇಳಿಕೆಗಳಲ್ಲಿ ಬಳಕೆಯಾಗುತ್ತವೆ. ಇದರಿಂದ ಭಾಷಾ ಸಂಕೀರ್ಣತೆಯನ್ನು ದೂರ ಮಾಡಿ ಹೆಚ್ಚು ಘನವಾದ ವಿಚಾರಗಳನ್ನು ದ್ರವ ರೂಪಗೊಳಿಸಿ ನಿಚ್ಚಳವಾಗಿ ಕಥೆಯ ಆಶಯ ಜನರಿಗೆ ತಲುಪುವಂತೆ ಮಾಡುತ್ತವೆ. ಇದರಿಂದ ಭಾಷಾ ವ್ಯವಹಾರ ಸುಲಭವಾಗುತ್ತದೆ. ಭಾಷಾ ಸಂವಹನದ ದೃಷ್ಟಿಯಿಂದ ಪ್ರಾದೇಶಿಕ ಶಬ್ದಗಳ ಬಳಕೆಯು ತುಂಬ ಮಹತ್ವದ ಪಾತ್ರವಹಿಸುತ್ತದೆ. ಕುರುಬರ ಹೇಳಿಕೆಗಳಲ್ಲಿ ಪ್ರಾದೇಶಿಕ ಶಬ್ದಗಳಂತೆ ಅನುಕರಣವಾಚಕಗಳು ಬಳಕೆಯಾಗಿವೆ. ಆಯಾ ಸನ್ನಿವೇಶವನ್ನು, ತೀವ್ರತೆಯನ್ನು ವರ್ಣಿಸುವಾಗ ಸಂಭಾಷಣೆಯಲ್ಲಿ ಅನುಕರಣ ವಾಚಕಗಳು ಜೀವನಾಡಿಯಂತೆ ಪ್ರವೇಶಿಸಿ ಹೇಳಿಕೆಗಳ ಭಾಷಾ ಬಳಕೆಗೆ ಕಳೆತರಲು ಸಹಾಯಕವಾಗಿದೆ.

– ಪಿರಿಪಿರಿ ಓಡಿ ಬರಬ್ಯಾಡ್ರಲೇ

– ಖಳಾ ಖಳಾ ಹೊಳಿತ್ಯತ್ತಿ ಅಂತ ನಂಬಬ್ಯಾಡ್ರೀ

– ಮಿರಿಮಿರಿ ಮಿಂಚತಿ

– ಟಕ್ ಟಕ್ ಸಪ್ಪಳಾಯಿತು

– ಬುಸ್ ಬುಸ್ ಅಂತ ಸಪ್ಪಳಾಯಿತು

– ಗುಳುಗುಳು ನುಂಗಿದ

ಘಮಘಮ ವಾಸನೆ ಬಂತು

ಸುಯ್ಯುನೆ ಗಾಳಿ ಜೀಸಿತು

ಗಾಳಿ ಜಿಸ್ಯಾಡಿ ಜಿಸ್ಯಾಡಿ ಸುತ್ತ ಸುಳಿದಾಡಿ ಒಗಿತ್ಯತಿ

ಆಗ ಗಚ್ಚಿನ ಗುಡಿ ಜೀರಪ್ಪನ ಮರಿಬ್ಯಾಡ್ರೀ

ಕೇಳರಲೇ ಅಡವ್ಯಾನ ಕುರಿಗಳಿಗೆ ಕುಡ್ಯಾಕ ನೀರಿಲ್ಲ
ಉತ್ತರ ದಿಕ್ಕಿನ್ಯಾಗ್ ಉರಿ ಬರ್ತದ
ಜ್ವೊಕಿಲೆ ಇರಬೇಕ್[೨೬೨]

ಕೇಳರಲೇ ಮೂಡನ ದಿಕ್ಕಿನ್ಯಾಗ್
ಹೆಣಾ ಎಣಿಕಿ ಇಲ್ದ ಬಿದ್ದಾವ್
ಹಂದಿ ನಾಯಿಗೋಳ ತಿಂದ ದಣದಾವ್
ಹಿಂಗ್ ಆಗದಂಗ್ ನೋಡರಲೇ[೨೬೩]

ನಾಲ್ಕು ಮಂದಿ ಬರಲೇ ಸುತ್ತ ಮೂರು ಗಾವುದ ದಾಟಿ ಸುದ್ದಿ
ತಂದನ್ ಅಲ್ಲಿಂದ ಕಡೋಲಿ ಇಟ್ಟಪ್ಪ ಬಂದಾನ್
ಭಂಡಾರ್ ಹಚ್ಯಾನ ಕೌಲ್ ಕೇಳ್ಯಾರ್
ಮಕ್ಕಳ ಮರಿ ಆಗತಾವ್ ಮೂರು ಅಮಾಸಿ
ಬಂದ್ ಹೋಗಪ್ಪ[೨೬೪]

ತಂಗಿ ಚಂದಾಗಿ ಕೇಳ್ ಹಾಲು, ಹೈನು,
ಮೊಸರು ಗಡಿಗ್ಯಾಗ್ ಇಲ್ಲ
ಇದು ದೂರದ ಮಾತು ಅಲ್ಲ
ಮನಿ ಮನಿಗೆ ಕಡಬಿ ಇಟ್ಟಪ್ಪ ಸಾರಿ ಹ್ಯಾಳ್ಯಾನ್[೨೬೫]

ಹುನ್ನ ಎಲ್ಲರಿಗೂ ಬರ್ತದಲೇ ಅದಕ ಅಂಜಬ್ಯಾಡ್ರಿ
ಹುನ್ನ ಗುರು ಬೀರಪ್ಪಗ ಬಿಟ್ಟಿಲ್ ಭಂಡಾರ್ ಹಾಕರಲೇ[೨೬೬]

ಎಲೇ ರೈತ ಭಕ್ತಿಯಿಂದ ಬಿತ್ತರಲೇ ಮುಣ್ಯಾದ ಬೆಳಿ ಬರ್ತೈತಿ
ಆಗ ಅಂಗೈ ನೋಡಿ ಮುಂಗೈ ಏರತಾವ
ಅನ್ನದ ಮನಿ ಆಗ್ತದ್[೨೬೭]

ತಂಗೀ ಅಂಜಬ್ಯಾಡ
ಐದು ಅಮಾಸಿ ನನ್ನ ಗುಡಿಗಿ ಬಾ
ಹೂ ಹಾರಸ್ ಬೆಕ್ಕಾ ಹಿಡಿದ ತಂದ್
ನಿನ್ನ ಕೈಯಾಗ್ ಕೊಟ್ಟೇನ್ ಮಕ್ಕಳ ಆಗತಾವ ಹಿಡಿ ಭಂಡಾರ್[೨೧೮]

ಬ್ಯಾಡ, ಬ್ಯಾಡ ಏ ತಮ್ಮ
ಉರಿವ ಕಿಚ್ಚು ಬಂದಾವ್
ಹೋಗಬ್ಯಾಡ ತಡಕೊಂಡಷ್ಟು ಸುಖ ಐತಿ
ಚಿಂಚಲಿ ಮಾಯವ್ವ ಹೇಳ್ಯಾಳ[೨೧೯]

ಕಣ್ಣೀಲಿ ನೋಡಬಾರದ ಮುತ್ತಿನ ಸೆರಗ ಹಿಡಿದಾರ
ಹೊಟ್ಟಿಮ್ಯಾಲ ಕೈಯಿಟ್ಟು ಪಿಂಡಾಂಡ ನೋಡ್ಯಾನ್
ನಿಂಗ್ ಬೀರಣ್ಣ ಹೇಳಕಿ ಹೇಳ್ಯಾನ[೨೨೦]

ಮುಂತಾದ ಉದಾಹರಣೆಗಳನ್ನು ನೋಡಿದಾಗ ಭಾಷಾ ಬಳಕೆಯ ಒಂದು ಘಟನೆಯನ್ನು ಹೇಳುವಾಗ ಶಬ್ದಗಳು ಕ್ರಿಯೆಯನ್ನು ಅಭಿನಯಿಸುವಂತೆ ಭಾಸವಾಗಿ ಹೇಳಿಕೆಗಳ ಭಾಷಾ ಸೌಂದರ್ಯವನ್ನು ಹೆಚ್ಚಿಸಿವೆ. ಅವು ಕಲಾತ್ಮಕವಾಗಿ ಮತ್ತು ಸಹಜವಾಗಿ ಮೂಡಿ ಬಂದಿವೆಯೇ ಹೊರತು ಹೊರೆಯಾಗಿ ಬಂದಿಲ್ಲ. ಇದು ಕುರುಬರ ಗೀತ ಹೇಳಿಕೆಗಳ ಸಾಹಿತ್ಯದ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಕುರುಬರ ಹೇಳಿಕೆಗಳಲ್ಲಿ ಭಾಷಾ ವ್ಯವಹಾರದಲ್ಲಿ ಸಂದರ್ಭಕ್ಕೆ ತಕ್ಕಂತೆ ದ್ವಿರುಕ್ತಿಗಳನ್ನು ಬಳಕೆಯಾಗುತ್ತವೆ. ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನು ಅಥವಾ ಒಂದು ವಾಕ್ಯವನ್ನು ಅವಕಾಶ ಅಥವಾ ಬಿಡುವ ಇಲ್ಲದೇ ಎರಡು ಸಲ ಪ್ರಯೋಗಿಸುವುದನ್ನು ದ್ವಿರುಕ್ತಿ ಎನ್ನುವರು

- ಬ್ಯಾಡ ಬ್ಯಾಡ ಬೀರಾ
- ಮಾಯವ್ವ ಮಾಯವ್ವ ಬರ್ತಾಳ
- ತಾತಾತಾ ನನಗ ತಾ
- ಬೀರ್ಯಾ ಬೀರ್ಯಾ ನೀ ಹೇಳಲೇ
- ಬಯಲು ಬಯಲು ಬಟಾ ಬಯಲು
- ಕತ್ತಲದಾಗ ನಾನಾ ಅಲ್ಲ... ನೀನೀ ಅಲ್ಲ...ಬೀರ

ಭಾವನೆಗಳ ತೀವ್ರತೆಗೆ ದ್ವಿರುಕ್ತಿಗಳ ತುಂಬ ನೆರವಾಗುತ್ತವೆ. ಭಾಷಿಕ ಸನ್ನಿವೇಶವನ್ನು ಕಣ್ಮುಂದೆ ಕಟ್ಟುವಂತೆ ಮಾಡುವ ಚಿತ್ರಕ ಶಕ್ತಿ ದ್ವಿರುಕ್ತಿಗಳಿಗಿದೆ. ಅವು ಹೇಳಿಕೆಗಳಲ್ಲಿ ಧಾರಾಳವಾಗಿ ಬಳಕೆಯಾಗುತ್ತವೆ.

ಹೇಳಿಕೆಗಳಲ್ಲಿ ಭಾಷಿಕರ ಜೀವನ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಂಬೋಧನಾ ರೂಪಗಳು ಮಹತ್ವದ ಪಾತ್ರವಹಿಸುತ್ತವೆ. ಕರೆಯುವಾಗ ಇಲ್ಲವೆ ಕೂಗುವಾಗ ಉಪಯೋಗಿಸುವ ಪದಗಳು ಸಂಬೋಧನೆಗಳಾಗಿವೆ. ವ್ಯಾಕರಣ ವರ್ಗಗಳಲ್ಲಿ ಸಂಬೋಧನೆಗಳು ಅವ್ಯಯಗಳ ಕಕ್ಷೆಯಲ್ಲಿ ಬರುತ್ತವೆ. ಕುರುಬರ ಹೇಳಿಕೆಗಳ ಭಾಷಾ ವ್ಯವಹಾರದಲ್ಲಿ ಹಲವಾರು ಸಂಬೋಧನಾ ರೂಪಗಳು ಬಳಕೆಯಾಗುತ್ತವೆ.

- ಎಪ್ಪಾ ಗೌಡ
- ಲೇ ಭರಮ್ಯಾ
- ಲೇ ಹುಡುಗಾ, ಲೇ ಸೊಂಡಿ ಹುಡುಗಾ
- ಮಗಾ ಬಾಬಾ ಇತ್ತ ಬಾ
- ನಾನ್ರಿ... ನಿಮ್ಮ ಹೇಣ್ತಿ ಮಾಯವ್ವ
- ಸಾಕ್ರಿಯಪ್ಪಾ... ಭಾಳ ಆತ್ರಿ, ಬೀರಪ್ಪನ ಹುಗ್ಗಿ
- ಲೋ ನಾಲಾಯಕ
- ಲೋ ಮಗನೇ ಕುಡ್ಡಾ
- ಎಲಾ ಮುದಕಿ
- ಎಲೇ ಭರಮಾ ಬಾ ಇಲ್ಲಿ
- ಓ ಹೀಗಾಯಿತು
- ಎಲೇ ಮಗನೆ ನಾ ತೆಗೆದುಕೊಳ್ಳುವವನಲ್ಲ , ಕೊಡುವವನು
- ಎಲೇ ಹಾಕರಲೇ ಡೊಳ್ಳು
- ಎನಲೇ, ಎಲ್ಲಿಯದು?
- ಲೇ ಅಂಗ್ಯೆ ಹಿಡಿಕೊಂಡ ಕೇಳ್, ಮುಂಗ್ಯೆ ಕೊಡಲೇ
- ಕಂಡೆ, ಕಂಡಣ್ಣ
- ಅಂದೆಂತು?, ಛೀ
- ಕಾಣಿರೇ ಏಕೆ?

– ಎಲ್ಲವೋ, ಕಾಣಿರೋ

– ಎಲ್ಲಿಯದೋ, ಏಕೋ

– ಅದೆಂತೋ, ಏತಕೋ

ಏ ತಮ್ಮ ಉರಿವ ಕಿಚ್ಚು ಬಂದಾವ್ ಹೋಗಬ್ಯಾಡ
ತಡಕೊಂಡಷ್ಟು ಸುಖಾ ಐತಿ ಚಿಂಚಿಲಿ ಮಾಯವ್ವ ಹೇಳ್ಯಾಳ[೨೭೧]

ಕೇಳ್ರಲೇ ಕಣ್ಣೀಲಿ ನೋಡಬಾರದ ಮುತ್ತಿನ ಸೆರಗ ಹಿಡಿದಾರ
ಹೊಟ್ಟಿಮ್ಯಾಲ ಕೈಯಿಟ್ಟು ಪಿಂಡಾಂಡ ನೋಡ್ಯಾನ್
ನಿಂಗ್ ಬೀರಣ್ಣ ಹೇಳಕಿ ಹೇಳ್ಯಾನ[೨೭೨]

ಮಕ್ಕಳಿರಾ ಇದ ಸುಖಕಾಲ ಅಲ್ಲರಲೇ
ಹೊಟ್ಟಿ ಹೊಸದ ದಾಟಬೇಕು ಗ್ವಾಡಿ ಹಿಡಿದ ನಡಿಬೇಕು
ಸೋತ ಮಾತಾಡಿದರ ಬಾಳೆ ಆಕ್ಕತಿ
ಸಣ್ಣವನಾಗಿ ಸರಕೋಲೆ[೨೭೩]

ಭೂಮಿಮ್ಯಾಲ್ ಕರ್ಮ ಹೆಚ್ಚಾತಾಯಿದೆ ಧರ್ಮ
ಮುಳುಗ್ತಾಯಿದೆ ಧರ್ಮಿಗಳ ರಾಜ್ಯ ಲೋಪಾಗಿ
ಈ ಕಲಿಯುವ ಕರ್ಮಿಗಳದೇ ಆಟ ಆಗ್ತಾಯಿದೆ[೨೭೪]

ಲೋಕದಾಗ ಮಾನವಂತರು ಇಲ್ಲಾ ದಾನವಂತರು
ಇಲ್ಲಾ ಮಾನ ಹೋಗ್ತಾಯಿದೆ ಅದಕ ಭೂಮಿಮ್ಯಾಲ್
ಮಳಿ ಬೆಳಿ ಕಡಿಮೆ ಆಗತಾ ಇದೆ[೨೭೫]

ಇಂತಹ ಸಂಬೋಧನೆಗಳ ವಿಭಿನ್ನ ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಬಳಕೆಯಾಗುತ್ತದೆ. ಸಂಬೋಧನೆಗಳಿಂದಲೇ ಭಾಷಿಕರ ಹೇಳುಗರ ಮತ್ತು ಕೇಳುಗರ ಭಾಷಾ ಮನೋವೃತ್ತಿಗಳನ್ನು ಹಾಗೂ ಬೇರೆ ಭಾಷಿಕರೊಡನೆ ಆಹಾ, ಆಹಾಹಾ, ಭಲೆ, ಭಲಾ, ಛಿ, ಥೂ, ಓಹೋ, ಹೋ,

ಹೋಹೋ, ಏ, ಏಏ, ಚಿ, ಥು ಮುಂತಾದ ಭಾವಸೂಚಕ ಪದಗಳು ಒಡೆಯರರ ಸಂಭಾಷಣೆಯಲ್ಲಿ ಅರ್ಥಪೂರ್ಣವಾಗಿ ಬಳಕೆಯಾಗಿವೆ. ಇದರಿಂದ ಒಂದು ಸನ್ನಿವೇಶದ ಸಾಂಸ್ಕೃತಿಕ ವಿವರಗಳು ಹಾಗೂ ಭಾಷಾ ವ್ಯವಹಾರದ ಸೂಕ್ಷ್ಮತೆಗಳು ಕಂಡುಬರುತ್ತವೆ. ಒಡೆಯರರ ಅಭಿವ್ಯಕ್ತಿಯಲ್ಲಿ ಸಮಾಜದ ತುಡಿತವಿದೆ. ಅವರು ಸಂಬೋಧನೆಗಳನ್ನು ಬಳಸುವುದರೊಂದಿಗೆ ಭಾಷೆಯ ಅರ್ಥವಲಯವನ್ನು ಹಿಗ್ಗಿಸಿದರು. ಅವರು ಬಳಸಿದ ಸಂಬೋಧನ ರೂಪಗಳ ಅಭ್ಯಾಸದ ಮೂಲಕ ಭಾಷಾ ವೈಶಿಷ್ಟದ ಜೊತೆಗೆ ಸಾಮಾಜಿಕ ವೈಶಿಷ್ಟಗಳನ್ನು ಅರಿಯಬಹುದಾಗಿದೆ.

ತಪ್ಪ ಇದ್ದರ ತೆಗೆದು ಹಾಕಿರಿ
ನನಗ ಬೀರಪ್ಪನ ಉಡಿಗಿ ಹಾಕೊಳ್ಳರಿ[೨೭೬]

ಹೆಂಡತಿ ಒಂದ ಕಡೆ
ಗಂಡ ಒಂದ ಕಡೆ
ಹುಂಜದ ಕಾಳಗ ಹಾಗಲೇಡಿರಲೇ
ಹೊಂದಕೊಂಡ್ ಹೋಗ್ರಿ[೨೭೭]

ಅಂತು ಇಂತು ಅನ್ನ ಬ್ಯಾಡರೀ
ಹುಚ್ಚ ಸೂಳಿಮಕ್ಕಳು ನೀವು
ಹೊತ್ತ ಕಳದ ವ್ಯಾಳೆ ಹಾಳಮಾಡಿ ಅಂತರಂಗ ತಿಳಿಲಿಲ್ಲ[೨೭೮]

ದೀವಿಗೆ ದೀಪದ ಕುಡಿಹಂಗ್ ದಿನಮಾನ ಬಂದಾವು
ಗೊತ್ತಿ ನೋಡಿ ಹೊತ್ತು ಹೇಳಬೇಕು[೨೭೯]

ಮಳಿ ಬಂದ್ ದೇಶ
ತೆಪ್ಪಾಗತೈತಿ ಈ ವರ್ಷ ಹೊಟ್ಟೀಗಿ ನೆತ್ತಿಗಿ ಏನ ಕಡಿಮಿಲ್ಲ[೨೮೦]

ನರ ಜನ್ಮಕ ಬಂದು ಗರವು ಇರಬಾರದು
ಅರಿವಿನೊಳಗೆ ಅರಿವು ಇರಬೇಕು[೨೮೧]

ತಂದಿ–ತಾಯಿನ ಸೇರಲಿಲ್ಲ
ಮನಕ ನಾಚಿಕಿ ಹುಟ್ಟಲಿಲ್ಲ
ಕನಕ–ಹೆಣ್ಣು–ಮಣ್ಣಿಗಾಗಿ
ನಾಯಿಯಂತೆ ಬೆನ್ನ ಹತ್ತಬಾರದ[೨೮೨]

ಹಣ್ಣಿನೊಳಗ ರಸ ಇಲ್ದಂಗ ಹಂಗ್ರ್ಯೋ
ಭಾವ ಸಿದ್ದ ಇರಬೇಕೋ
ಮರ ಬಾಯಿ ಬಿಡತೈತಿ ಕೆಳಗ ನೀರ ಹಾಕ್ರೋ[೨೮೩]

ಶಬ್ದಗಳ ಜೊತೆಗೆ ಭಾಷೆಯ ನಿಜವಾದ ಶಕ್ತಿ ವ್ಯಕ್ತವಾಗುವುದು ನುಡಿಗಟ್ಟುಗಳಲ್ಲಿ ಒಡೆಯರರ ಅನುಭವ ಹಾಗೂ ಭಾಷಾ ಸಾಮರ್ಥ್ಯಕ್ಕೆ ನಿದರ್ಶನವಾಗಿ ನೂರಾರು ನುಡಿಗಟ್ಟುಗಳನ್ನು ಕಾಣಬಹುದು. ಅವು ಅವರ ಬದುಕಿ, ಬಾಳುತ್ತಿರುವ ಸಂಸ್ಕೃತಿಯ ಸ್ವರೂಪವನ್ನು ನಿಚ್ಚಳವಾಗಿ ಗುರುತಿಸಿಕೊಡಬಲ್ಲವು. ಮೇಲಿನ ಉದಾಹರಣೆಗಳ ಮೇಲಿಂದ ಒಂದು ಉಪಭಾಷೆಯ ಅಧ್ಯಯನ ಭಾಷೆ ಮತ್ತು ಸಂಸ್ಕೃತಿಗೆ ಎಂತಹ ಕೊಡುಗೆ ನೀಡಬಲ್ಲುದು. ಐತಿಹಾಸಿಕವಾಗಿ ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳಲು ಅವು ಹೇಗೆ ಸಹಾಯಕವಾಗಬಲ್ಲವು ಎಂಬುದು ಮನದಟ್ಟಾಗಿರಲು ಸಾಕು. ಕರ್ನಾಟಕದ ಇತರೆ ಸಮುದಾಯಗಳಲಿಲ್ಲದ ಕುರುಬ ಸಮುದಾಯದ ಒಡೆಯರಲ್ಲಿ ಮಾತ್ರ ಕಂಡು ಬರುವ ಅನೇಕ ಪದಗಳು ಸ್ವಾರಸ್ಯಕರವಾಗಿ, ಅರ್ಥಪೂರ್ಣವಾಗಿ, ಹಿತವಾಗಿ ಇರುವುದರಿಂದ ಅವುಗಳನ್ನು ಕನ್ನಡ ಪದಗಳೊಡನೆ ಬೆರಸಿ ಬಳಸಿದಲ್ಲಿ ಕನ್ನಡದ ಶಬ್ದಸಂಪತ್ತು ಹಿಗ್ಗುತ್ತದೆ. ಈ ದೃಷ್ಟಿಯಿಂದ 'ಸಮಗ್ರ ಹಾಲುಮತ ಪದಕೋಶ' ಸಿದ್ಧವಾಗಬೇಕಾಗಿದೆ. ಅದರಿಂದ ಕನ್ನಡದ ಭಾಷೆಯ ಬಳಕೆಯ ಸಾಧ್ಯತೆ ವ್ಯಕ್ತವಾಗುತ್ತದೆ. ಈ ಅಧ್ಯಾಯದಲ್ಲಿ ಕುರುಬರ ಹೇಳಿಕೆಗಳ ಭಾಷೆಯ ವರ್ಣನಾತ್ಮಕ ಅಧ್ಯಯನಕ್ಕೆ ಹೆಚ್ಚು ಒಲವು ತೋರಿಸದೆ ಭಾಷಾ ಬಳಕೆಯ ಸಾಮಾಜಿಕ ಆಯಾಮದ ಕಡೆಗೆ ಒತ್ತುಕೊಡಲಾಗಿದೆ.

ಒಂದೇ ಹೇಳಿಕೆ ಉದ್ಗಾರ ವಿಟ್ಟರೆ ಒಂದು ಅರ್ಥ, ಪ್ರಶ್ನೆಯಿಟ್ಟರೆ ಇನ್ನೊಂದು ಅರ್ಥ ಹೊರಡುತ್ತದೆ. ಹೇಳಿಕೆಗಳಲ್ಲಿ ಗದ್ಯದ ಸರಳತೆಯಿದೆ; ಪದ್ಯದ ಲಯವಿದೆ. ಅವು ಭಾವಗೀತೆಯಂತೆ ಸ್ವತಂತ್ರ. ಹೇಳಿಕೆಕಾರರು ಶಿಷ್ಟ ಮತ್ತು ವ್ಯವಹಾರಿಕ ಭಾಷೆಯ ಶಬ್ದ ಸಾಮಗ್ರಿಗಳನ್ನು ಧಾರಾಳವಾಗಿ ಬಳಸಿಕೊಳ್ಳುವುದರಿಂದ ಅವರ ಶೈಲಿಗೆ ಜೋರು–ಹುರುಪುಗಳ ನೈಜತೆ ಒದಗಿದೆ. ಪುಟ್ಟ, ಪುಟ್ಟ ವಾಕ್ಯಗಳ ರಚನೆ ಹೇಳಿಕೆಗಳ ವೈಶಿಷ್ಟ್ಯ ಒಡೆಯರರು ತಮ್ಮ ತಮ್ಮ ಪರಿಸರದ ರೂಪಕಗಳನ್ನು ಹೇಳಿಕೆಯ ರಚನೆಯಲ್ಲಿ ಪೋಣಿಸುತ್ತಾರೆ. ಎಂಬುದು ಗಮನಾರ್ಹ ಸಂಗತಿಯಾಗಿದೆ.

ಹೇಳಿಕೆಗಳಲ್ಲಿ ಅವುಗಳದೇ ಆದ ಧ್ವನಿರಚನೆ, ಪದರಚನೆಯನ್ನು ಹೊಂದಿರುವ ಹಾಗೆ ತಮ್ಮದೇ ಆದ ದೇಸಿ ಜ್ಞಾನ ಸಂಪತ್ತನ್ನು ಹುದುಗಿಸಿಕೊಂಡು ತಮ್ಮದೇ ಆದ ಭಾಷೆಯ ಸಾಮಾಜಿಕ ಚಹರೆಯನ್ನು ಉಳಿಸಿಕೊಂಡಿದ್ದಾರೆ. ಅವರಾಡುವ ವ್ಯವಹಾರಿಕ ಕನ್ನಡ ಒಂದು ಚಹರೆಯಾದರೆ, ಭಾಷಾ ಬಳಕೆಯ ಸಾಮಾಜಿಕ ಚಹರೆ ಇನ್ನೊಂದು ಬಗೆ. ಸಾಮಾಜಿಕ ನಿಯೋಗದ ಭಾಷಾ ಬಳಕೆಯಲ್ಲಿ ಹಲವು ವಾಗ್ರೂಢಿಗಳನ್ನು ಬಳಸುತ್ತಾರೆ. ಅವುಗಳ ಬಳಕೆಯ ಸ್ವರೂಪ ಅಧ್ಯಯನ ಯೋಗ್ಯವಾಗಿದೆ. ಅಂತಹುಗಳಲ್ಲಿ ಗಾದೆಗಳೂ ಒಂದಾಗಿವೆ. **ಗಾದೆ** ಒಂದು ಜನಾಂಗದ ನಿತ್ಯ ಮಾತಿನ ಅಂಗ. ಜನತೆಯ ಬದುಕು ಗಾದೆಗಳಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿದೆ. ಕಿರಿದರಲ್ಲಿ ಹಿರಿದಾದ ಅರ್ಥವನ್ನು ತುಂಬಿದ ಗಾದೆಗಳು ಜೀವನಾನುಭವದ ಸರ್ವಾದರಣೀಯ ಹರಳುಗಳಂತೆ ಕಾಣಿಸಿಕೊಳ್ಳುತ್ತವೆ. ಗಾದೆಗಳಲ್ಲಿ ಬದುಕಿನ ಹಲವು ಮುಖಗಳು ಚಿತ್ರಿತವಾಗಿರುವುದರಿಂದ ಅವುಗಳಿಗೆ ಸಾರ್ವತ್ರಿಕ ಮುದ್ರೆ ಬಿದ್ದಿರುತ್ತದೆ. ಹೇಳಿಕೆಗಳು ಆಗುವಾಗ ಸಾಮಾಜಿಕ ಚೌಕಟ್ಟಿನಲ್ಲಿ ಹಲವಾರು ಗಾದೆಗಳನ್ನು ಧಾರಾಳವಾಗಿ ಒಡೆಯರರು ಬಳಸುತ್ತಾರೆ.

'ಹಾಲ ಹರವಿಯೊಳಗೆ ಹುಳಿ ಬಿಟ್ಟಂತೆ'

'ಯಾರ್‍ದೊ ದುಡ್ಡು ಎಲ್ಲಮ್ಮನ ಜಾತ್ರೆ ಆಗಬಾರದು'

ರಾಗಿ ಅಂದ್ರ ನಿಮ್ಮಪ್ಪ ಜೋಗಿ ಅಂದ'

'ಮೂರು ಕಂಬದ ತೊಟ್ಟಿ ಅರು ಕಂಬದ ಹಟ್ಟಿ'

'ಮುದುಕು ಕಣ್ಣಿಗೆ ಪಟ್ಟಿ'

'ಬಗ್ಗಿದ ಬೆನ್ನಿಗೆ ಬಂಡೆ ಕಟ್ಯಾಡ್ರಿಲೆ'

'ಎಮ್ಮೆ ಉಚ್ಚೆ ಹೋದ ಹಾಗೆ'

'ಕುರಿಹಿಕ್ಕಿ ಹೊಲದಾಗ ಬೀಳಲೆ

'ಮುತ್ತಿನಂತ ಜ್ವಾಳ ಹೊಲದಾಗ'

'ಭರಮಪ್ಪ ಕೊಟ್ಟದ ಮರಿಬ್ಯಾಡ್ರಿ, ಉಂಡ ಮನಿ ಜಂತಿ ಎನಿಸಬ್ಯಾಡ್ರಿ'

'ಬೀರಪ್ಪನ ಮಾತು ಹಸಿ ಗ್ವಾಡ್ಯಾಗ ಗೂಟಾ ಜಡಿದಂಗ'

ಮುಂತಾದ ಗಾದೆಗಳು ಬಳಕೆಯಾಗಿವೆ. ಅದರಂತೆ ಕುರುಬರನ್ನು ಉದ್ದೇಶಿಸಿ ಸೃಷ್ಟಿಯಾದ ಗಾದೆಗಳಂತೆ ವಿಶಿಷ್ಟ ಪದಪುಂಜಗಳೂ ಹೇಳಿಕೆಗಳಲ್ಲಿ ಬಳಕೆಯಾಗಿವೆ. ಅವು ಆ ಸಮುದಾಯದ ಸಂಸ್ಕೃತಿಯನ್ನು ಪರೋಕ್ಷವಾಗಿ ಬಿಂಬಿಸುತ್ತವೆ.

– ಕುರುಬರ ಕೈಯಿಂದ ಬೋಣಿಗೆಯಾಗಬೇಕು

– ಶುಭ ಕಾರ್ಯದಲ್ಲಿ ಕುರುಬರ ಹೆಂಡತಿ ಎದುರಾಗಬೇಕು

– ಕುರುಬನಿಗೆ ಹೂ ಕೊಟ್ಟರೆ ಕುರಿಗೆ ಕೊಟ್ಟ

– ಕುರಿ ಉಚ್ಚಿ ಹೊದ ಹಾಗೆ ಮಾತಾಡಬೇಡ

– ಕುರುಬರು ಕೊಡದೆ ಕೆಟ್ಟರು

– ಕುರುಬ ಸಾಲಿಕಲಿತು ಕುಟುಂಬ ಎಬ್ಬಿಸಿದ

– ಕುರುಬನಿಗೇನು ಗೊತ್ತು ಕೊಂತೆವ್ವನ ಕಾರಬಾರ

– ಕುರುಬ ಕುಂಡ್ರಲಿಲ್ಲ; ನಾಯಿ ನಿಂದರಲಿಲ್ಲ

– ಅಡ್ಡಗ್ವಾಡಿ ಮೇಲಿನ ದೀಪಲ್ಲ
ಕುರುಬರು ಮಾತಾಡುವ ಮಾತಲ್ಲ

– ಕಂಬಳ್ಯಾಗ ಕಿಚಡಿ ಉಂಡ ಹಾಗೆ ಮಾಡಬ್ಯಾಡ್ರಲೇ

– ಕುರುಬರ ನೆರೆಯಲ್ಲಿ ಇದ್ದರೂ
ಕೀಚಗನ ಕಿಳ್ಳೇಲಿ ಇರಬಾರದು

– ಕಂಡೋರ ಕಂಬಳಿ ಹೊದ್ದುಕೊಂಡು ತನ್ನ ಗಂಡ ಘನ ನೋಡು

– ಕುರಿ ಶಾಪಕ್ಕೆ ಗೂಗಿ ಸಂತಾಪ

– ಕಾಡು ಹೆಚ್ಚಿದರೆ ಕುರಿ ಬೀಡು

– ಕುರಿ ಕೊಟ್ಟೋರಿಗೆ ಮರಿ ಕೊಡಬೇಕು

– ರೊಖ್ಖ ಇದ್ದವಗ ಹಸುವಿಲ್ಲ
ಹಸು ಆದವನಿಗೆ ರೊಖ್ಖ ಇಲ್ಲ ಕುರಿ ಮಲಗಿದರ ಕೆಟ್ಟ ಅಲ್ಲ

– ಕರಿ ಕಂಬಳಿ ಕುರುಬ ಸರ್ಪೋತ್ತಿನಲ್ಲಿ ಹೊಂಟ

– ಕುರುಬರ ಹುಡುಗನಿಗೆ ಮೈಯಲ್ಲ ಜುಂಗ

– ಕುರಿ ಬಾಯಿ, ಹೆಂಗಸರ ಕೈ
ಎಂದೂ ಸುಮ್ಮನಿರುವುದಿಲ್ಲ

– ಕುರಿ ಹಾಲು ಮಕ್ಕಳಿಗೆ ಸರಿ

– ಕುರಿ ಕಾಯುವವನ್ನೇ ತ್ವಾಳ ಎತ್ತುಕೊಂಡು ಹೋದಂತೆ

– ಕುರುಬ ಕೂಟವಲ್ಲ ಸಣಬು ಶಾಟವಲ್ಲ

– ಕುರುಬರ ಕೂಟ ಒಡುದ್ಮ್ಯಾಲೆ ಮುಡುಕ್ತೊರೇಲೀ ನಿಧ್ಧಿತು ?

– ಕುರುಬನೇನು ಬಲ್ಲ ಮರುಗದ ಗಮನವ

- ಕುರುಬನ ಕೈಲಿ ಮರುಗ ಕೊಡೋವೊತ್ತಿಗೆ
  ಮೂಸಿ ನೋಡಿ ತಿಕಕ್ಕೆ ಇಟ್ಟು ಕೊಂಡನಂತೆ
- ಕುರುಬರು ಕುರುಬರು ಕೂಡಿದರ ದೊಣ್ಣೆ ತಕ್ಕೊಂಡು ಹೋಗ್ತಾರ
- ಗಾಳಿ ಬಿಟ್ಟಾಗ ತೂರಿಕೊಳ್ಳಬ್ಯಾಡ್ರಲೇ ತಿಳದ ನೊಡ್ರಲೇ
- ಮಂಗ್ಯಾ ಹುಲ್ಲಾಗ ಒದ್ಯಾಡುವಂತೆ ಅಳಿ ಗಂಟಿನ್ಯಾಗ ಲಗಾ ಹೊಡಿಬ್ಯಾಡ್ರಲೇ
- ನನಗ ಬೇಕಾದ್ರ ಊರಿಗೆ ಬೇಕಾಗತೈತ್ತಿ

ಒಡೆಯರರ ತಮ್ಮ ಕಾಲದಲ್ಲಿ ಪ್ರಚಲಿತವಿದ್ದ ಗಾದೆಗಳನ್ನು ತಮ್ಮ ಆಶಯಗಳಿಗೆ ತಕ್ಕಂತೆ ಮಾರ್ಪಡಿಸಿಕೊಂಡಿದ್ದಾರೆ. ಅಲ್ಲೆಲ್ಲ ದೇಶಿ ಪದಗಳ ಆಧಿಕ್ಯ, ಸಮಷ್ಟಿಯ ದಿಟ್ಟ ಅನುಭವ, ಸಾಮಾಜಿಕ ಪ್ರಜ್ಞೆ ಮೊದಲಾದ ಗುಣಲಕ್ಷಣದಿಂದ ಕೂಡಿವೆ. ಅವರು ಹೇಳಿಕೆಗಳಲ್ಲಿ ಬಳಸಿದ ಗಾದೆಗಳನ್ನು ಬದುಕಿನ ಎಲ್ಲ ಮಗ್ಗುಲಗಳ ಪರಿಚಯ ಮಾಡಿಕೊಡುತ್ತವೆ. ಆ ಮೂಲಕ ಕನ್ನಡ ಭಾಷೆಗೆ ಹೊಸ ಆಯಾಮ ತಂದು ಕೊಟ್ಟಿವೆ. ಅವರು ಸಮುಚಿತವಾದ ಹೋಲಿಕೆ. ಸುಸಂಬದ್ದವಾದ ರಚನೆಯ ವಿನ್ಯಾಸ ಇವುಗಳಿಂದ ಮೈದುಂಬಿಕೊಂಡಿವೆ. ಪ್ರತಿಯೊಂದು ಹೇಳಿಕೆ ಹಿಂದೆ ಜನಪದದ ಜೀವನಾಡಿ ಇದೆ.

ಕುರುಬರು ಮೂಲತಃ ಪಶುಪಾಲಕರು. ಅವರು ಊರುರು ಅಲೆಯಬೇಕಾಗಿರುವುದರಿಂದ ಎಲ್ಲ ಸಮುದಾಯದವರ ವಿಶ್ವಾಸಕ್ಕೆ ಪಾತ್ರರಾಗುತ್ತಾರೆ. ಎಂಬುದು ಮೇಲಿನ ಹೇಳಿಕೆಯಲ್ಲಿರುವ ಗಾದೆಗಳಿಂದ ವ್ಯಕ್ತವಾಗುತ್ತದೆ. ಗಾದೆಗಳ ಭಾಷಿಕ ರಚನೆ ಗಮನಾರ್ಹ. ಅಲ್ಲಿ ಬಳಕೆಯಾಗುವ ಪ್ರಾಸ, ಲಯ, ನಾದ, ಅಕ್ಷರಗಳ ಆವೃತ್ತಿ ಕಿವಿಗೆ ಇಂಪನ್ನು ತಂದುಕೊಡುತ್ತದೆ. ಅದರ ಜೊತೆಗೆ ಭಾಷೆಯ ಸಮತೋಲನವನ್ನು ಗಮನಿಸಬೇಕು. ಆ ರಚನೆಗಳ ಮೇಲೆ ಮೊದಲ ಭಾಗದ ಮೊದಲ ಸ್ವರಗಳ ಮೇಲೆ ಮತ್ತು ಎರಡನೆಯ ಭಾಗದ ಮೊದಲ ಸ್ವರದ ಮೇಲೆ ಧ್ವನಿತರಂಗಗಳ ತೀವ್ರತೆ ಅಥವಾ ಒತ್ತಡ ಹೆಚ್ಚಿರುತ್ತದೆ. ಅದನ್ನೇ ಆಘಾತ ಎನ್ನುವರು. ಈ ಅಂಶಗಳ ಜೊತೆಗೆ ಕುರುಬ ಸಂಸ್ಕೃತಿಯ ಒಂದು ಪರಂಪರೆಯನ್ನು ಆ ಗಾದೆಗಳು ಕಟ್ಟಿಕೊಡುತ್ತವೆ. ಇದರಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಕುರುಬರ ಗಾದೆಗಳನ್ನು ತಮ್ಮ ಆಶಯಗಳಿಗೆ ತಕ್ಕಂತೆ ಮಾರ್ಪಡಿಸಿಕೊಂಡಿದ್ದಾರೆ. ಅಲ್ಲೆಲ್ಲ ದೇಸಿ ಪದಗಳ ಆಧಿಕ್ಯ, ಸಮಷ್ಟಿಯ ದಿಟ್ಟ ಅನುಭವ, ಸಾಮಾಜಿಕ ಪ್ರಜ್ಞೆ ಮೊದಲಾದ ಗುಣ ಲಕ್ಷಣಗಳಿಂದ ಕೂಡಿವೆ. ಅವರು ಬಳಸಿದ ಗಾದೆಗಳು ಬದುಕಿನ ಎಲ್ಲ ಮಗ್ಗಲುಗಳ ಪರಿಚಯ ಮಾಡಿಕೊಡುತ್ತವೆ. ಕುರುಬ ಸಮುದಾಯದವರು ತಮ್ಮ ಉದ್ದೇಶ ಸಿದ್ಧಿಗಾಗಿ ತಮ್ಮ ಪ್ರದೇಶದ ವ್ಯಾವಹಾರಿಕ ಕನ್ನಡವನ್ನು ಗಾದೆಗಳ ರಚನೆಯಲ್ಲಿ ಬಳಸಿದ್ದಾರೆ.

ಕುರುಬ ಹೇಳಿಕೆಗಳಲ್ಲಿ ಗಾದೆಗಳಂತೆ **ಒಗಟು**ಗಳನ್ನು ಒಡೆಯರು ತಮ್ಮ ಭಾಷಾ ಬಳಕೆಯಲ್ಲಿ ಪ್ರಯೋಗಿಸುತ್ತಾರೆ. ಜಾನಪದ ಗದ್ಯ ಸಾಹಿತ್ಯದ ಕಕ್ಷೆಯಲ್ಲಿ ಬರುವ ಪ್ರಕಾರಗಳಲ್ಲಿ 'ಒಗಟು' ಮುಖ್ಯವಾದುದು. ಬದುಕಿನ ನೋವು-ನಲಿವು, ಆಸರ-ಬೇಸರಗಳಲ್ಲಿ ಹಾಗೂ ಬೌದ್ಧಿಕ ಪರೀಕ್ಷೆಯ ಒರೆಗಲ್ಲಾಗಿ, ಮನರಂಜನೆಗಾಗಿ, ವಿರಾಮ ವೇಳೆಯ ಸದುಪಯೋಗಕ್ಕಾಗಿ ಒಗಟುಗಳು ಬಳಕೆಯಾಗುತ್ತವೆ. ಸಾಮಾನ್ಯವಾಗಿ ಒಗಟುವಿನಲ್ಲಿ ಒಂದು ವಸ್ತುವನ್ನು ಮತ್ತೊಂದು ವಸ್ತುವಿನ ವ್ಯಾಜ್ಯದಿಂದ ಚಮತ್ಕಾರವಾಗಿ ವರ್ಣಿಸುವುದು ಆ ವಸ್ತುವನ್ನು ಕಂಡು ಹಿಡಿಯುವಂತೆ ಹೇಳುವುದು. ಅದೊಂದು ಗೂಡಾರ್ಥ ದ್ಯೋತಕವಾದ ಸಂಕೇತ, ಪ್ರತಿಮೆ. ಶಾಬ್ದಿಕ ಸಂಕೇತಗಳಲ್ಲಿ ಹುದುಗಿರುವ ಅರ್ಥವನ್ನು ಹುಡುಕಲು ಪ್ರೇರೇಪಿಸುವುದು ಒಗಟಿನ ಪರಮಗುರಿ. ಬೇಸರ ಪರಿಹಾರ ಇಲ್ಲವೆ ಬೆಳದಿಂಗಳು ಸುಖಾನುಭವ ಪ್ರಸಂಗಗಳಲ್ಲಿ ಒಗಟುಗಳನ್ನು ಬಿಡಿಸುವ ಮೋಜು ನಡೆಯುತ್ತದೆ. ಇತರ ಭಾಷಾ ಸಮುದಾಯದಲ್ಲಿ ಒಗಟುಗಳು ಬಳಕೆಯಾಗುವಂತೆ ಕುರುಬ ಸಮುದಾಯದಲ್ಲಿಯೂ ಅವು ಧಾರಾಳವಾಗಿ ಬಳಕೆಯಾಗುತ್ತವೆ. ಡೊಳ್ಳು ಹಾಡುಗಳಲ್ಲಿ ಒಂದು ಪಂಗಡದವರು ಹಾಕಿದ ಒಗಟನ್ನು ಇನ್ನೊಂದು ಪಂಗಡದವರು ಬಿಡಿಸುವುದು. ಇನ್ನೊಂದು ಪಂಗಡದವರು ಹಾಕಿದ ಒಗಟನ್ನು ಒಂದು ಪಂಗಡದವರು ಬಿಡಿಸುವುದು. ಹೀಗೆ ಎರಡು ಪಂಗಡಗಳಲ್ಲಿ ಸ್ಪರ್ಧೆಯ ಹೆಜ್ಜೆ ಮುಂದುವರೆಯುತ್ತದೆ. ಒಗಟು ಒಡ್ಡಿದವರಿಗೆ ತೃಪ್ತಿ, ಉತ್ತರಿಸಿದವನಿಗೆ ಎಲ್ಲಿಲ್ಲದ ಉತ್ಸಾಹ. ಉದಾಹರಣೆಗೆ ಕೆಲವು ಒಗಟುಗಳನ್ನು ನೋಡಬಹುದು.

– ಬಾಯಿ ಅಗಲವಾಗಿ
ಮೂರು ಬೆರಳು ನುಂಗುವುದು
ಬೀಯ ಮಾರುವವನು
ಹೇಗಲೇರಿ ಬರುವುದು ಬಾಬಾ ಎಂದು ಕೂಗಿದರೆ
ಬಾಗಿಲಗಿ ಬರುವುದು
ರಾಯರಾಣಿಯರ ಹಸ್ತಕ್ಕೆ ಇಕ್ಕೆ ಒಪ್ಪುವುದು

ಇಂತಹ ಒಂದೊಂದು ಒಗಟುಗಳಲ್ಲಿ ಕಲಾಮಯತೆ, ನಿಗೂಢತೆಗಳಿರುವುದನ್ನು ಗಮನಿಸಬೇಕು. ಇವು ಕೇವಲ ರಹಸ್ಯಪೂರ್ಣ ವಾಕ್ಯಗಳಾಗಿರದೆ ರಸಪೂರ್ಣ ಹೇಳಿಕೆಗಳೂ ಆಗಿವೆ. ಒಗಟುಗಳು ಗೂಡೋಕ್ತಿ, ದ್ವಂದ್ವತೆ, ರೂಪಕತೆ, ಹಾಸ್ಯ ಇತ್ಯಾದಿ ಲಕ್ಷಣಗಳನ್ನು ಹೊಂದಿದ್ದು ಬೌದ್ಧಿಕ ಕಸರತ್ತನ್ನು ಒಳಗೊಂಡಿರುತ್ತವೆ. ಅವು ಒಂದು ಬಗೆಯ ಭಾಷಿಕ ಆಟಗಳು. ಅವುಗಳ ಅರ್ಥ ವೈವಿಧ್ಯತೆಯನ್ನು ಸಂದರ್ಭದ ಹಿನ್ನೆಲೆಯಲ್ಲಿ ತಿಳಿದು ಅರ್ಥೈಸಿಕೊಳ್ಳಬೇಕಾಗುತ್ತದೆ.

ಮೇಲಿನ ಉದಾಹರಣೆಯಲ್ಲಿ ಏಳೆಮ್ಮೆ, ಹೆತ್ತವ್ಮೆ ಹಾಗೂ ಹಿಂಡೆಮ್ಮೆಗಳು ಸಂಖ್ಯಾವಾಚಕಗಳಾಗಿಯೂ ಕ್ರಿಯಾಸೂಚಕಗಳಾಗಿಯೂ ಕೇಳುಗರಲ್ಲಿ ಭ್ರಮೆಯುಂಟು ಮಾಡುವುದರಿಂದ

ದ್ವಂದಾರ್ಥಕ್ಕೆ ಎಡೆ ಮಾಡಿಕೊಡುತ್ತದೆ. ಒಂದು ಎಮ್ಮೆ ಕೆರೆಯಲ್ಲಿ ಎದ್ದು, ಏರಿಯಲ್ಲಿ ಹತ್ತಿ, ಮನೆಯಲ್ಲಿ ಹಿಂಡುತ್ತದೆ ಎನ್ನುವ ಉತ್ತರವನ್ನು ಕಾಣಬಹುದು. ಒಗಟುಗಳ ಭಾಷೆ ಸಾಂಕೇತಿಕವಾದುದು. ಅದು ಗದ್ಯ-ಪದ್ಯಗಳೆರಡರಲ್ಲೂ ಉಂಟು. ಇಲ್ಲಿ ಗದ್ಯವೆಂದರೆ ಸಾಮಾನ್ಯ ಗದ್ಯವಲ್ಲ; ಕಾವ್ಯಮಯವಾದ ಗದ್ಯ. ಅದಕ್ಕೆ ಅವರದ್ದೇ ಆದ ಲಯ ವೈವಿಧ್ಯ ವಿರುತ್ತದೆ.

ಒಗಟಿನ ರೂಪದ ಹೇಳಿಕೆಗಳು ಪ್ರಶ್ನೆಯೊಂದಿಗೆ ಪ್ರಾರಂಭವಾಗಿ (ಸೃಷ್ಟಿಯನ್ನು ಕುರಿತಾಗ) "ಇಂತಾದು ಹಂಗಿತ್ತು, ಅಂತಾದು ಹಂಗಿತ್ತು, ಹಾಲಗ ಹಾಂಗಾರ ಅರ್ಥವನ್ನು ಹೇಳಿದರು, ನನ್ನನ್ನು ಪಾತರದಾರ ಲೇಸ ಎಂದು ಕರೆಯುತ್ತೇನೆ" ಎನ್ನುವುದರೊಂದಿಗೆ ಮುಕ್ತಾಯವಾಗುತ್ತದೆ. ತರ್ಕಶಾಸ್ತ್ರದ ವಿಷಯವೆ ಈ ಹಾಡುಗಳಿಗೆ ವಸ್ತುವಾಗುತ್ತದೆ. ಈ ಹಾಡುಗಳನ್ನು ಹೆಚ್ಚಾಗಿ ಜಾತ್ರೆಯ ವೇಳೆಯಲ್ಲಿ ಹಾಡುವುದುಂಟು. ಆಗ ಎಲ್ಲ ಡೊಳ್ಳು ಮೇಳದವರು ಪಾಳೆ ಪ್ರಕಾರ ಹಾಡುಗಳನ್ನು ಹಾಡುತ್ತಾರೆ. ಮೊದಲಿನ ಪಾಳೆಯದವರು ಒಂದು ಒಗಟಿನ ಹಾಡನ್ನು ಹಾಡಿದರೆ ಮುಂದಿನ ಪಾಳೆಯದವರು ಅದಕ್ಕೆ ಹಾಡುವ ಮುಖಾಂತರ ಉತ್ತರವಿತ್ತು ತಾವು ಮತ್ತೊಂದು ಒಗಟಿನ ಪದವನ್ನು ಹಾಡುತ್ತಾರೆ. ಜಾತ್ರೆಗೆ ಬಂದ ಯಾವುದೇ ಮೇಳದವರು ಉತ್ತರವನ್ನು ಹೇಳಬಹುದು. ಹಾಡನ್ನು ಹಾಡಿದವರೇ ಉತ್ತರ ನೀಡಿ ಜ್ಞಾನವಂತರು ಎಂಬ ಬಿರುದನ್ನು ಪಡೆಯುತ್ತಾರೆ.

ಅಂಡಜ ಪಿಂಡಜ ತತ್ತಿಯ ಪಡೆದಂತೆ
ಪಕ್ಷಿಯ ಕೂನ್ಯಾವದೇಳಣ್ಣಾ
ತತ್ತೊದವ ನೀರಾತು ನೀರಿಗೆ ಬೇರುಂಟು
ನೀರಿನ ಮಾರ್‍ಯಾವುದೇಳಣ್ಣಾ
ಬೈಲಿಗೆ ಬೈಲಿತ
ಬೈಲೊಳಗೇನಿತ್ತು
ಬೀಜಿಲದ ಮರ ಯಾವುದೇಳಣ್ಣಾ
ಹನ್ನೆರಡು ವಾಲಿಯು ಮೂವತ್ತೆರಡು ಕಾಯಿ
ಮರ್ತ್ಯಕ ಮರ ಯಾವುದೇಳಣ್ಣಾ[೨೮೪]

ಈ ಬಿರುದು ಪಡೆಯುವ ತುರುಸಿನಲ್ಲಿ ಕೆಲವೊಮ್ಮೆ ಜಾತ್ರೆಯೇ ನಿಂತುಹೋದ ಘಟನೆಗಳು ನಡೆದು ಮೇಳದವರು ಜಗಳಾಡಿ ಊಟ ಮಾಡದೆ ತಮ್ಮ ಊರುಗಳಿಗೆ ಹೋದದ್ದೂ ಉಂಟು. ಆಯಾ ಪ್ರಾದೇಶಿಕ ಭಾಷೆಯಲ್ಲಿಯೇ ಒಗಟು ರೂಪದ ಹೇಳಿಕೆಗಳು ಬಳಕೆಯಾಗುತ್ತವೆ. ೩+೪ ಮಾತ್ರೆಯ ಭಾಮಿನಿ ಲಯ ಅಲ್ಲಿ ಧಾರಾಳವಾಗಿ ಕಾಣಿಸುತ್ತದೆ. ಭಾಷಿಕ ಚಮತ್ಕಾರಗಳಾದ ಒಗಟುಗಳಲ್ಲಿ ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯಗಳಿರುತ್ತವೆ ಭಾಷಿಕವಾಗಿ ಅಕ್ಷರಗಳ ಆವರ್ತನೆ,

ದ್ವಂದ್ವಾರ್ಥ ಗೂಢಾರ್ಥಗಳಿರುತ್ತವೆ. ಕನ್ನಡದ್ದೇ ಆದ ಪದರಚನೆಗಳು, ಛಂದೋಲಯಗಳು ಹಾಗೂ ಆ ಸಮುದಾಯದ ಹಲವು ಸಂವೇದನೆಗಳೂ ಸಹಿತ ಒಗಟುಗಳಲ್ಲಿ ಗೋಚರಿಸುತ್ತವೆ.

**ಹೆಸರುಗಳ**ಲ್ಲಿ ಒಂದು ಭಾಷಾ ಸಮುದಾಯದ ಸಂಸ್ಕೃತಿ ಅಡಗಿರುತ್ತದೆ. ಅದರ ಅಧ್ಯಯನವೇ ನಾಮವಿಜ್ಞಾನ, ನಾಮ ಅಧ್ಯಯನದಲ್ಲಿ ಮುಖ್ಯ ಅಂಗಗಳು ಎರಡು. ವ್ಯಕ್ತಿಗಳಿಗೆ ಇಟ್ಟ ಹೆಸರುಗಳ ಅಧ್ಯಯನವೇ ವ್ಯಕ್ತಿನಾಮವಿಜ್ಞಾನ. ಸ್ಥಳಗಳಿಗೆ ಇಟ್ಟ ಹೆಸರುಗಳ ಅಧ್ಯಯನವೇ ಸ್ಥಳನಾಮವಿಜ್ಞಾನ ಇತ್ತೀಚಿಗೆ ನಾಮಗಳ ಅಧ್ಯಯನವು ಪ್ರತ್ಯೇಕ ಜ್ಞಾನಶಾಖೆಯಾಗಿ ಬೆಳೆಯುತ್ತಿದೆ. ಭಾಷಿಕರು ತಮ್ಮ ಪರಿಸರದ ಗ್ರಾಮದೇವತೆಗಳ ಹಾಗೂ ತಮ್ಮ ಸಮುದಾಯದ ಪ್ರಸಿದ್ಧ ವ್ಯಕ್ತಿಗಳ ಹೆಸರನ್ನು ತಮ್ಮ ಗುರುತುಗಳನ್ನಾಗಿ ಇಟ್ಟುಕೊಂಡಿರುತ್ತಾರೆ. ಇದಕ್ಕೆ ಕುರುಬರು ಹೊರತಲ್ಲ. ಕುರುಬರ ವ್ಯಕ್ತಿನಾಮಗಳು ವಿಶಿಷ್ಟವಾಗಿವೆ.

| | | |
|---|---|---|
| ಬೀರಪ್ಪ | – | ಸಿದ್ದಮ್ಮ |
| ಇಟ್ಟಪ್ಪ | – | ಬುಳ್ಳಪ್ಪ |
| ರೇವಣ್ಣಸಿದ್ದಪ್ಪ | – | ಎಲ್ಲಮ್ಮ |
| ಸಿದ್ದಪ್ಪ | – | ಮಾಯವ್ವ |
| ಕೆಂಚಪ್ಪ | – | ಕೆಂಚವ್ವ |
| ಭರಮಪ್ಪ | – | ಉದ್ದವ್ವ |
| ಮಾಳಪ್ಪ | – | ಗುಡ್ಡಮ್ಮ |
| ಅಮೋಘಸಿದ್ದ | – | ಬೆಳ್ಳೆವ್ವ |
| ಹುಲ್ಲಪ್ಪ | – | ಖನ್ನವ್ವ |
| ಚಂದಪ್ಪ | – | ತಾಯವ್ವ |
| ಗುಡ್ಡಯ್ಯ | – | ಭರಮವ್ವ |
| ಮೈಲಾರ | – | ಕರೆಮ್ಮ |
| ಫಕೀರಪ್ಪ | – | ಮುದುಕಪ್ಪ |
| ಉಚ್ಚೆಗೆಪ್ಪ | – | ಬೀರಮ್ಮ |
| ಬಾಲಭರಮಪ್ಪ | – | ಅಮೋಘಮ್ಮ |
| ಕರಿಸಿದ್ಧ | – | ಕಂಟೆಮ್ಮ |
| ಮುತ್ತೆಪ್ಪ | – | ಸೂರಮ್ಮ |

ಮುಂತಾದ ಹೆಸರುಗಳು ಕರುಬರಿಗೆ ಸೀಮಿತವಾಗಿದ್ದವು. ಅವು ಹೇಳಿಕೆಗೆಳಲ್ಲಿ ಕಂಡು ಬರುತ್ತವೆ. ಹೆಸರುಗಳಲ್ಲಿಯೇ ಅವರ ಅನನ್ಯತೆಯಿದೆ. ಆದರೆ ಆಧುನೀಕರಣದ ಇಂದಿನ ಸಂದರ್ಭದಲ್ಲಿ ಅನ್ಯಸಂಸ್ಕೃತಿಯ ಪ್ರಭಾವವೂ ಕುರುಬ ಸಮುದಾಯದ ಮೇಲೆ ಆಗಿದೆ. ಉತ್ತರ ಕರ್ನಾಟಕ ಕುರುಬರ ಮೇಲೆ ಲಿಂಗಾಯತ ಸಂಸ್ಕೃತಿ ಪ್ರಭಾವವಾಗಿದೆ. ಅವರ ಹೆಸರುಗಳೇ ಅದಕ್ಕೆ ನಿದರ್ಶನ. ಅವು ಸಹಿತ ಹೇಳಿಕೆಗಳಲ್ಲಿ ಕಂಡುಬರುತ್ತವೆ.

| | | |
|---|---|---|
| ಶಂಕರೆಪ್ಪ | – | ಮಲ್ಲಮ್ಮ |
| ಕೊಟ್ರಪ್ಪ | – | ಶಿವಕ್ಕ |
| ನಾಗಲಿಂಗಪ್ಪ | – | ಶಾಂತವ್ವ |
| ಬಸಲಿಂಗಪ್ಪ | – | ಈಶ್ವರಮ್ಮ |
| ಈಶ್ವರಪ್ಪ | – | ಗಂಗಮ್ಮ |
| ಶಿವಪ್ಪ | – | ಕೊಟ್ರಮ್ಮ ಮುಂತಾದುವು. |

ಈ ವ್ಯಕ್ತಿನಾಮಗಳು ಕುರುಬ ಸಂಸ್ಕೃತಿಯನ್ನು ತಿಳಿಯಲು ತುಂಬ ಅವಶ್ಯವಾಗಿವೆ. ಈ ಹೆಸರುಗಳ ಸ್ವರೂಪವನ್ನು ಮತ್ತು ಬಳಕೆಯ ಬಗೆಗಳನ್ನು ಅಭ್ಯಾಸ ಮಾಡಿದರೆ ಆ ಸಂಸ್ಕೃತಿಯ ಕೆಲವು ನೆಲೆಗಳ ಅರಿವು ಹೆಚ್ಚಾಗಿರುತ್ತದೆ. ಮತ್ತೆ ಕೆಲವು ಸಂದರ್ಭದಲ್ಲಿ ನಮ್ಮ ತಿಳಿವಳಿಕೆಯ ಸಮರ್ಥನೆಗೆ ಬೇಕಾದ ಮಾಹಿತಿಗಳು ದೊರಕುವುದು ಸಾಧ್ಯ. ವ್ಯಕ್ತಿನಾಮಗಳಂತೆ ಕುರುಬರ ಸ್ಥಳನಾಮಗಳು ಅರ್ಥಗರ್ಭಿತವಾಗಿವೆ. ಒಂದು ಪ್ರದೇಶ ನದಿ, ಬೆಟ್ಟ, ಕಲ್ಲು, ಮಣ್ಣು, ಗಿಡ, ದೇವಾಲಯ ಮುಂತಾದುವು ಆ ಪ್ರದೇಶದ ಚರಿತ್ರೆಯನ್ನು ತಿಳಿದುಕೊಳ್ಳಲು, ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಅವು ತುಂಬ ನೆರವಾಗುತ್ತವೆ. ಇನ್ನೂ ಕೆಲವು ಚರಿತ್ರೆ ಅಧ್ಯಯನಕ್ಕೆ ಪೂರಕವಾಗುವ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ಉದಾಹರಣೆಗೆ.

| | | |
|---|---|---|
| ದೇವರ ಗುಡ್ಡ | – | ಗೊರಗುದ್ದಿ |
| ಮೈಲಾರ | – | ಮಬ್ಬನೂರು |
| ಚಿಂಚಲಿ | – | ದೇವರ ಕಡಬಿ |
| ಹುಲಿಜಂತಿ | – | ಕುರುಬಹಟ್ಟಿ |
| ಕುರುಬಗೇರಿ | – | ಕುರಿಹಟ್ಟಿ |
| ಕುರುಬರ ದೊಡ್ಡಿ | – | ಬೆನಕಟ್ಟಿ |
| ಕುರುಬೇಟ | – | ಗುಜ್ಜಿಕೊಂಡ |
| ಜರಿಕಟ್ಟಿ | – | ಕುರುಬರಹಳ್ಳಿ |

ದಳವಾಯಹಳ್ಳಿ – ಚಲ್ಲಕಟ್ಟಿ

ಒಡೇರಹಳ್ಳಿ – ಒಡೇರಹಟ್ಟಿ

ಬೀರಗಡ್ಡಿ – ಮಾಳಾಪುರ

ಕೆಂಚನಹಟ್ಟಿ – ಭರಮನದೊಡ್ಡಿ

ಕುರುಬೂರು – ಕುರನಟ್ಟಿ

ಒಡರಟ್ಟಿ – ಹುಲಗೂರು

ಅರಿಕೇರಿ – ಸರೂರು

ಉದಗಟ್ಟಿ – ಗದ್ದನಕೇರಿ

ಇಟ್ಟಾಪೂರ – ಇಟ್ನಾಳ

ಮುಂತಾದ ಸ್ಥಳನಾಮಗಳು ಅವರ ನೆಲೆಗಳನ್ನು ಸೂಚಿಸುತ್ತವೆ. ಇವು ಅವರ ಹೇಳಿಕೆಗಳ ಭಾಗವಾಗಿ ಔಪಚಾರಿಕ ಮತ್ತು ಅನೌಪಚಾರಿಕ ಭಾಷಿಕ ಸಂದರ್ಭಗಳಲ್ಲಿ ಕಂಡುಬರುತ್ತವೆ. ಇದರಂತೆ ಕುರುಬರ ಕುಟುಂಬ ನಾಮಗಳು ಅವರ ವೃತ್ತಿ ಮತ್ತು ಸಂಸ್ಕೃತಿಯನ್ನು ತಿಳಿಸುತ್ತವೆ. ಉದಾಹರಣೆಗೆ

ಡೊಳ್ಳಿನ – ಭಂಡಾರದವರ

ಪುಲಗಡ್ಡಿ – ಇಟ್ಟಣ್ಣವರ

ಭರಬಳ್ಳಿ – ಹಟ್ಟಿ

ಆಡಕಾರ – ಕಿರೇಸೂರ

ಪೂಜಾರಿ – ಗೊರವರ

ಹಕ್ಕಿ – ಜೋಡಟ್ಟಿ

ಭರಲಿಂಗನವರ – ಸಿಂಗನವರ

ಸಿಂಗಾಡಿ – ಬೀರನವರ

ಮಬ್ಬನೂರ – ಮಕಾಳಿ

ಬೂದನವರ – ಓಟ್ಟನಗಿ

ಆಡಿನ – ಗಡ್ಡದವರ

ಅಂಬಲಿ – ಓಕ್ಕಿ

ಜಡೆಪ್ಪನವರ – ಪಡೆಪ್ಪನವರ

ಜನಮಟ್ಟಿ - ತೋಳಣ್ಣವರ

ಹರಿವಾನದವರು - ಹಕ್ಯಾಗೋಳ

ಹೇಳಿಕೆಗಳಲ್ಲಿ ಇಂತಹ ಕುಟುಂಬನಾಮಗಳು ಕುರುಬ ಸಮುದಾಯದ ಸಾಮಾಜಿಕ ಚಹರೆಯ ಹಾಗೂ ಸಾಮಾಜಿಕ ಸೂಚಕವಾಗಿ ಬಳಕೆಯಾಗುತ್ತವೆ. ಎಂಬುದು ಗಮನಿಸಬೇಕಾದ ಅಂಶಗಳಾಗಿವೆ. ಕುರುಬ ಸಮುದಾಯದ ಸಂಸ್ಕೃತಿ ಅಧ್ಯಯನಕ್ಕೆ ಇಂತಹ ಹೆಸರುಗಳು ಬಹುಮುಖ್ಯ ಆಕರಗಳಾಗುತ್ತವೆ. ಅವುಗಳ ಮೂಲಕ ಆ ಸಮುದಾಯದ ಭಾಷಿಕ ಹಾಗೂ ಸಾಮಾಜಿಕ ಸ್ತರಗಳನ್ನು ಅರ್ಥಮಾಡಿಕೊಳ್ಳಬಹುದು. ಲಿಂಗ, ಜಾತಿ, ವೃತ್ತಿ, ಸಾಮಾಜಿಕ ಸ್ತರ, ಭಾಷೆ ಮುಂತಾದ ವಿಷಯಗಳನ್ನಾಧರಿಸಿ ಹೆಸರುಗಳು ತಮ್ಮ ಅನನ್ಯತೆಯನ್ನು ಪಡೆದುಕೊಂಡಿರುತ್ತವೆ. ಹೆಸರುಗಳು ವ್ಯಕ್ತಿ ಮತ್ತು ಸಮಾಜದ ನಡುವಿನ ಕೊಂಡಿಯಾಗಿರುತ್ತದೆ.

**ಬೈಗುಳಗಳು** ಭಾಷೆಯ ಪರಿಣಾಮಕಾರಿ ಘಟಕಗಳಾಗಿವೆ. ಅವು ಒಂದು ರೀತಿಯಲ್ಲಿ ಭಾಷಿಕ ಹೊಡೆತ ಎನ್ನಬಹುದು. ಬೈಗುಳಗಳು ಹೊಡೆತಕ್ಕಿಂತ ಸೂಕ್ಷ್ಮವಾದುದು ಮತ್ತು ಸಂಕೀರ್ಣವಾದುದು. ವ್ಯಕ್ತಿಗೆ ದೈಹಿಕ ಮತ್ತು ಮಾನಸಿಕ ಯಾತನೆಯಾದಾಗ ಬೈಗಳುಗಳು ಸೃಷ್ಟಿಯಾಗುತ್ತವೆ. ಬೈಗುಳುಗಳಿಗೆ ಸಾಮಾಜಿಕ ಒಪ್ಪಿಗೆ ಬಿದ್ದಾಗ ಅದಕ್ಕೆ ಅರ್ಥ ಪ್ರಾಪ್ತವಾಗುತ್ತದೆ. ಬೈಗುಳಿಗಳಿಗೆ ಭಾಷಿಕ ನಿಯೋಗಗಳಿವೆ. ಯಾರಾದರೂ ಮನಸ್ಸಿಗೆ ನೋವಾಗವಂತೆ ಬೈದರೆ, ಬೈಯಿಸಿಕೊಂಡವ ಪ್ರತಿಯಾಗಿ ಬೈದರೆ ಮನಸ್ಸಿನ ತಳಮಳ ಉಪಶಮನವಾಗುತ್ತದೆ. ರಕ್ಷಣೆ ಮತ್ತು ಸಮತೋಲನಕ್ಕೂ ಬೈಗುಳಗಳು ತುಂಬ ನೆರವಾಗುತ್ತವೆ. ಬೈಗುಳಗಳಿಗೆ ಭಾಷಿಕರ ಇಲ್ಲವೆ ಭಾಷಾ ಸಮುದಾಯದ ಸುಧಾರಣೆಯ ಗುಣವಿದೆ. 'ಬೈದು ಹೇಳಿದವನನ್ನು ನಂಬು, ನಕ್ಕು ಹೇಳುವವನ್ನು ನಂಬಬೇಡ' ಇಂತಹ ಗಾದೆಗಳು ಬೈಗುಳಗಳ ಮಹತ್ವವನ್ನು ಎತ್ತಿತೋರಿಸುತ್ತವೆ. ಸಮಾಜದ ಸ್ವಾಸ್ಥ್ಯವನ್ನು ಕಾಪಾಡಲು ಬೈಗುಳಗಳು ತುಂಬ ಪರಿಣಾಮಕಾರಿಯಾಗಿವೆ.

ಒಡೆಯರ ಹೇಳಿಕೆಗಳಲ್ಲಿ ಕಂಡು ಬರುವ ಬೈಗುಳಗಳ ಬಳಕೆಯಲ್ಲಿ ಸಾಮಾಜಿಕ ಕಳಕಳಿಯಿದೆ. ವ್ಯಕ್ತಿ ಅಥವಾ ಸಮಾಜವನ್ನು ತಿದ್ದುವ, ಅದನ್ನು ಸರಿದಾರಿಗೆ ತರುವ ಆಶಯವಿದೆ. ಬೈಗುಳಗಳು ಔಪಚಾರಿಕ ಮತ್ತು ಅನೌಪಚಾರಿಕ ಸಂದರ್ಭಗಳಲ್ಲಿ ಬಳಕೆಯಾಗುತ್ತವೆ. ಇದಕ್ಕೆ ಕುರುಬರ ಭಾಷಾ ಸಮುದಾಯವು ಹೊರತಲ್ಲ. ಕುರುಬರ ಹೇಳಿಕೆಗಳಲ್ಲಿ ತಮ್ಮ ಪರಿಸರದಲ್ಲಿ ಬಳಕೆಯಲ್ಲಿದ್ದ ದೇಸಿ ಮೂಲದಿಂದ ಹಾಗೂ ಇನ್ನೂ ಕೆಲವು ತತ್ಕಾಲೀನ ಸನ್ನವೇಶಗಳಿಂದ ಹುಟ್ಟಿಕೊಂಡ ರೂಪಗಳಾಗಿವೆ, ಬೈಗುಳುಗಳು. ಅಂತಹ ಸಂದರ್ಭದಲ್ಲಿ ಕುರುಬ ಸಮುದಾಯದವರು ಪ್ರಾಣಿರೂಪಕಗಳಿಂದ ಸಮುದಾಯದ ಮೇಲೆ ತಮ್ಮ ಭೂಬಾಣ ಎಸೆಯುತ್ತಾರೆ. ಹೇಳಿಕೆಗಳ ಸಂದರ್ಭಗಳಲ್ಲಿ ಬಳಕೆಯಾಗುವ ಸಂಗ್ರಹಿಸಲಾದ ಕೆಲವು ಬೈಗುಳುಗಳು ಹೀಗಿವೆ.

- ಮಂಗ್ಯಾನ ಮಗನೆ ಚಂದಾಂಗ ಬಾಳೆಮಾಡು
- ಲೇ ಮಕ್ಕಳಿರ್‍ಯಾ
- ಮಗನೆ ಕೇಳ್ ಕೇಳಲೇ
- ಲೋ ಹುಡುಗ
- ಲೋ ಬೀರಾ ಹೋಗು
- ಲೋ ಭರಮ್ಯಾ

ಕೆಲವು ಬೈಗುಳಗಳು ವಾಕ್ಯದಲ್ಲಿ ಸೇರಿ ಬಳಕೆಯಾಗುತ್ತವೆ. ಕುರುಬರ ಹೇಳಿಕೆಗಳಲ್ಲಿ ಬೈಗುಳುಗಳು ಔಪಚಾರಿಕ ಮತ್ತು ಅನೌಪಚಾರಿಕ ಸಂದರ್ಭಗಳಲ್ಲಿ ಬಳಕೆಯಾಗುತ್ತವೆ. ಒಡೆಯರರು ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ದೇಶಿ ಮೂಲದ ಹಾಗೂ ಇನ್ನೂ ಕೆಲವು ತತ್ಕಾಲೀನ ಸನ್ನಿವೇಶಗಳಿಂದ ಹುಟ್ಟಿಕೊಂಡ ರೂಪಗಳಾಗಿವೆ. ಅಂತಹ ಸಂದರ್ಭದಲ್ಲಿ ಒಡೆಯರರು ಪ್ರಾಣಿ ರೂಪಕಗಳಿಂದ ಸಮುದಾಯದ ಮೇಲೆ ಛೂಬಾಣ ಎಸೆಯುತ್ತಾರೆ.

- ಬೆನ್ನ ಬಾಗಿದಾಗ ಕ್ವಾಣಿನಾಂಗ ಮನಿ ಮನಿ ತಿರಗಬ್ಯಾಡ್ರಿ
- ಬ್ಯಾಟಿ ನಾಯಿ ಹಂಗ ಬೋಗಳ ಬ್ಯಾಡ್ರಿ
- ತುತ್ತಿನ ಮಕ್ಕಳ್ರ್ಯಾ, ಕುನ್ನಿಗಳಿರ್‍ಯಾ, ಒಂಟಿಯಾಗಿ ಬದುಕಬ್ಯಾಡ್ರಿ
- 'ಬಾಳ ಮಾತನಾಡ ಬ್ಯಾಡರಲೇ ನಿನ್ನ ಮಾರಿಮ್ಯಾಗ ಭಂಡಾರ ಹಾಕಲಿ'

ಬೈಗುಳ ಪದಗಳಲ್ಲಿ ಒಂದೇ ಪದವನ್ನು ನುಡಿಯುವಾಗ ಹತ್ತಾರು ರೀತಿಯಲ್ಲಿ ಅದು ಪಲ್ಲಟವಾಗುತ್ತದೆ. ಕುಂಟ-ಕುಂಟ್ಯಾ, ಕುಂಟುನಂವ. ಹೊಲೆಯ-ಶುದ್ಧ ಹೊಲೆಯ, ಹಾಳು ಮೂಳು ಹೊಲೆಯ, ಹಾದರತಿ-ಹಾದರಗಿತ್ತಿ, ಹಾದರಗಿತ್ತಿ ಮಗನೆ ಮುಂತಾದ ಮೂಲರೂಪಗಳಿಂದ ಸಾಧಿತರೂಪಗಳು ನಿಷ್ಪನ್ನವಾಗಿವೆ. ಅಂತಹ ಪದಗಳ ಬಳಕೆಯಲ್ಲಿ ಒಡೆಯರರ ಭಾಷೆ ಬಡಿಗೆಯಾಗುತ್ತದೆ. ಒಡೆಯರರು ಸಮಾಜದಲ್ಲಿ ಶೋಷಣೆ, ಅನ್ಯಾಯಗಳನ್ನು ಬೈಗುಳಗಳ ಮೂಲಕ ಪ್ರತಿಭಟಿಸಿದ್ದರೆ. ಅವು ಅಸಹ್ಯ ರೂಪಗಳಲ್ಲ. ಭಗವಂತನು ಭಕ್ತರಿಗೆ, ಗುರು ಶಿಷ್ಯರಿಗೆ, ಪಾಲಕರು ಮಕ್ಕಳಿಗೆ ಬೈಯುವ ಪದಗಳಾಗಿವೆ. ಅವು ಮೇಲ್ನೋಟಕ್ಕೆ ಬೈಗುಳ ಎನಿಸಿದರು. ಅಲ್ಲಿ ನೀತಿ ಹೇಳುವುದಾಗಿದೆ. ಅವುಗಳ ಹಿಂದೆ ಪ್ರೀತಿ ತುಂಬಿದೆ. ಒಡೆಯರರು ಬೈಗುಳುಗಳ ಮೂಲಕ ತಮ್ಮ ಭಾವನೆಗಳ ಅಭಿವ್ಯಕ್ತಿಯಾದ ಭಾಷೆಗೆ ಮೊನಚನ್ನು, ಕ್ರಾಂತಿಧ್ವನಿಯನ್ನು ತಂದುಕೊಟ್ಟಿದ್ದಾರೆ. ಒಡೆಯರರ ಭಾಷಾಕ್ರಾಂತಿಗೆ ಬೈಗುಳುಗಳು ಬಹುಮಟ್ಟಿಗೆ ಕಾರಣವಾಗಿವೆ ಎಂಬುದು ಗಮನಾರ್ಹ.

ಒಡೆಯರರು ಪ್ರಯೋಗಿಸಿದ ಬೈಗುಳುಗಳನ್ನು ಸಮಾಜೋಮಾನವಶಾಸ್ತ್ರೀಯ ನೆಲೆಯಲ್ಲಿ ಅಧ್ಯಯನ ನಡೆಸಿದರೆ ಇನ್ನೂ ಸ್ವಾರಸ್ಯಕರವಾದ ಅಂಶಗಳು ಗೋಚರಿಸುತ್ತವೆ. ಅವರ ಎಲ್ಲ

ಬೈಗುಳುಗಳಲ್ಲಿ ಸಮಕಾಲೀನ ಸಮಾಜದ ಸಾಂಸ್ಕೃತಿಕ ಚಿತ್ರಣವನ್ನು ನೀಡಿದ್ದಾರೆ. ಬೈಗುಳಗಳ ವೈಜ್ಞಾನಿಕ ಅಧ್ಯಯನಕ್ಕೆ ಒಡೆಯರರು ಬಳಸಿದ ಬೈಗುಳಗಳು ಹೊಸದಿಕ್ಕನ್ನು ತೆರೆದುತೋರಿಸುತ್ತವೆ.

ಭಾಷೆಗೂ ಸಂಸ್ಕೃತಿಗೂ ಅವಿನಾಭಾವ ಸಂಬಂಧವಿದೆ. ಒಂದು ನಿರ್ದಿಷ್ಟ ಸಮುದಾಯದ ಅಧ್ಯಯನದಿಂದ ಒಂದು ಪ್ರದೇಶದ ಎಲ್ಲ ಸಮುದಾಯಗಳ ಸಮಗ್ರ ಅಧ್ಯಯನ ಸಾಧ್ಯ. ಈ ಹಿನ್ನೆಲೆಯಲ್ಲಿ ಇತ್ತೀಚಿನ ಉಪಭಾಷೆಗಳ ಅಧ್ಯಯನ ವಿದ್ವಾಂಸರ ಗಮನ ಹೆಚ್ಚಾಗಿ ಸೆಳೆಯತೊಡಗಿದೆ. ಭಾಷೆ, ಸಂಸ್ಕೃತಿಯ ವಾಹಕ. ಒಂದು ಸಂಸ್ಕೃತಿಯ ಶಾಬ್ದಿಕ ಹಾಗೂ ಕ್ರಿಯಾತ್ಮಕ ಬಗೆಗಳನ್ನು ವಿವರಿಸಲು ಮತ್ತೆ ನಾವು ಭಾಷೆಯನ್ನೇ ಮೊರೆಹೋಗುತ್ತೇವೆ. ವಿವಿಧ ರೀತಿಯ ಶಬ್ದಗಳನ್ನು ಹೊಂದಿದ ಶಬ್ದಗಳನ್ನು ಹೊಂದಿದ ಶಬ್ದಕೋಶ, ಆ ಭಾಷೆಯನ್ನಾಡುವ ಜನರ ಸಂಸ್ಕೃತಿಯ ವಿಶಿಷ್ಟ ಅಂಶಗಳನ್ನು ತನ್ನಲ್ಲಿ ಹುದುಗಿಸಿಟ್ಟುಕೊಂಡಿರುತ್ತದೆ. ಕಾಲನ ಆಘಾತಕ್ಕೆ ಒಳಗಾಗಿ ಶಬ್ದದ ರೂಪ, ಆಚರಣೆಯ ಕ್ರಿಯಾವಿಧಾನಗಳು ಬದಲಾದರೂ ಕೂಡ, ಆಳವಾದ ಅಧ್ಯಯನದಿಂದ ಮೂಲ ಅರ್ಥವನ್ನು ಅನಾವರಣಗೊಳಿಸಿಕೊಂಡರೆ ಕುರುಬ ಸಮುದಾಯದ ಭಾಷೆ ಮತ್ತು ಸಂಸ್ಕೃತಿಯ ಅನೇಕ ವಿಷಯಗಳು ಅಧ್ಯಯನಕಾರರಿಗೆ ಆಕರವಾಗಬಲ್ಲವು. ಕುರುಬರು ದ್ರಾವಿಡ ಮೂಲದವರು; ಪಶುಪಾಲಕರು. ತೋಟ ಗದ್ದೆಗಳ ಬೇಸಾಯದಿಂದ ಅವರು ಕೃಷಿಕರೂ ಎನಿಸಿಕೊಂಡಿದ್ದಾರೆ. ಅನೇಕ ಸ್ಥಳೀಯ ಆಚರಣೆಗಳೂ ಸ್ಥಳೀಯ ಪ್ರಾದೇಶಿಕ ಭಾಷಾ ಬಳಕೆ ಅವರಲ್ಲಿದೆ. ವಿವಾಹ ಮುಂತಾದ ಧಾರ್ಮಿಕ ವಿಧಿ-ವಿಧಾನಗಳಲ್ಲೂ ಈ ಅಂಶವನ್ನು ನಾವು ಗುರುತಿಸಬಹುದಾಗಿದೆ. ಈ ಸಂದರ್ಭದಲ್ಲಿ ಅವರು ಬಳಸುವ ಭಾಷೆ ಹಾಗೂ ಕ್ರೀಯಾವಿಧಿಗಳ ಅಧ್ಯಯನ ಒಟ್ಟು ಕನ್ನಡ ಭಾಷೆ, ಸಂಸ್ಕೃತಿಯ ಮೇಲೆ ಹೊಸ ಬೆಳಕು ಬೀರುತ್ತದೆ.

ಕುರುಬರ ಮನೆಗೆ ಪ್ರವೇಶಿಸಿದರೆ ನಮಗೆ ಮೊದಲು ಸ್ವಾಗತ ಬಯಸುವುದು ಅವರು ಹಾಸುವ ಕಂಬಳಿ. ನಂತರ ಅಂಬಲಿ, ಕಿಚಡಿ ಊಟ. ಇವು ಅವರ ಭಾಷೆ ಮತ್ತು ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿವೆ. 'ಅಂಬಲಿ-ಕಿಚಡಿ ಜಡಿಬೇಕು; ಆನಿ ಕಸುವು ಪಡಿಬೇಕು' ಎಂಬುದು ಅದೇ ಮಾತನ್ನು ಬಿಂಬಿಸುತ್ತದೆ. ಹಿಂದೂಗಳು ಆಚರಿಸುವ ಎಲ್ಲ ಹಬ್ಬಗಳನ್ನೂ ಕುರುಬರು ಸಂಭ್ರಮದಿಂದ ಆಚರಿಸುತ್ತಾರೆ. ಎಳ್ಳಮಾಸ್ಯೆ, ದೀಪಾವಳಿ, ಯುಗಾದಿ, ಮಹಾನವಮಿ ಇವು ಅವರಿಗೆ ದೊಡ್ಡ ಹಬ್ಬ. ಮಹಾನವಮಿ ಹಬ್ಬದ ದಿವಸ ಭಕ್ತರು ಬೀರಪ್ಪ, ಮಾಳಿಂಗರಾಯ, ಇಟ್ಟಪ್ಪನ ಗುಡಿಯಲ್ಲಿ ಬತ್ತಿ ಹಾಕಿ ಒಂಭತ್ತು ದಿನ ಜಾಗರಣೆ ಮಾಡುತ್ತಾರೆ. ಹಟ್ಟಿಹಬ್ಬ ಅವರ ವಿಶೇಷ ಹಬ್ಬವಾಗಿದೆ ಆ ವೇಳೆಯಲ್ಲಿ ಅವರು ಕುರಿ ಪೂಜೆ ಮಾಡಿ ತಮ್ಮ ಸಮುದಾಯದವರಿಗೆ ಪ್ರಸಾದದ ವ್ಯವಸ್ಥೆ ಮಾಡುತ್ತಾರೆ.

ಒಡೆಯರರು ಹೆಚ್ಚಾಗಿ ಸಸ್ಯಾಹಾರಿಗಳು, ಜೋಳ, ಮಕ್ಕೆಜೋಳ ಅವರ ಮುಖ್ಯ ಆಹಾರ. ಅಂಬಲಿ, ಕಿಚಡಿ ಅವುಗಳಿಂದ ತಯಾರಿಸುತ್ತಾರೆ. ಕುರುಬರು ಪಶುಪಾಲಕರಾಗಿರುವುದರಿಂದ ನೋಡಲಿಕ್ಕೆ ಸದೃಢಕಾಯರು; ಹೆಚ್ಚಾಗಿ ಕಪ್ಪಾಗಿರುತ್ತಾರೆ. ಗಂಡಸರು ಕಿವಿಗೆ ದೊಡ್ಡ ಹರಳಿನ

ಒಂಟಿಯನ್ನು (ಒಂದು ವಿಧದ ಆಭರಣ) ಧರಿಸುತ್ತಾರೆ. ತಲೆಗೆ ಹಳದಿ ಬಣ್ಣದ ರುಮಾಲು ಸುತ್ತುತ್ತಾರೆ. ಹೆಂಗಸರು ಗುಳದಾಳಿಗಳನ್ನೊಳಗೊಂಡ ಪೋಣಿಸಿದ ಕರಿಮಣಿ ಸರವಲ್ಲದೆ ದೊಡ್ಡ ದೊಡ್ಡ ಗುಂಡುಗಳ ಗುಂಡಿನ ಸರ, ತೋಳಸುತ್ತು, ಕಿವಿಗೆ ವಾಲೆ, ತಾರಕಿ ಬೊಟ್ಟು, ಕಾಲಿಗೆ ಕಾಲುಂಗುರ, ಸೊಂಟಕ್ಕೆ ಬೆಳ್ಳಿಯ ಸೊಂಟದ ಆಭರಣ ಹಾಕಿಕೊಳ್ಳುತ್ತಾರೆ. ಒಟ್ಟಾರೆ, ಕುರುಬರು ಅಜಾನು ಬಾಹುಗಳು. ಸದೃಢವಾದ ದೇಹದಲ್ಲಿ ಸದೃಢವಾದ ಮನಸ್ಸಿರುತ್ತದೆ. ಎಂಬುದಕ್ಕೆ ಕುರುಬ ಸಮುದಾಯವೇ ಸಾಕ್ಷಿಯಾಗಿದೆ.

ಒಡೆಯರರು ಬಿಡುವಿನ ವೇಳೆಯಲ್ಲಿ, ಜಾತ್ರೆ ಉತ್ಸವಗಳಲ್ಲಿ ಶಕ್ತಿ ಪ್ರದರ್ಶನದ ಆಟ (ಸ್ಪರ್ಧೆ) ಆಡುತ್ತಾರೆ. ಕುಸ್ತಿ ಹಿಡಿಯುವುದು. ಬಂಡೆ ಕಲ್ಲುಗಳನ್ನು ಎತ್ತುವುದು. ಬಂಡಿಯ ಗಾಲಿಬಿಚ್ಚಿ ಮತ್ತೆ ಜೋಡಿಸುವುದು ಇತ್ಯಾದಿ ಕಲೆ ಅವರಿಗೆ ಜನ್ಮದತ್ತವಾಗಿದೆ. ಕುರುಬರು ವಿಶೇಷವಾಗಿ ಕರಡಿ ಮಜಲು. ದಟ್ಟಿ ಕುಣಿತ ಪ್ರಿಯರು, ಅಲ್ಲದೆ ಕಸೂತಿ, ಕಂಬಳಿ ನೆಯುವುದು, ಕುರಿಸಾಕಣಿಕೆ ಹಾಗೂ ಕೃಷಿ ಇವು ಸಹಿತ ಇವರಿಗೆ ಕರಗತವಾಗಿದೆ. ಕುರುಬರ ವೃತ್ತಿ, ಕಾಯಕನಿಷ್ಠೆ, ಮುಗ್ಧತೆ ಇವು ಆ ಸಮುದಾಯದ ವೈಶಿಷ್ಟ್ಯಗಳಾಗಿವೆ.

ಒಡೆಯರರು ಹೆಚ್ಚಾಗಿ ಅನಕ್ಷರಸ್ಥರಾಗಿದ್ದರೂ ಜನಪದ ಸಾಹಿತ್ಯ ರಚನೆಯಲ್ಲಿ ಅವರದೇ ಮೇಲುಗೈ. ಅವರ ದೈನಂದಿನ ಬದುಕಿನಲ್ಲಿ, ರಾಶಿ ಸಂದರ್ಭದಲ್ಲಿ ಹಂತಿ ಹಾಡುಗಳನ್ನು ಸೊಗಸಾಗಿ ಹಾಡುತ್ತಾರೆ. ಜಾತ್ರೆ, ಹಬ್ಬ ಹರಿದಿನಗಳಲ್ಲಿ ಕೋಲಾಟದ ಹಾಡುಗಳನ್ನು, ಡೊಳ್ಳು ಹಾಡುಗಳನ್ನು ಕೋಚೆತ್ತಿ ಹಾಡುತ್ತಾರೆ. 'ಬೀರಪ್ಪ' ಕುರುಬರ ಶಕ್ತಿದೈವ. ಆ ದೇವರ ಸುತ್ತ ಹಲವು ಹಾಡುಗಳು ಬಳಕೆಯಲ್ಲಿವೆ. ಹೆಣ್ಣುಮಕ್ಕಳು ಸೋಬಾನ ಹಾಡುಗಳನ್ನು, ದೇವರ ಹಾಡುಗಳನ್ನು ಹಾಡುತ್ತಾರೆ. ಕರಡಿ ಮಜಲು, ಡೊಳ್ಳು ಕುಣಿತಗಳಂತೂ ಕುರುಬರಿಗೇ ಸಿದ್ಧಿಸಿದ ಜನಪದ ಕಲೆಗಳಾಗಿವೆ. ಅದರಂತೆ ಅನೌಪಚಾರಿಕ ಭಾಷಿಕ ಸಂದರ್ಭದಲ್ಲಿ ಕತೆ, ಹಾಡು, ನಾಟಕ, ಒಡಪು, ಇಗಟು, ಕಥನ, ಕವನ ಇತ್ಯಾದಿ ಜನಪದ ಪ್ರಕಾರಗಳನ್ನು ಅವರು ಬಳಸುತ್ತಾರೆ. ಆಟ ಬಯಲಾಟಗಳಲ್ಲಿ ಪಾತ್ರಧಾರಿಗಳಾಗಿ ಅಭಿನಯಿಸುತ್ತಾರೆ ಎಂಬುದು ಗಮನಿಸಬೇಕಾದ ಸಂಗತಿ. ಈ ಮೇಲಿನ ಸಾಂಸ್ಕೃತಿಕ ಅಂಶಗಳು ಅವರ ಹೇಳಿಕೆಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಂಡು ಬರುತ್ತವೆ. ಅಲ್ಲಿ ಬಳಕೆಯಾದ 'ಕವಲು ಕಟ್ಟುವುದು', 'ಕರಿ ಹರಿಯುವುದು', 'ಭಂಡಾರ ತರುವುದು', 'ನವಲು ಹಾರಿಸೋದು', 'ತಪಸಿ ಬಿಡುವುದು' ಮುಂತಾದ ನೂರಾರು ಸಾಂಸ್ಕೃತಿಕ ಪದಗಳು ಅವರ ಹೇಳಿಕೆಗಳ ಒಡಲಿನಲ್ಲಿ ಹುದುಗಿಕೊಂಡಿರುತ್ತವೆ. ಅವು ಪ್ರತೇಕ ಅಧ್ಯಯನದ ವಸ್ತುವಾಗಿರುತ್ತವೆ. ಅಲ್ಲಿ ಕರ್ನಾಟಕ ಸಂಸ್ಕೃತಿಯ ಭಾಷಾ ಬಳಕೆಯ ವೈವಿಧ್ಯಗಳು ಕಂಡುಬರುತ್ತವೆ.

ಹೀಗೆ, ಮೇಲಿನ ಭಾಷಿಕ ಪ್ರಕ್ರಿಯೆಗಳನ್ನು ನೋಡಿದಾಗ ಕುರುಬರ ಹೇಳಿಕೆಗಳು ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿ, ಪ್ರತ್ಯೇಕ ಘಟಕಗಳಾಗಿ ಕಾಣಿಸಿಕೊಂಡಿವೆ. ಆ ಭಾಷಿಕರ ಆಡುಮಾತಿನಲ್ಲಿ ಕಂಡುಬರುವ ಭಾಷಿಕ ವೈಲಕ್ಷಣಗಳು ವ್ಯಾಪಕವಾಗಿ ಹರಡಿ ಇತರ ಭಾಷಾ

ಪ್ರದೇಶಗಳ ಕಡೆಗೂ ವ್ಯಾಪಿಸಿ ಅಲ್ಲಿಯ ಭಾಷಾ ರಚನೆಯ ಮೇಲೆ ಪ್ರಭಾವ ಬೀರುತ್ತವೆ. ಈ ಅಧ್ಯಾಯದಲ್ಲಿ ಕುರುಬರ ಹೇಳಿಕೆಗಳ ಭಾಷಾ ಬಳಕೆಯ ಭಾಷಾಸಮುದಾಯದ ಸ್ಥೂಲ ಸ್ವರೂಪವನ್ನು ಸಾಮಾಜಿಕ ಭಾಷಾ ಅಧ್ಯಯನ ದೃಷ್ಟಿಯಿಂದ ಚರ್ಚಿಸಲಾಗಿದೆ. ಇದರಿಂದ ಕುರುಬ ಸಮುದಾಯದ ಒಡೆಯರರು ಭಾಷಾಬಳಕೆಯ ಸಾಮಾಜಿಕ ಚಹರೆಯನ್ನು ಗುರುತಿಸಲು ನೆರವಾಗುತ್ತದೆ.

**ಕೊನೆ ಟಿಪ್ಪಣಿ:**

೧. **ಗಾಣಮಿಣಿ** : ಹಾಲುಮತ ದೈವದ ಹೇಳಿಕೆಯಾದ ನಂತರ ಆಳುಮಕ್ಕಳಿಗೆಲ್ಲರಿಗೆ ಒಳ್ಳೆಯದಾಗಲಿ ಎಂಬ ಶುಭ ನುಡಿ. ಹಾಲುಮತ ದೈವವೇ ದೇವರೆಂದು ನಂಬಿರುವವರು ಹಾಲುಮತ ದೈವದ ಆರಾಧಕರ ಈ ಶಬ್ದವು ಶುಭ ಸೂಚಕವನ್ನು ಸೂಚಿಸುತ್ತದೆ.

೨. **ಪರಾಕ್** : ಇದು ಸಂಸ್ಕೃತ ಪದ. ಪರಾಂಚ್‌ದಿಂದ ತದ್ಭವವಾಗಿದೆ. ಪರಾಕ್ ಎಂದರೆ ಹೇಳು ಎಂದರ್ಥ, ಸ್ತುತಿಸು ಎಂದರ್ಥ. ಹಾಲುಮತ ಹೇಳಿಕೆಯ ಕೊನೆಗೆ ದೈವವನ್ನು ಗಮನ ಸೆಳೆಯಲು ಉಪಯೋಗಿಸುವ ಶಬ್ದವಿದು. ಹಾಲುಮತ ಪರಿಭಾಷೆಯಲ್ಲಿ ಪರಾಕ್ ಎಂದರೆ ಗಮನ ಸೆಳೆಯುವ ಒಂದು ಶಬ್ದ.

## ಅಡಿ ಟಿಪ್ಪಣಿಗಳು

೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೮

೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೪

೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫

೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೯

೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೯

೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೬೪

೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೨೯

೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೩೧

೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೨೮

೧೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೬

೧೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೩೮

೧೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೪

೧೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೫

೧೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೬

೧೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೦

೧೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೨

೧೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೮

೧೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೮

೧೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೬

೨೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೬೯

೨೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೫

೨೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೦

೨೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೧

೨೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೨

೨೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೯

೨೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭೦

೨೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೦

೨೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೩

೨೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೬

೩೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೭

೩೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭೪

೩೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೯

೩೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦೩

೩೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೮

೩೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೬

೩೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೧

೩೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೨

೩೮. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೧ ಕ್ರಮ ಸಂ: ೨೦

೩೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೩ ಕ್ರಮ ಸಂ: ೩೭

೪೦. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೬ ಕ್ರಮ ಸಂ: ೭೫

೪೧. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೭ ಕ್ರಮ ಸಂ: ೮೯

೪೨. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೬ ಕ್ರಮ ಸಂ: ೭೬

೪೩. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೭ ಕ್ರಮ ಸಂ: ೯೪

೪೪. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೩೫ ಕ್ರಮ ಸಂ: ೫೮

೪೫. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೩

೪೬. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೩

೪೭. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೮

೪೮. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೬

೪೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೬, ಕ್ರಮ ಸಂ: ೭೦

೫೦. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ, ಕಟ್ಟಿ, ಪು.ಸಂ. ೭೮

೫೧. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೯

೫೨. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಪು.ಸಂ. ೭೯

೫೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೬

೫೪. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೪೪ ಕ್ರಮ ಸಂ: ೨೦೯

೫೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೭

೫೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೮

೫೭. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ಕ್ರಮ ಸಂ:

೫೮. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೯, ಕ್ರಮ ಸಂ: ೧೩೧

೫೯. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೯, ಕ್ರಮ ಸಂ: ೧೩೨

೬೦. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೩, ಕ್ರಮ ಸಂ: ೧೮೧

೬೧. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೩, ಕ್ರಮ ಸಂ: ೧೮೪

೬೨. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೪೩, ಕ್ರಮ ಸಂ: ೧೯೦

೬೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೦

೬೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೧

೬೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೧೨

೬೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೬

೬೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೭

೬೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭೯

೬೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೦

೭೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೧

೭೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮

೭೨. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೩೫, ಕ್ರಮ ಸಂ: ೫೬

೭೩. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೩೫, ಕ್ರಮ ಸಂ: ೫೭

೭೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೨

೭೫. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೪೦, ಕ್ರಮ ಸಂ: ೧೩೯

೭೬. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೪೦, ಕ್ರಮ ಸಂ: ೧೪೦

೭೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೭

೭೮ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೧

೭೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೩

೮೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೫

೮೧. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೪೫, ಕ್ರಮ ಸಂ: ೨೧೦

೮೨ ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೪೫, ಕ್ರಮ ಸಂ: ೨೧೧

೮೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೪

೮೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨

೮೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೫

೮೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೬

೮೭. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ.೪೭ ಕ್ರಮ ಸಂ: ೨೩೬

೮೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೭

೮೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೯

೯೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೮

೯೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೮೯

೯೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೦

೯೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೧

೯೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೨

೯೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೪೫

೯೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೩

೯೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೪

೯೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೫

೯೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೧೨

೧೦೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೬

೧೦೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೭

೧೦೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೮

೧೦೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯೯

೧೦೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೦೦

೧೦೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೦೧

೧೦೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫೯

೧೦೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೭

೧೦೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೦

೧೦೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೯

೧೧೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩

೧೧೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೬೦

೧೧೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೧

೧೧೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೨

೧೧೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೩

೧೧೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೪

೧೧೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೫

೧೧೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೬

೧೧೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೧

೧೧೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೮

೧೨೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೨೯

೧೨೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೦

೧೨೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೧

೧೨೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೨

೧೨೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೩

೧೨೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೪

೧೨೬. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೪೫ ಕ್ರಮ ಸಂ: ೨೧೨

೧೨೭. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ ಪು.ಸಂ. ೪೫ ಕ್ರಮ ಸಂ: ೨೧೩

೧೨೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೫

೧೨೯. ಅಪ್ರಕಟಿತ ಹೇಳಿಕೆಗಳು ಕ್ರಮ ಸಂ: ೩೩೬

೧೩೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೭

೧೩೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೮

೧೩೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೩೯

೧೩೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೦

೧೩೪. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೯, ಕ್ರಮ ಸಂ: ೧೨೯

೧೩೫. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೯, ಕ್ರಮ ಸಂ: ೧೩೦

೧೩೬. ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ.೩೯, ಕ್ರಮ ಸಂ: ೧೩೧

೧೩೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೧

೧೩೮ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೨

೧೩೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೩

೧೪೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೪

೧೪೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೫

೧೪೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೬

೧೪೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೭

೧೪೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೮

೧೪೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೪೯

೧೪೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೦

೧೪೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೧

೧೪೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೨

೧೪೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೩

೧೫೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೪

೧೫೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೫

೧೫೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೬

೧೫೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೭

೧೫೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೮

೧೫೫ ಕುರುಬರ ಹೇಳಿಕೆಗಳು, ಎಂ.ಎಂ.ಪಡಶೆಟ್ಟಿ, ಪು.ಸಂ. ೩೫, ಕ್ರಮ ಸಂ: ೫೭

೧೫೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೫೯

೧೫೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೦

೧೫೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೧

೧೫೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೨

೧೬೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೩

೧೬೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೪

೧೬೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫೨

೧೬೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೬

೧೬೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೭

೧೬೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೮

೧೬೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬೯

೧೬೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೦

೧೬೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೧

೧೬೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೨

೧೭೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೩

೧೭೧. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೬

೧೭೨. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೬

೧೭೩. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ ,ಪು.ಸಂ. ೧೧೬

೧೭೪. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೬

೧೭೫. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೬

೧೭೬. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೬

೧೭೭. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೭

೧೭೮. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೭

೧೭೯. ಕುರುಬ ಸಮುದಾಯದ ಭಾಷೆ ,ಎಸ್.ಎಸ್. ಅಂಗಡಿ, ಪು.ಸಂ. ೧೧೭

೧೮೦. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೭

೧೮೧. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೮೨. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೮೩. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೮೪. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೮೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೪

೧೮೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೫

೧೮೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೬

೧೮೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೭

೧೮೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೮

೧೯೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೭೯

೧೯೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೦

೧೯೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೧

೧೯೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೨

೧೯೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೩

೧೯೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೪

೧೯೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೫

೧೯೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೬

೧೯೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೭

೧೯೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೮

೨೦೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೮೯

೨೦೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೦

೨೦೨. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಸಂ: ೨೯೨

೨೦೩. ಅರಕೇರಿ ಅಮೋಘಸಿದ್ದೇಶ್ವರ, ಚನ್ನಪ್ಪ ಕಟ್ಟಿ, ಸಂ: ೭೭

೨೦೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೧

೨೦೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೨

೨೦೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೩

೨೦೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೪

೨೦೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೫

೨೦೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೮

೨೧೦. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ: ೧೧೧

೨೧೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೨

೨೧೨ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೮೨

೨೧೩ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೮೭

೨೧೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೬

೨೧೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೭

೨೧೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೮

೨೧೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೯೯

೨೧೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೦

೨೧೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೧

೨೨೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೨

೨೨೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೩

೨೨೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೪

೨೨೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೫

೨೨೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೬

೨೨೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೭

೨೨೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೮

೨೨೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೦೯

೨೨೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೦

೨೨೯ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೧

೨೩೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೨

೨೩೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೩

೨೩೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೪

೨೩೩. ಜನಪದ ಸಾಹಿತ್ಯ ಭಾಷೆ. ಎಸ್.ಎಸ್. ಅಂಗಡಿ. ಪುಟ-೧೭೨

೨೩೪. ಜನಪದ ಸಾಹಿತ್ಯ ಭಾಷೆ, ಎಸ್.ಎಸ್. ಅಂಗಡಿ, ಪುಟ-೧೭೩

೨೩೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೩

೨೩೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೦೪

೨೩೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭

೨೩೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೫

೨೩೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೫

೨೪೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೬

೨೪೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೬

೨೪೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩೬

೨೪೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೭

೨೪೪ ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೮

೨೪೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೧೯

೨೪೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೫

೨೪೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೦

೨೪೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೧

೨೪೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೨

೨೫೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೩

೨೫೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೪

೨೫೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೫

೨೫೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೬

೨೫೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೭

೨೫೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೮

೨೫೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೨೯

೨೫೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೦

೨೫೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೧

೨೫೯. ಕುರುಬ ಸಮುದಾಯದ ಭಾಷೆ. ಎಸ್.ಎಸ್. ಅಂಗಡಿ. ಪುಟ-೩೫

೨೬೦. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪುಟ-೩೬

೨೬೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೮

೨೬೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧

೨೬೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨

೨೬೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೩

೨೬೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪

೨೬೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫

೨೬೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೬

೨೬೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೭

೨೬೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೮

೨೭೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೯

೨೭೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೮

೨೭೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೯

೨೭೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೦

೨೭೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೧

೨೭೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೨

೨೭೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪

೨೭೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೫

೨೭೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬

೨೭೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೭

೨೮೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೮

೨೮೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೯

೨೮೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೦

೨೮೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೨

೨೮೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೩

## ಅಧ್ಯಾಯ–ಐದು

# ಹೇಳಿಕೆಗಳ : ಸಾಂಸ್ಕೃತಿಕ ಮಹತ್ವ

ಹೇಳಿಕೆಗಳು ಹಾಲುಮತ ಸಂಸ್ಕೃತಿ ಮತ್ತು ಸಾಹಿತ್ಯದ ಪ್ರಮುಖ ಪ್ರಕಾರ. ಸಾಮಾನ್ಯವಾಗಿ ಹೇಳಿಕೆ ಎಂದರೆ ಕಾಲ–ಸಮಯ/ಧರ್ಮ; ಜ್ಞಾನ–ತಿಳಿವಳಿಕೆ ಧರ್ಮದ ಬಗೆಗೆ ತಿಳಿವಳಿಕೆ ನೀಡುವುದು ಎಂದರ್ಥ. ಸಮಾಜದಲ್ಲಿ ಭವಿಷತ್ ಕಾಲದಲ್ಲಿ ಸಂಭವಿಸಬಹುದಾದ ಕೇಡುಗಳ ಬಗ್ಗೆ ಮುನ್ನೆಚ್ಚರಿಕೆ ಕೊಡುವುದರ ಮೂಲಕ ಜನರಲ್ಲಿ ಧರ್ಮ, ನೀತಿ, ಭಕ್ತಿಯನ್ನು ಗಟ್ಟಿಗೊಳಿಸುವುದು ಈ ಸಾಹಿತ್ಯದ ಮುಖ್ಯ ಉದ್ದೇಶವಾಗಿದೆ. ಹೇಳಿಕೆಯ ತಿರುಳನ್ನು, ಸಂದೇಶವನ್ನು ಜನರಿಗೆ ಮುಟ್ಟಿಸುವವರು ಒಡೆಯರರು ಎಂಬ ಹೆಸರಿನ ಕುರುಬು ಸಮುದಾಯದ ಜಂಗಮರು. ಹೇಳಿಕೆಗಳನ್ನು ಹೇಳುವಾಗ 'ಧರ್ಮ ಬಿಡಬ್ಯಾಡ್ರಲೇ' ಎಂಬ ಎಚ್ಚರಿಕೆಯ ಮಾತು ಆಗಾಗ್ಗೆ ಕೇಳಿಬರುತ್ತದೆ. ಜನರು ಸನ್ಮಾರ್ಗದಲ್ಲಿ ನಡೆಯಬೇಕೆಂಬ ಕಳಕಳಿ ಅಲ್ಲಿರುತ್ತದೆ. ಮೇಲುನೋಟಕ್ಕೆ ಅವು ಧಾರ್ಮಿಕವಾಗಿ ಕಂಡರೂ ಅಲ್ಲಿ ಸಾಮಾಜಿಕ ಕಳಕಳಿ ಇರುತ್ತದೆ. ಹೇಳಿಕೆಗಳು ಒಡೆಯರರಿಂದ ಮೂಡಿ ಬಂದಿರುವುದರಿಂದ ಮತ್ತು ಅವುಗಳಲ್ಲಿ ಹಾಲುಮತ ತತ್ವಗಳಿರುವುದರಿಂದ ಅವು ದೇವವಾಣಿಗಳೆಂದು ಜನರು ಶ್ರದ್ಧೆಯಿಂದ ನಂಬುತ್ತಾರೆ: ಗ್ರಹಿಸಿಕೊಳ್ಳುತ್ತಾರೆ ಆ ಮೂಲಕ ತಮ್ಮಲ್ಲಿದ್ದ ಓರೆಕೋರೆಗಳನ್ನು ಸರಿಪಡಿಸಿಕೊಳ್ಳುತ್ತಾರೆ.

ಹೇಳಿಕೆಗಳಲ್ಲಿ ಸಮಾಜ ವಿಮರ್ಶೆ ಇದೆ. ಸಮಾಜದ ಕೊರತೆಗಳ ಬಗ್ಗೆ ಬಹು ಸ್ಪಷ್ಟ ಟೀಕೆ ಇದೆ; ಸಮಾಜವನ್ನು ತಿದ್ದುವ ಹಂಬಲವಿದೆ. ಎರಡು ಸಾಹಿತ್ಯ ಪ್ರಕಾರಗಳಿಗೂ ಜನರ ಯೋಗಕ್ಷೇಮ ಪ್ರಭಾವವಾಗಿರುತ್ತದೆ.

ಅತ್ತೆಯ ಸೊಸೆ ಒಂದು ಕಾಲದಲ್ಲಿ
ಒದೆವಾಳು ಕೇಡನೋಡಿ
ನಿತ್ಯ ನೇಮವು ಜಪತಪಗಳು
ಅಳಿಯದು ಕೇಡನೋಡಿ

ಒಂದು ಕಾಲದಲ್ಲಿ ಸೊಸೆಯಂದಿರು ಅತ್ತೆಯಂದಿರರಿಗೆ ಅಂಜಿ, ಗೌರವ ಕೊಟ್ಟು ಬದುಕುವ ಕಾಲವಿತ್ತು ಈಗ ವಿಭಕ್ತ ಕುಟುಂಬಗಳು ಬಂದಿರುವುದರಿಂದ ಆ ಕಾಲ ಇಲ್ಲವಾಗಿದೆ. ಎಂಬ ಸಂದೇಶ ಇಲ್ಲಿದೆ.

ಶೆಟ್ಟಿ ಶೆಟ್ಟರೆಲ್ಲ ತಟ್ಟವ ಉಟ್ಟಾರ
ಗೌಡ ಗೌಡರೆಲ್ಲ ತವುಡಾಗಿ ಹ್ವಾದಾರು
ಇಲ್ಲದವರು ಗುಣದಿಂದ ರಾಜ್ಯವಾಳತಾರು[೨]

ವಿನಾಶ ಕಾಲ ಕಲಿಯುಗದಲ್ಲಿ ಬರುತ್ತದೆ ಒಡೆಯರರು ಹೇಳಿದ್ದಾರೆ. ಶ್ರೀಮಂತರು ದುರ್ಗತಿಗೆ ಈಡಾಗುತ್ತಾರೆ ಬಡವರು ಬಲ್ಲಿದರಾಗುತ್ತಾರೆ ಹೇಳಿಕೆಗಳು ಹೆಚ್ಚಾಗಿ ಕೃಷಿ ಮೂಲ ಸಂಸ್ಕೃತಿಯನ್ನು ಸಹಿತ ಬಿಂಬಿಸುತ್ತದೆ. ಕೃಷಿಗೆ ಸಂಬಂಧಿಸಿದ ಮಳೆ, ಬೆಳೆ, ವ್ಯಾಪಾರ ವ್ಯವಹಾರಕ್ಕೆ ಸಂಬಂಧಿಸಿದ ಹೇಳಿಕೆಗಳೆ ಅಧಿಕವಾಗಿವೆ. ತಾತ್ಪರ್ಯವಿಷ್ಟೆ ಹೇಳಿಕೆಗಳು ಸಮಾಜಮುಖಿಯಾಗಿವೆ.

ಜೋಳವಕಾಣ ಹಾಳಾಗಿ
ಹೋದಾರು ಕೇಳಿರಣ್ಣ
ನಾಳೆಯೆಂದೆನಬೇಡಿ ಈಗಲೇ
ಬಂತಿನ್ನು ಕೇಳಿರಣ್ಣ[೩]

ಜನರು ಇರುವುದಲ್ಲಿಯೇ ಸಂತೃಪ್ತರಾಗಿ ಬದುಕಬೇಕು. ಅತಿಆಸೆ–ಅಪೇಕ್ಷೆ ಪಟ್ಟರೆ ಕೇಡಾಗುತ್ತದೆ. ಸಮಾಜವು ಸುಭದ್ರವಾಗಿರಬೇಕಾದರೆ ಪ್ರತಿಯೊಬ್ಬರು ಉದ್ಯೋಗದಲ್ಲಿರಬೇಕೆಂದು ಒತ್ತಿ ಹೇಳಿದ್ದಾರೆ. ಪ್ರತಿಯೊಬ್ಬರು ಸಮುದಾಯದಲ್ಲಿ ತಮ್ಮ ಸ್ವಂತಬಲದಿಂದ ಬದುಕಲು ಕಲೆಯಬೇಕು ಮನುಷ್ಯರು ಪರಾವಲಂಬಿಯಾಗಬಾರದು ಸ್ವಾಲಂಬಿಗಳಾಗಿ ತಮ್ಮ ವ್ಯಕ್ತಿತ್ವವನ್ನು ತಾವೆ ರೂಪಿಸಿಕೊಳ್ಳಬೇಕು ಎಂಬುದು ಹೇಳಿಕೆಗಳ ಆಶಯವಾಗಿದೆ.

ಉದ್ಯೋಗವುಳ್ಳವ
ಹೊದ್ದುವುದು ಸಿರಿಬಂದು
ಉದ್ಯೋಗವಿಲ್ಲದವ
ಕರದೊಳಗೆ ಇದ್ದುದು ಹೋಗಿತಯ್ಯ[೪]

ಇದು ವಚನಕಾರರ ಕಾಯಕ ಸಿದ್ಧಾಂತವನ್ನು ಸಹಜವಾಗಿ ನೆನಪಿಗೆ ತರುತ್ತದೆ. ಹಾಲುಮತಸಾಹಿತ್ಯದ ಮೌಲ್ಯಗಳನ್ನು ಮತ್ತೆ ಮತ್ತೆ ಎತ್ತಿ ಹಿಡಿದು ಅವುಗಳ ಪ್ರಾಮುಖ್ಯತೆಯನ್ನು ಮನಗಾಣಿಸಲು, ಜನಪ್ರಿಯಗೊಳಿಸಲು ಪ್ರಯತ್ನಿಸಿದ್ದು ಒಡೆಯರರ ಮುಖ್ಯ ಸಾಧನೆಯಾಗಿದೆ. ಒಂದರ್ಥದಲ್ಲಿ ವಚನಕಾರರ ಸಮಾಜದರ್ಶನ ಪುನರುತ್ಥಾನ (Revival)ವಾದದ್ದು ಹೇಳಿಕೆಯ

ಸಾಹಿತ್ಯದಲ್ಲಿ ಎಂಬುದು ಗಮನಾರ್ಹ ಸಂಗತಿಯಾಗಿದೆ. ಹೇಳಿಕೆಗಳನ್ನು ಕೇಳಿದವರಿಗೆ ಮತ್ತು ಓದಿದವರಿಗೆ ತಕ್ಷಣವೇ ಗಮನಕ್ಕೆ ಬರುವ ಸಂಗತಿ ಎಂದರೆ ಅವರ ಸಮಾಜಿಕ ಪ್ರಜ್ಞೆ, ಒಡೆಯರರು ತಾವು ಬದುಕಿದ್ದ ಸಮಾಜವನ್ನು ತೀರ ನಿಕಟ ಪರಿಚಯವನ್ನು ಪಡೆದಿದ್ದರು. ಜೊತೆಗೆ ನಾಡೆಲ್ಲ ಸಂಚರಿಸಿ ತಮ್ಮ ಲೋಕಾನುಭವವನ್ನು ಹೆಚ್ಚಿಸಿಕೊಂಡಿರುವುದರಿಂದ ಸಮುದಾಯಪರ ಕಾಳಜಿ, ಸಾಂಸ್ಕೃತಿಕ ಚಿಂತನೆ ಅವರಲ್ಲಿರುವುದನ್ನು ಗಮನಿಸಬೇಕಾದ ಸಂಗತಿಯಾಗಿದೆ. ತಾತ್ಪರ್ಯವಿಷ್ಟೇ, ಒಡೆಯರರಲ್ಲಿ ಸಮಾಜ ಸುಧಾರಕರ ಕಳಕಳಿ ಇದೆ.

ರೈತರಿಗೆ ಎಷ್ಟು ಹೇಳಿದರೂ ಸಮಧಾನ ಆಗವಲ್ಲದು
ಹಂಡ ಎತ್ತು, ಭಂಡ ಎತ್ತು, ಮೂಡಲಗಿ ಬಿಳಿಯತ್ತು
ಹೊಡಕೊಂಡ ಬೆಳೆಸಾಲ ಮಾಡಿರಿ
ವಾರದೊಳಗ ಮಳಿ ಆಗತ್ತೈತಿ ಉತ್ತರಿ,
ಸ್ವಾತಿ ಈ ವರ್ಷಕ್ಕೆ ಕೂಡುದಿಲ್ಲ ಅಂಜಬ್ಯಾಡ್ರಿ ಮಕ್ಕಳಿರ್ಯಾ[೫]

ಕಡಬಿ ಇಟ್ಟಪ್ಪನ ಮುಂದ ಖರೇ ಹೇಳರಿಲೇ,
ತಗಲ ಮಾತನಾಡಿದರ ಮುರದ್ ಹಾಕ್ತಾನ
ಖರೇ ಹೇಳಿದರ್ ಕಾಪಾಡಿತಾನ್ ಹೇಳಿರಿ ಹೇಳರಿಲೇ.
ಮಗನ ಹುಷಾರ್ ಜುಟ್ಟು ಕಿತ್ ಬಾಯಾಗ
ಕೊಡತನ, ಹಿಡಿ ಭಂಡಾರ[೬]

ವರ್ಷಕ್ಕ ಒಮ್ಮೆ ಕರಿಸಿದ್ಧ ಮುನ್ನೋಳಿ,
ಹೊಳಿಗೆ ಹೊಕ್ಕಾನ್ ತಪಸಿ ಬಿಡತಾನ,
ಆಗ ಬರ್ರಿಲೇ ಮನಸ್ಯಾಗಿಂದ ಈಸಾ ಹೋಗಿ
ಆಗು ಕೆಲ್ಸ ಅಕ್ಕವ[೭]

ಎಲೇ ಎಲೇ ಕೇಳರಿಲೇ ಕೇಳರಿಲೇ
ಅಲಕನೂರು ಕರಿಸಿದ್ಧ, ಚಿಂಚಲಿ ಮಾಯವ್ವ,
ಕಡಬಿ ಇಟ್ಟಪ್ಪ, ಕುರುಬ್ಯಾಟ ಬೀರಪ್ಪ

ಹೇಳಿಕಳಿಸ್ಯಾನ ಮಾಳಪ್ಪಗ ಹೋದ
ವರ್ಷಕ್ಕಿಂತ ರೈತ ಈ ವರ್ಷ ಮಳಿ
ಚಲೋ ಆಗಿ ಬಾಳೆ ಹರ್ಸ ಆಗತೈತಿ[೮]

ಒಡೆಯರರು ಹೇಳಿಕೆಗಳ ಮೂಲಕ ಸಮಾಜದ ಎಲ್ಲ ವರ್ಗದವರಿಗೂ ಶರಣರಂತೆ ಲೇಸನೇ ಬಯಸಿ ತಮ್ಮ ಸಂದೇಶ ಮುಟ್ಟಿಸಿ ಜನ ಜೀವನ ತಿದ್ದಲು ಪ್ರಯತ್ನಿಸಿದರು. ಒಂದರ್ಥದಲ್ಲಿ ಹೇಳಿಕೆಗಳು ಹುಟ್ಟಿದ್ದೇ ಈ ಉದ್ದೇಶಕ್ಕಾಗಿ. ಹೇಳಿಕೆಗಳಿಂದ ಜನರು ಸಮುದಾಯದಲ್ಲಿ ಒಬ್ಬರು ಇನ್ನೊಬ್ಬರನ್ನು ಅರ್ಥಮಾಡಿಕೊಂಡು ಭಯ-ಭಕ್ತಿ- ಗೌರವ-ನೀತಿಯಿಂದ ನಡೆದುಕೊಳ್ಳುತ್ತಿದ್ದರು.

ಹೇಳಿಕೆಗಳನ್ನು ರಚನೆಯ ದೃಷ್ಟಿಯಿಂದ ಹೇಳುವುದಾದರೆ ಅವು ಜನಪದ ಮಟ್ಟುಗಳಾದ ದ್ವಿಪದಿ, ತ್ರಿಪದಿ, ಚೌಪದಿಯ ರೂಪದಲ್ಲಿರುತ್ತವೆ. ಅವು ನಿರ್ದಿಷ್ಟ ಚರಣಗಳಲ್ಲಿ ರಚನೆಯಾಗಿದ್ದರಿಂದ ಒಡೆಯರರು ಮಾತಿನಲ್ಲಿ ಮಿತವ್ಯಯ ಸಾಧಿಸಿರುವುದರಿಂದ ಅವರು ಹೇಳುವ ಸಂದೇಶ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಒಡೆಯರರ ಆ ಹೇಳಿಕೆಗಳು ಅಡುಮಾತಿನ ಲಯದಲ್ಲಿ ಇರುತ್ತವೆ. ನಂತರ ಅದರ ಅರ್ಥವನ್ನು ಗದ್ಯದಲ್ಲಿ ಬಿಡಿಸಿ ಸ್ಪಷ್ಟಪಡಿಸುತ್ತಾರೆ. ಒಡೆಯರರು ರಚನೆ ಮತ್ತು ಪ್ರಚಾರದ ಸಂದರ್ಭದಲ್ಲಿ ಜನಪದ ಆಡುಭಾಷೆಯನ್ನು ಬಳಸುವುದರಿಂದ ಭಾಷಾಸಂಕೀರ್ಣತೆ ದೂರವಾಗಿ ಹೇಳಿಕೆಗಳ ಸಂದೇಶ ಜನರಿಗೆ ಸುಲಭವಾಗಿ ಅರ್ಥವಾಗುತ್ತದೆ.

ಹೇಳಿಕೆಗಳು ಪ್ರಧಾನವಾಗಿ ಸಮಕಾಲದಲ್ಲಿ ನಡೆದ ದೊಡ್ಡ ಸಾಮಾಜಿಕ ಸಮಾನತೆಯ ಸೂಕ್ಷ್ಮ ನೆಲೆಗಳನ್ನು ಮನಗಾಣಿಸುತ್ತದೆ. ಎಲ್ಲ ಜಾತಿ, ಕುಲದವರಿಗೂ ತನ್ನ ಹೆಬ್ಬಾಗಿಲನ್ನು ತರೆಯುತ್ತವೆ. ವರ್ಗ ಜಾತೀಯತೆಯ ತರತಮತೆಯನ್ನು ಪ್ರತಿಭಟಿಸಿ ನಿಂತಿತು. ಸರ್ವಜೀವಿಗಳ ಸಮಾನತೆಯನ್ನು ಗೌರವಿಸಿತು. ಮಹಿಳೆಯರಿಗೆ ಸಮಾನತೆ ತಂದುಕೊಡಲು ಪ್ರಯತ್ನಿಸಿದರು. ಹಿರಿಯರು, ಕಿರಿಯರು ಪರಸ್ಪರ ವಿಚಾರ-ವಿನಿಮಯ ನಡೆಸಿ ಮುಖಾಮುಖಿಯಾದರು. ಇವೆಲ್ಲ ಆ ಸಾಮಾಜಿಕ ಚಳುವಳಿಯ ಉಪಹುಟ್ಟುವಳಿಗಳು ಎನ್ನಬಹುದು.

ಉತ್ತರ ದಿಕ್ಕಿನ್ಯಾಗ್ ಕೆಂಡದ ಮಳಿ ಬರತೈತಿ,
ದಕ್ಷಿಣ ದಿಕ್ಕಿನ್ಯಾಗ್ ಬಿರುಗಾಳಿ ಬೀಸತೈತಿ
ಭಂಡಾಗಿ ಹೋಗಬ್ಯಾಡರಿ[೯]

ಎಂತಹ ಕಾಲ ಬಂದೈ ಇಲಿ,
ಬೆಕ್ಕ ಹಿಡಿತೈತಿ, ಮೊಲ, ನಾಯಿ ಹಿಡಿತೈತಿ
ಲೋಕ ಬಟಾಬಯಲಾಗತೈತಿ ಸಿದ್ಧ
ಬೀರನ ಮಾತು ಇದೆ

ಒಡೆಯರರಿಗೆ ತಮ್ಮ ಭಾವನೆಗಳನ್ನು ಜನರಿಗೆ ತಲುಪಿಸಿ ಕ್ರಿಯಾಮುಖಿಯಾಗುವ ಸಾಮಾಜಿಕ ಆಶಯವೂ ಅವರಿಗಿತ್ತು. ತಮ್ಮ ಸಮಕಾಲೀನದಲ್ಲಿ ಸ್ಪಷ್ಟವಾಗಿ ರೂಪುಗೊಳ್ಳುತ್ತಿದ್ದ ಸಂಧಿಕಾಲದ ಸಾಮಾಜಿಕ ಕಾಳಜಿಗಳ ನಿರೂಪಣೆಗೆ ಸಹಾಯಕವಾಗುವಂತೆ ಭಾಷೆಯನ್ನು ಖಚಿತ ವ್ಯಾವಹಾರಿಕ ರೂಪ ಧಾರಣೆಯಿಂದ ಸಜ್ಜುಗೊಳಿಸುವುದು ಅವರಿಗೆ ಅಗತ್ಯವಾಯಿತು. ಹೊಸ ವಿಚಾರಗಳನ್ನು ಜನರಿಗೆ ತಲುಪಿಸಲು ತಮಗಿಂತ ಹಿಂದೆ ರೂಪಿತವಾಗಿದ್ದ ಶಿಷ್ಟ ಸಾಹಿತ್ಯವನ್ನು (ಬರಹದ ಸಾಹಿತ್ಯ) ಬಿಟ್ಟು, ಕನ್ನಡದ್ದೇ ಆದ ದೇಶಿ ಪರಂಪರೆಯನ್ನು, ಮೌಖಿಕ ಪರಂಪರೆಯನ್ನು ಆರಿಸಿಕೊಂಡರು. ಈ ಬಗೆಯ ನವೀನ ದೃಷ್ಟಿಯ ಕಾಲದಲ್ಲಿ ಕಂಡುಬರುವ ಹಠ, ಆಕ್ರೋಶ, ಹೊಸ ಅಭಿವ್ಯಕ್ತಿಯ ಹಂಬಲ, ನೋವು ನಿರಾಸೆ, ಉದಾರತೆ, ಮಾನವೀಯತೆ ಮುಂತಾದ ಎಲ್ಲ ಅಂಶಗಳನ್ನು ವಚನ ಸಾಹಿತ್ಯವು ಕ್ರಿಯಾತ್ಮಕ ಸಾಹಿತ್ಯ ರಚನೆಗೆ ತನ್ನನ್ನು ತಾನು ಸಂಪೂರ್ಣವಾಗಿ ಒಡ್ಡಿಕೊಂಡಿತೆಂಬುದುನ್ನು ಸ್ಪಷ್ಟಪಡಿಸುವ ಐತಿಹಾಸಿಕ ದಾಖಲೆಯಾಗಿ ಉಳಿದಿದೆ. ಇದರಿಂದ ಹೇಳಿಕೆಗಳು ಜನರಿಗೆ ಸುಲಭವಾಗಿ ಅರ್ಥವಾಗುತ್ತಿದ್ದವು. ಅಂದರೆ ಹೇಳಿಕೆಗಳಲ್ಲಿ ಸಂವಹನಶೀಲತೆ ಇದೆ.

ಹೇಳಿಕೆಗಳ ಸಾಧನೆಗಳಲ್ಲಿ ಮುಖ್ಯವಾದುದೆಂದರೆ ವೈಚಾರಿಕತೆಯ, ಸಮಾನತೆಯ ಮತ್ತು ಉದಾರತೆಯ ಚಿಂತನೆಯದಿಕ್ಕನ್ನು ಸಮಾಜದ ಕಡೆ ಹೊರಳಿಸುವ ಪ್ರಯತ್ನ. ಹಳೆಯ ಜಿಡ್ಡುಗಟ್ಟಿದ ಸಾಮಾಜಿಕ ವ್ಯವಸ್ಥೆಗೆ ಉಗ್ರವಾದ ಪ್ರತಿಕ್ರಿಯೆ ತೋರಿಸಿ ಹೊಸದಿಗಂತಗಳ ಕಡೆ ದೃಷ್ಟಿಹರಿಸುವುದು ಈ ಸಾಮಾಜಿಕ ಗುರಿಯಾಯಿತು. ಅದು ಹೊಸ ಸಂವೇದನೆಗಳಿಗೆ ದಾರಿಯಾಯಿತು. ಹೇಳಿಕೆಗಳಲ್ಲಿ ಕಂಡುಬರುವ ಸಾಮಾಜಿಕ ಅಂಶಗಳನ್ನು ಸಾಧಾರವಾಗಿ ಹೀಗೆ ಕಲೆಹಾಕಲಾಗಿದೆ:

ಐದ ಅಮಾಸಿ ನನ್ನ ಗುಡಿಗಿ ತಪ್ಪದ ಬರಬೇಕು
ಪೌಳ್ಯಾಗ ಇರಬೇಕು, ಮೂಖಿಲಿ ಬರಬೇಕು
ಮೂರು ಹಾದಿ ಕೂಡುವಲ್ಲಿ ಅದಕ್ಕೆ ಬೇಕಾದ
ಕೂಳ ಹಾಕಿ ಹೊಳ್ಳಿ ನೋಡದ ಮೂಖಿಲೆ
ನನ್ನ ಗುಡಿಗೆ ಬರಬೇಕು,
ಬಂದ ದೆವ್ವ ಬಂದ ಹಾದಿಲೆ ಹೋಗತತಿ
ಏನ ಅಂಜಬ್ಯಾಡರಿ ಹಿಡಿ ಭಂಡಾರ[೧೧]

ಹಗಲು ಆಡಿ ಬನ್ನಿ ಏಳು ಸಮುದ್ರ ತಿರುಗಿ ಬನ್ನಿ,
ಮುಗಿಲ ಮುಟ್ಟಿ ಬನ್ನಿ, ಹತ್ತಬಾರದ ಗಿಡ ಹತ್ತಿ ಬನ್ನಿ

ಮುಂಗೈ ಹಿಡಿದ ಕೇಳರಲೇ, ಈ ವರ್ಷ ಆಗುವುದ ಆಗತತಿ
ಏನ ಚಿಂತಿ ಮಾಡಬ್ಯಾಡರಲೇ
ಕುರಬ್ಯಾಟ್ ಬೀರಪ್ಪ ಹೇಳಿದ ಮಾತ
ಹಸಿ ಗ್ವಾಡ್ಯಾಗ್ ಹಳ್ಳ ಒಗದಂಗ್[೧೨]

ಒಡೆಯರರು ಹೇಳಿಕೆಗಳನ್ನು ರಚಿಸುವಾಗ ಪೂರ್ವಸ್ಥಾಪಿತವಾದ ಯಾವುದೊಂದು ಸಿದ್ಧಮಾದರಿಯನ್ನು ಅನುಸರಿಸಿಲ್ಲ. ಅವರು ತಮ್ಮದೇ ಆದ ವಿನೂತನ ಸಾಂಸ್ಕೃತಿಕ ಚೌಕಟ್ಟಿನಲ್ಲಿ ತಮ್ಮ ಚಿಂತನ–ಮಂಥನಗಳ ಮೂಲಕ ಒಂದೊಂದು ಸಂದರ್ಭದಲ್ಲಿ ಆಡಿದ ಮಾತುಗಳೇ ಹೇಳಿಕೆಗಳು. ಒಡೆಯರರು ಜನತಾ ಪ್ರತಿನಿಧಿಗಳಾಗಿ, ಜನರ ಮಧ್ಯದಲ್ಲಿಯೇ ಇದ್ದು, ದೈನಂದಿನ ವ್ಯವಹಾರದಲ್ಲಿ ಜನಸಾಮಾನ್ಯರ, ಸಾಮಾಜಿಕರು ಆಡುವ ಭಾಷೆಯನ್ನೇ ತಮ್ಮ ಹೇಳಿಕೆ ರಚನೆಯಲ್ಲಿ ಬಳಸಿದರು. ಒಡೆಯರರು ಸಿದ್ಧಮಾದರಿಯ ಬರವಣಿಗೆಯ ಶೈಲಿಯನ್ನು ಕೈಬಿಟ್ಟು ದೇಶಿಶೈಲಿ, ದೇಸಿ ಗುಣ, ದೇಸಿ ಲಯದಲ್ಲಿ ಹೇಳಿಕೆ ರಚಿಸಿದರು. ಒಡೆಯರರು ಸಮಕಾಲಿನ ಸಂದರ್ಭದಲ್ಲಿ ಪ್ರಚಲಿತವಿದ್ದ ಕನ್ನಡ ಭಾಷೆಯನ್ನು ತಮ್ಮ ಸಾಮಾಜಿಕ ಸಂಪರ್ಕಕ್ಕಾಗಿ, ಸಾಹಿತ್ಯ ರಚನೆಗಾಗಿ ಹದವರಿತು ದುಡಿಸಿಕೊಂಡು ಎಲ್ಲ ಸಾಮಾಜಿಕ ರಂಗದಲ್ಲಿ ಅಭಿವ್ಯಕ್ತಿಗೆ ತಕ್ಕಂತೆ ರೂಪಿಸಿದರು. ಇದು ಹೇಳಿಕೆ ಸಾಹಿತ್ಯದ ದೊಡ್ಡ ಸಾಧನೆ ಎಂದೇ ಹೇಳಬೇಕು.

ಹೇಳಿಕೆಗಳಲ್ಲಿ ಹಲವು ಸಮುದಾಯದ ಹಲವು ಬಗೆಯ ಕುಲ ಕಸುಬುಗಳ ಜನರ ವೃತ್ತಿ ಪರಿಭಾಷೆಗಳು ಸಮಾವೇಶಗೊಂಡಿವೆ. ಒಡೆಯರರ ಹತ್ತಿರ ಹಲವಾರು ಜನ ಭಕ್ತರು ತಮ್ಮ ಸಮಸ್ಯೆಗಳನ್ನು ಹೇಳಲು ಬರುತ್ತಿದ್ದರು. ಒಡೆಯರರು ಆ ಸಮಸ್ಯೆಗಳನ್ನು ಕೇಳಿ ಪರಿಹಾರ ಸೂಚಿಸುತ್ತಿದ್ದರು. ಉದಾಹರಣೆ:

'ಪಡು ಗಾಳಿ ಬಿಟ್ಟೈತಿ ಕುಂಟಿ ಸಾಗ ಮಾಡ್ರಲೇ'
'ಕುಂಬಾರ ಗಡಿಗಿ ಒಡಿತು ಆವಿಗ್ಯಾಗ ಹೊಗಿ ಬರಾಕತ್ಯೈತಿ
ನಾಳೆ ಬಿತ್ರಲೇ
ನಾಳೆ ಆಯತಾರ ಬೀರಪ್ಪಗ ಹೋಗಿ ಬರ್ರೀ
ಕಡ್ಲಿ ಹಸನ ಮಾಡ್ರೀ[೧೩]

ಮುಂತಾದ ಹೇಳಿಕೆಗಳಲ್ಲಿ ಒಡೆಯರರು ತಾವು ಕಂಡ ಕಾಯಕ ಲೋಕದಿಂದ ವಿಶಿಷ್ಟ ಶಬ್ದ ಸಾಮಗ್ರಿಯನ್ನು ಜನಪದ ಕ್ಷೇತ್ರಕ್ಕೆ ತಂದು ಹಾಕಿ, ಹೇಳಿಕೆಗಳ ಕಾಯಕ ಮೀಮಾಂಸೆಯ ಸತ್ವವನ್ನು ಹೆಚ್ಚಿಸುವಲ್ಲಿ ಸಹಾಯಕರಾಗಿದ್ದಾರೆ. ಆ ಕಾಲದ ಸಮಾಜದ ರೂಪುರೇಷೆಗಳು ಅವರ ಹೇಳಿಕೆಗಳಲ್ಲಿ ಉಕ್ತವಾಗಿರುವ ವೃತ್ತಿ ಪರಿಭಾಷೆಗಳ ಆಧಾರದಿಂದ ಪುನಾರಚಿಸಬಹುದಾಗಿದೆ.

ವೃತ್ತಿಪದಗಳು ಆಯಾ ವೃತ್ತಿಸಮುದಾಯದ ಸಮಾಜ, ಸಂಸ್ಕೃತಿ, ಆಚಾರ-ವಿಚಾರ, ಧರ್ಮ ಇವುಗಳನ್ನು ಪ್ರತಿನಿಧಿಸುತ್ತವೆ. ಹೇಳಿಕೆಗಳಲ್ಲಿ ಕಂಡು ಬರುವ ವೃತ್ತಿಪದಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಆಕರಗಳಾಗುತ್ತವೆ.

ಹೇಳಿಕೆಗಳಲ್ಲಿ ಬಳಕೆಯಾಗುವ ಬಂಧುಸೂಚಕಗಳು ಕೇವಲ ಕುಟುಂಬ ಕೇಂದ್ರಿತವಾಗಿಲ್ಲ. ಅವುಗಳಲ್ಲಿ ಹಲವು ರೀತಿಯ ಆತ್ಮೀಯ ಮತ್ತು ಪ್ರೀತಿಯ ಭಾವನೆಗಳು ತುಂಬಿಕೊಂಡಿರುತ್ತವೆ. ಹೇಳಿಕೆಗಳಲ್ಲಿ ಬಳಕೆಯಾಗುವ ಬಂಧುಸೂಚಕಗಳ ಅಧ್ಯಯನವು ಹೇಳಿಕೆಗಳ ಅಧ್ಯಯನದ ಸಾಮಾಜಿಕ ಆಯಾಮವನ್ನು ಎತ್ತಿ ತೋರಿಸುತ್ತವೆ. ಅಲ್ಲಿಯೂ ಸಹಿತ ಸಾಮಾಜಿಕ ಕಳಕಳಿಯಿದೆ. ಅವರು ಬಳಸುವ ಸಂಬೋಧನಾ ರೂಪಗಳಲ್ಲಿ ಆತ್ಮೀಯತೆ ಇದೆ.

ಕೇಳರಲೇ-ಕೇಳ್ರಿ
ಕುರಿಗಿ ಕುಂಟಿ ಸಾಗ ಮಾಡ್ರೀ
ಗೊರಗುದ್ದಿ ಇಟ್ಟಪ್ಪ ಹೇಳ್ಯಾನ
ಚಿಂಚಲಿ ಮಾಯವ್ವ ಬರತಾಳ ಉಡೆ ಒಡ್ರಿ
ಮಕ್ಕಳಿರ್ರ್ಯಾ ಭಂಡಾರ ತೂರ್ರೀ
ಲೇ ವಾಗತಿಲೇ ಹೋಗ್ರಿ[೧೪]

ಮುಂತಾದ ಹೆಸರುಗಳು, ಸಂಬೋಧನ ರೂಪಗಳು ಹಾಲುಮತ ಸಮುದಾಯ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಹಾಲುಮತದ ಒಡೆಯರರು ಭಕ್ತರನ್ನು ಆ ಮೂಲಕ ಸಂಬೋಧನೆ ಮಾಡುವುದರಿಂದ ಪ್ರೀತಿ ಗೌರವ ವ್ಯಕ್ತಪಡಿಸುತ್ತಿದ್ದರು. ಒಡೆಯರರು ಬಂಧುಸೂಚಗಳನ್ನು ಬಳಸಿ ಜನತೆಯಲ್ಲಿ ಸಮಾನತೆಯನ್ನು ಸ್ಥಾಪಿಸಿ ಸಮತಾವಾದ ಸಮಾಜರಚನೆಗೆ ಅಡಿರಚನೆ ಹಾಕಿದರು. ಆ ಮೂಲಕ ಸಾಮಾಜಿಕ ಸಮಾನತೆಗೆ ಕಾರಣರಾದರು. ಹೇಳಿಕೆಗಳ ಹಿಂದಿರುವ ಧೋರಣೆ ಸಮಾಜದಲ್ಲಿ ನೀತಿಯ ಪ್ರತಿಷ್ಠಾಪನೆ. ಸಮಾಜದಲ್ಲಿ ಪರಿಸ್ಥಿತಿ ಹದಗೆಟ್ಟಾಗ ಸಾಮಾಜಿಕ ಸ್ವಾಸ್ಥ್ಯ ತರುವುದು ಧೋರಣೆಯಾಗಿದೆ.

ಬೈಗುಳುಗಳು ಸಮುದಾಯದ ಪರಿಣಾಮಕಾರಿ ಘಟಕಗಳಾಗಿವೆ. ಒಡೆಯರರು ಬಳಸಿದ ಬೈಗುಳ ಪದಗಳಲ್ಲಿ ಸಾಮಾಜಿಕ ಕಳಕಳಿಯಿದೆ. ವ್ಯಕ್ತಿ ಅಥವಾ ಸಮಾಜವನ್ನು ತಿದ್ದುವ, ಅವರನ್ನು ಸರಿದಾರಿಗೆ ತರುವ ಆಶಯವಿದೆ. ಅವರು ಬೈಗುಳಗಳನ್ನು ಬಳಸುವುದರ ಮೂಲಕ ಮಡಿವಂತ ಜನರ ಗಡಿ ಗೆರೆಗಳನ್ನು ಮೀರುವ ಪ್ರಯತ್ನ ಮಾಡಿದ್ದಾರೆ. ಒಡೆಯರರು ತಮ್ಮ ಸಮಕಾಲೀನದಲ್ಲಿ ಬಳಕೆಯಲ್ಲಿದ್ದ ದೇಸಿ ಮೂಲದ ಹಾಗೂ ತತ್ಕಾಲೀನ ಸನ್ನಿವೇಶಗಳಿಂದ ಹುಟ್ಟಿಕೊಂಡ ಬೈಗುಳ ರೂಪಗಳನ್ನು ಬಳಸುತ್ತಾರೆ ಉದಾಹರಣೆಗೆ : ಎಲುವ ಕಡಿವ ನಾಯಿ, ಮಂಗ್ಯಾ ಮಕ್ಕಳು, ದಡ್ಡ, ಎಲೆ ಮಂಗ್ಯಾ ಹಾಳಾಗಿ ಹೋದಿರಿ, ಥು ಬಿದ್ದಾಡಿ ಕುನ್ನಿಗಳು, ನಾಯಿಗಳು, ತಿಪ್ಪೆ,

ಸುಡುಕುನ್ನಿ, ನೀಚ, ವಿಚಾರಗೇಡಿ, ದುರುಳು, ಭ್ರಷ್ಟ ಮುಂತಾದುವು. ಒಡೆಯರರು ಸಮಾಜದಲ್ಲಿ ಶೋಷಣೆ, ಅನ್ಯಾಯಗಳನ್ನು ಬೈಗುಳಗಳ ಮೂಲಕ ಪ್ರತಿಭಟಿಸಿದ್ದಾರೆ. ಅವು ಅಸಹ್ಯ ರೂಪಗಳಲ್ಲ, ಭಗವಂತನು ಭಕ್ತರಿಗೆ, ಗುರುವು ಶಿಷ್ಯರಿಗೆ, ಪಾಲಕರು ಮಕ್ಕಳಿಗೆ ಬೈಯುವ ಪದಗಳಾಗಿವೆ. ಅವು ಮೇಲುನೋಟಕ್ಕೆ ಕಠಿಣ ಎನಿಸಿದರೂ ಅಲ್ಲಿ ನೀತಿ ಹೇಳುವುದಾಗಿದೆ. ಅವುಗಳ ಹಿಂದೆ ಪ್ರೀತಿ ತುಂಬಿದೆ. ಒಡೆಯರರ ಸಾಮಾಜಿಕ ಸುಧಾರಣೆಗೆ ಅವರು ಬಳಸಿದ ಬೈಗುಳ ರೂಪಗಳೂ ಸಹಿತ ಬಹುಮಟ್ಟಿಗೆ ಕಾರಣವಾಗಿವೆ ಎಂಬುದು ಗಮನಾರ್ಹ.

ನಾ ಎಲ್ಲಿ ಬೀಳ್ಳಿ : ಅಲ್ಲಿ ಬೀಳ್ಯಾ : ಇಲ್ಲಿ ಬೀಳ್ಯಾ
ಅರ್ಥವಾಗದ ಜನ : ಅಜ್ಜ ಕೈ ಮುಗಿತೀವಿ ನೀ ಬೀಳೂದ ಬ್ಯಾಡ್
ಸುಮ್ನ ಕುಂಡ್ರಿ ಅಂದರಂತ ಆಗ ಆವೇಶಭರಿತನಾದ ಸಿದ್ರಾಯಜ್ಜ :
ಥೂ ನಿಮ್ಮನೆ ಹಾಳಾಗ ಬೀಳಿತೀನಿ ಅಂದ್ರ ಬ್ಯಾಡ ಅಂದ್ರಿ
ಕಳಕಂಡ್ರಲೇ ನೀವೆಲ್ಲ ಕಳಕಂಡ್ರಿ
ಅಂದ್ರಂತ ಎಲ್ಲರೂ ದಿಗ್ಭ್ರಾಂತರಾದರು[೧೫]

ಭರಾ ಬಿದ್ದೈತಿ ಜನರಿಗೆ ಇರಾಕ ಮನಿಯಿಲ್ಲಾ,
ನಿಲ್ಲಾಕ ನೆರಳೆಲ್ಲ, ಅಳಲಿಕ್ಕೆ ದನಿಯಿಲ್ಲಾ,
ಹೆಣಾ ಎಳಿಲಿಕ್ ದಿಕ್ಕಲ್ಲದಂಗ್ ಆದೀತು ನೋಡಿ,
ನಡೀರಲೇ ದಿನಮಾನ ಸುಮಾರ ಬಂದಾವು ಜಾತ್ರಿ ಮಾಡ್ರಿ
ಅಂಬಲಿ ಉಣ್ಣಿರಿಲೇ ಆದುದ್ದು ಆಗತೈತಿ[೧೬]

ಹೆಸರುಗಳು ಸಂಸ್ಕೃತಿಯ ಘಟಕಗಳಾಗಿವೆ. ಹೇಳಿಕೆಗಳಲ್ಲಿ ಬರುವ ಹೆಸರುಗಳು ಸಮಕಾಲೀನ ಸಾಂಸ್ಕೃತಿಕ ಪರಿಸರ ಶೋಧಕ್ಕೆ ಆಕರಗಳಾಗಿವೆ. ಬೀರಪ್ಪ, ಯಮನಪ್ಪ, ಹಕ್ಯಾಗೋಳ, ಮುತ್ತೆಣ್ಣವರ, ಇಟ್ಟಣ್ಣವರ, ಕುರಬ್ಯಾಟದ ಬೀರ, ಲಗುನ್ಯಾರ ಕೆಂಚವ್ವ ಮುಂತಾದ ಹೆಸರುಗಳು ಸಂಸ್ಕೃತಿ ಅಧ್ಯಯನಕ್ಕೆ ತುಂಬ ನೆರವಾಗುತ್ತವೆ. ಕುರುಬ ಸಂಸ್ಕೃತಿಯ ಹಾಗೂ ಹೇಳಿಕೆಗಳನ್ನು ಕೇಳಲು ಬಂದ ಭಕ್ತರ ಹೆಸರುಗಳು ಆಯಾ ಸಮುದಾಯ ಸಂಸ್ಕೃತಿಯನ್ನು ತಿಳಿಸುತ್ತವೆ. ಈಗ ನಾಮಶಾಸ್ತ್ರ ಸಾಂಸ್ಕೃತಿಕ ಅಧ್ಯಯನ ಭಾಗವಾಗಿದೆ. ಸಹಜವಾಗಿ ಹೇಳಿಕೆಗಳಲ್ಲಿ ಕಂಡು ಬರುವ ಹೆಸರುಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಆಕರಗಳಾಗಿರುತ್ತವೆ.

ಒಡೆಯರರ ಹೇಳಿಕೆಗಳಲ್ಲಿ ಸ್ತ್ರೀಪರವಾದ ನಿಲುವುಗಳಿಗೆ ಭದ್ರಬುನಾದಿಯನ್ನು ಹಾಕಿತು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ. ಸ್ತ್ರೀಸಂವೇದನೆ, ಸ್ತ್ರೀಸಮಾನತೆ, ಸ್ತ್ರೀಯರಿಗೆ ವ್ಯಕ್ತಿಸ್ವಾತಂತ್ರ್ಯ,

ಸ್ತ್ರೀಯರ ಗ್ರಹಿಕೆಗೆ ಅವಕಾಶ, ಸ್ತ್ರೀಯರಿಗೆ ವಾಕ್ ಸ್ವಾತಂತ್ರ್ಯ ಈ ಎಲ್ಲ ಅವಕಾಶಗಳನ್ನು ಸ್ತ್ರೀಯರಿಗೆ ಕೊಟ್ಟಿದ್ದು ಹೇಳಿಕೆಗಳು ಪುರುಷರಷ್ಟೇ ಸ್ತ್ರೀಯರು ಸಮಾನರು ಎಂಬ ಸಂಗತಿ ತಿಳಿದದ್ದೇ ಹೇಳಿಕೆಗಳಿಂದ. ಸಂಸಾರದ ಸಾಂಸ್ಕೃತಿಕ ಬಂಧನದಿಂದ ಹೊರಬಂದು ಮಹಿಳೆ ತನ್ನ ಮಾರ್ಗವನ್ನು ತಾನೇ ಆಯ್ದುಕೊಳ್ಳಬಹುದು ಎಂಬ ಸಿದ್ಧಾಂತಕ್ಕೆ ಒಂದು ವಿಶಿಷ್ಟವಾದ ತಿರುವನ್ನು ನೀಡಿದ ಚಿಂಚಲಿ ಮಾಯವ್ವನ ಸಾಂಸ್ಕೃತಿಕ ಮಹತ್ವ, ಅವಳು ಮಾಡಿದ ಪವಾಡಗಳು ಕರ್ನಾಟಕ ಸಾಂಸ್ಕೃತಿಕ ಸಾಹಿತ್ಯದ ಸ್ತ್ರೀಪರ ಚಿಂತನೆಯ ಚರಿತ್ರೆಯಲ್ಲಿ ಮಹತ್ವದ ಘಟ್ಟಗಳು. ಹೇಳಿಕೆಗಳ ಮೂಲಕ ಒಡೆಯರರು ಸ್ತ್ರೀ ಸಮುದಾಯಕ್ಕೆ ಆತ್ಮ ವಿಶ್ವಾಸ ತುಂಬಿದರು. ಎಂಬುದು ಗಮನಿಸಬೇಕಾದ ಸಂಗತಿ.

'ಹೆಣ್ಣು ಮಕ್ಕಳು ಹುಟ್ಟದ ಮನಿ
ಬಿಟ್ಟ ಕೊಟ್ಟ ಮನಿಗೆ ಬಂದಿರತಾಳ
ಹೊಂದಿಕೊಂಡು ಹೋಗ್ರಲೇ'
'ಹೆಣ್ಣ ಗಂಡ ಎರಡು ಸಮಾನ
ತಿಳಕೊಂಡ ನಡಿರ್ಲೇ'[೧೭]

ಇಂತಹ ಹೇಳಿಕೆಗಳು ಸ್ತ್ರೀ ಸಮಾನತೆಯನ್ನು ಎತ್ತಿ ತೋರಿಸುತ್ತವೆ. ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಸಾಂಸ್ಕೃತಿಕ ನೆಲೆಗಳನ್ನು ಹುಡುಕುವಾಗ ಒಡೆಯರರ ಹೇಳಿಕೆಗಳಿಗೆ ಆದ್ಯತೆ ನೀಡಬೇಕಾಗುತ್ತದೆ. ಒಡೆಯರರು ಕಟ್ಟಬಯಸಿದ ಸ್ತ್ರೀಸಮಾಜ ಪ್ರಜಾಪ್ರಭುತ್ವದ ತಳಹದಿಯ ಮೇಲಿತ್ತು ಎಂಬುದು ಗಮನಾರ್ಹ ಸಂಗತಿಯಾಗಿದೆ. ಇಂತಹ ಹೇಳಿಕೆಗಳನ್ನು ಸ್ತ್ರೀವಾದಿ ಅಧ್ಯಯನ ದೃಷ್ಟಿಯಿಂದ ಅಭ್ಯಾಸ ಮಾಡಿದರೆ ಕುತೂಹಲಕರವಾದ ಹಲವು ಸಂಗತಿಗಳು ಅನಾವರಣಗೊಳ್ಳುತ್ತವೆ.

ಹಾರಲಾಕ ಕಾಮನ ಬೂದಿ ಅಲ್ಲ!
ತಿರಗಲಾಕ ರಾಮನ ಬಾಣ ಅಲ್ಲ !
ಮುರಗಾನೂರ ಸಿದ್ಧನದು ಕಲ್ಲ ಅರಿಮ್ಯಾಗ
ಮ್ಯಾಣದ ಗೂಟ ಜಡದಂಗ!
ರೋಣಿ ಒಂದ ಭಾಗಕ್ಕ ಸಾಗ
ಮಾಡೇನಿ ಮಿರಗಕ್ಕ ಕೂರಿಗಿ ಸಾಗ ಮಾಡಬೇಕು
ಅನ್ನುದರಾಗ ಕೊಡ್ಡ ಅಡ್ಡ ಬಿತ್ತು ! ಆರಿದ್ರ
ಬಂದ ಭಾಗಕ್ಕ ಸಾಗ ಮಾಡೇನಿ ಪುಷ್ಯ
ಪುನರಶ್ಯಾಕ್ಕ ಸಂಪೂರ್ಣ ಮಾಡೀನಲೇ ಗಾಣಮಿಣಿ.೧೮

ಮುರಗಾನೂರ ಸಿದ್ಧ ಏನ ಹೇಳ್ಯಾನಂದೀರಿ !
ಬಲಿಜ್ವಾಕಿ ಮುರಗಾನೂರ ಅಗಸ್ಯಾಗ ಕ್ವಾಣ
ಹೊಕ್ಕತು ರಾಜಾ ಬಂದು ಅಗಸ್ಯಾಗ ಕುಂತಾನ
ಹಗ್ಗ ಹಾಕಿ ಎಳೀಬೇಕು ಅಂತಾನ
ಬಲು ಹುಷಾರಲೇ ಗಾಣಮಿಣಿ"

ಮುಂತಾದ ಹೇಳಿಕೆಗಳಲ್ಲಿ ಸ್ತ್ರೀ–ಪುರುಷರೆಂಬ ಲಿಂಗಬೇದ ಮರೆತು ಸಮಾನತೆಯ ಸೂಚನೆಗಳಿವೆ. ಹಾಲುಮತ ದೈವಗಳು ಎಲ್ಲ ಸಮುದಾಯದವರನ್ನು ಸಮಾನವಾಗಿ ಕಾಣುತವೆ. ಇದನ್ನೇ ಇನ್ನೊಂದು ಅರ್ಥದಲ್ಲಿ ಹೇಳಬೇಕಾದರೆ ಎಲ್ಲ ಸಮುದಾಯದವರು ನಡೆದುಕೊಳ್ಳುತ್ತಾರೆ. ಲಿಂಗಭೇದ–ವರ್ಗಭೇದ–ವರ್ಣಭೇದ ಅಲ್ಲಿ ಇರುವುದಿಲ್ಲ.

ಒಡೆಯರರು ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಜನಪದ ಅಂಶಗಳನ್ನು ಅಂದರೆ ಗಾದೆ, ನುಡಿಗಟ್ಟು, ಆಡುರೂಪಗಳು, ಅನುಕರಣ ವಾಚಕಗಳು, ಸಾಂಸ್ಕೃತಿಕ ವಿಶಿಷ್ಟ ಪದಗಳು, ಅನುಭವೋಕ್ತಿಗಳು ಇವುಗಳನ್ನು ತಮ್ಮ ಆಶಯಗಳಿಗೆ ತಕ್ಕಂತೆ ಬಳಸಿಕೊಂಡಿದ್ದಾರೆ. ಅಲ್ಲೆಲ್ಲ ದೇಶಿ ಪದಗಳ ಆಧಿಕ್ಯ, ಸಮಷ್ಠಿಯ ದಿಟ್ಟ ಅನುಭವ, ಸಾಮಾಜಿಕ ಪ್ರಜ್ಞೆ ಮೊದಲಾದ ಗುಣ ಲಕ್ಷಣಗಳಿಂದ ಕೂಡಿವೆ. ಉದಾಹರಣೆಗೆ ಅವರು ಬಳಸಿದ ಗಾದೆಗಳು ಬದುಕಿನ ಎಲ್ಲ ಮಗ್ಗುಲಗಳ ಪರಿಚಯ ಮಾಡಿಕೊಡುತ್ತವೆ. ಅಂತೆಯೇ ಒಡೆಯರರು ತಮ್ಮ ಹೇಳಿಕೆಗಳಲ್ಲಿ ಗಾದೆಗಳನ್ನು ಉಲ್ಲೇಖಿಸಿ ಹೇಳಿಕೆಗಳಿಗೆ ಹೊಸ ಆಯಾಮ ಕಲ್ಪಿಸಿದ್ದಾರೆ. 'ಮಂಗ್ಯಾನ ಕೈಯಾಗ ಮಾಣಿಕ್ಯ ಕೊಟ್ಟಂತೆ', 'ಕತ್ತಿಗೇನು ಗೊತ್ತು ಹತ್ತಿ ಕಾಳಿನ ಸವಿ' 'ನಾಯಿಯ ಬಾಲ ಡೊಂಕ' 'ಕುಡಗೊಲ ನುಂಗಿದವನ ಮುಕಳಿ ಹರಿತೈತಿ' ಮುಂತಾದ ದೇಶಿಯ ಮೂಲದ ಗಾದೆಗಳು, ದೃಷ್ಟಾಂತಗಳು ಒಡೆಯರರ ಹೇಳಿಕೆಗಳಲ್ಲಿ ಸೂತ್ರಬದ್ಧವಾಗಿ ಬಳಕೆಯಾಗಿವೆ. ಅದರಂತೆ ಒಡೆಯರರು ತಮ್ಮ ಉದ್ದೇಶ ಸಿದ್ಧಿಗಾಗಿ ತಮ್ಮ ಕಾಲದ ಜನಪದ ಆಡುರೂಪುಗಳನ್ನು ಸಹಜವಾಗಿ ಬಳಸುತ್ತಾರೆ (ಅಗಳು, ಅನ್ನದಚೂರು, ಅರಿ, ಉಜ್ಜು ಮುಂತಾದವು). ಇದರಿಂದ ಭಾಷಾ ಸಂಕೀರ್ಣತೆ ದೂರವಾಗಿ ಹೆಚ್ಚು ಘನವಾದ ವಿಚಾರಗಳನ್ನು ಸರಳವಾಗಿ ಬಳಸುವುದರ ಮೂಲಕ ಹೇಳಿಕೆಗಳ ಸಾಮಾಜಿಕ ಆಶಯ ಸುಲಭವಾಗಿ ಅರ್ಥವಾಗುತ್ತದೆ.

ಲೇ ಭೀಮಪ್ಪ ನಿನ್ನ ಬಾವಿಯಲ್ಲಿ ತೇಲಿ ಬಂದ
ಬೆತ್ತ ಇಟಗೊಂಡು ಏನ್ ಮಾಡಾವ ಮತಕ
ಕೊಟ್ಟ ಬಾ, ನನ್ನ ಮರಿ ಮುಂದ್ ಗದ್ದಿಗಿ ಮಾಡುವಾಗ
ಕೈಯಲ್ಲಿ ಬೆತ್ತ ಇರಬೇಕು.

ಸಂಚಾರ ಹೊರಟಾಗಲೂ ಇರಬೇಕು
ನೀನು ಬೆತ್ತ ಇಟಗೊಂಡಿ ಅಂದ್ರ ಕೇಡಾಕೈತಿ[೨೦]

ಮಕ್ಕಳಿರ್‍ಯಾ ಕೂಸಾ-ಕುನ್ನಿ ಹುಟ್ಟಿದರ್ ಮಳಿ ಇಲ್ಲ ಹೇಳಿರೊ,
ಹೇಳಿರೋ ಕೇಳಿರೊ,-ಕೇಳಿರೋ
ಕರಿ ಕಂಬಳಿ ಬೀರಪ್ಪ ಮೂಡಲ ದಿಕ್ಕಿಗೆ
ನಿಂತ ಕಂಬಳಿ ಬೀಸತಾನ ಸುತ್ತಲು ಮಳಿ ಸುರಿತೈತಿ
ಚಿಂತಿ ಮಾಡಬ್ಯಾಡರಲೇ[೨೧]

ಹೇಳಿಕೆಗಳು ಒಂದು ವಿಶೇಷ ಸಾಮಾಜಿಕ ಸಂದರ್ಭದಲ್ಲಿ ಸೃಷ್ಟಿಗೊಂಡಿರುವುದರಿಂದ ಸಾಮಾಜಿಕ ಪ್ರತಿಭಟನೆಯನ್ನು ಗಮನಿಸದೆ ಇರಲು ಸಾಧ್ಯವಾಗುವುದಿಲ್ಲ. ಒಡೆಯರರು ವ್ಯವಸ್ಥೆಯನ್ನು ಅದರಲ್ಲಿ ಅಂತರ್ಗತವಾಗಿದ್ದ ವೈರುಧ್ಯಗಳಿಗಾಗಿ ಪ್ರತಿಭಟಿಸಿದರು. ವರ್ಣ-ಲಿಂಗ-ವರ್ಗ ವ್ಯವಸ್ಥೆಯನ್ನು ತಿರಸ್ಕರಿಸಿದರು ನಿರಪೇಕ್ಷ ಲೋಕದೃಷ್ಟಿ ಅವರಿಗೆ ಮುಖ್ಯವಾಗಿತ್ತು. ಅದು ಸಹಿತ ಚಲನಶೀಲತೆಯಿಂದ ಕೂಡಿರಬೇಕು ಎಂಬುದು ಅವರ ನಿಲುವಾಗಿತ್ತು. ಒಡೆಯರರು, ಬಡತನ, ಬಡವರ ಬಗ್ಗೆ ಎಂದೂ ಆಲಕ್ಷ್ಯವನ್ನು ತೋರಲಿಲ್ಲ. ಅದರ ಬದಲು ಸಿರಿವಂತಿಕೆಯನ್ನು ಅದು ತರುವ ಅಹಂಕಾರವನ್ನು ಖಂಡಿಸಿದರು. ಸಿರಿತನ, ಜಾತಿಭೇದ, ಸ್ತ್ರೀಯರ ಬಗ್ಗೆ ಅಲಕ್ಷ್ಯ, ಅನಕ್ಷರತೆ, ದೇಶಭಾಷೆಗಳ ಬಗ್ಗೆ ಅಲಕ್ಷ್ಯತೆ ಇವನ್ನು ಖಂಡಿಸಿರುವವರಲ್ಲಿ ಒಡೆಯರರು ಮುಖ್ಯವಾಗಿದ್ದಾರೆ. ಬಡವರಿಗೆ ಮತ್ತು ಸಾಮಾಜಿಕ ಅಲಕ್ಷ್ಯಕ್ಕೆ ಒಳಗಾದವರಿಗೆ ಒಂದು ಆತ್ಮವಿಶ್ವಾಸವನ್ನು ಅವರು ತಂದು ಕೊಟ್ಟರು. ಮುಖ್ಯವಾಗಿ ಮಾನವ ಪ್ರೀತಿ, ಮಾನವ ಸಮಾನತೆಯನ್ನು ಅವರು ಎತ್ತಿ ಹಿಡಿದರು. ಹೇಳಿಕೆಗಳಲ್ಲಿ ಸಮಾಜ ಪರವಾದ ಪ್ರತಿಭಟನಾ ಸಾಹಿತ್ಯವೇ ಆಗಿದೆ.

ಟಗರಿನ ಬಾಲಾ ಮುರಿಬೇಕ
ಎದುರಿಗೆ ಬಂಟ ಬಂದರೂ ಹಿಂದ ಸರಿತಾನ.
ತಂಗಿ ಹೊತ್ತ ಮುಳಗುದರೊಳಗ ಮೂರು ಮೂಲಿ
ಜಾಗದಾಗ ಅಂಬಲಿ ಕಿಚಡಿಯಿಟ್ಟ
ಹಿಂದ ಹೊಳ್ಳಿ ನೋಡಬ್ಯಾಡ[೨೨]

ಹೆಗಲಮ್ಯಾಲ ಹೋಮದ ಕಂಬಳಿ ಹೊತ್ಕೊಂಡು
ಕೈಯಾಗ ನೇಮದ ಬೆತ್ತ ಹಿಡಕೊಂಡು.

ಮಾಳಪ್ಪ ಕುರಿ ಕಾಯ್ತಾನ ಕುರಿಗೋಳು
ಹಟ್ಯಾಗ ಮರಿ ಹಾಕ್ಯಾವ ಮಾಳಪ್ಪ ಬಾಗಿದೊಡ್ಡಿಗೆ
ಬಂದಾನೋ, ದೊಡ್ಯಾಗ ನಿಂತು ಹಾಲಹಿಂಡಿ ಭಕ್ತರಿಗೆ ಕೊಟ್ಟಾನು[೨೩]

ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆ ಇನ್ನಷ್ಟು ಸ್ಪಷ್ಟವಾಗಿ ತಿಳಿಯಲು ಹೇಳಿಕೆಗಳ ಅಧ್ಯಯನ ತುಂಬ ಅಗತ್ಯವಾಗಿದೆ. ಸಮಕಾಲೀನ ಸಾಮಾಜಿಕ ವ್ಯವಸ್ಥೆ –ಸಂಸ್ಕಾರಗಳು, ವಿವಾಹ, ದಾಸ, ದಾಸಿ, ತೊತ್ತು ಇಂತಹ ಸಾಂಪ್ರದಾಯಿಕ ಅಂಶಗಳು ಸಾಮಾಜಿಕ ಸೇವೆ , ಸುಧಾರಣೆ, ಸ್ತ್ರೀಯರ ಸ್ಥಾನಮಾನ ಅದರಂತೆ ಗ್ರಾಮ ವ್ಯವಸ್ಥೆ, ದೇಶ, ಊರು, ನೌಕರವರ್ಗ, ನ್ಯಾಯವ್ಯವಸ್ಥೆ, ಧಾರ್ಮಿಕ ವ್ಯವಸ್ಥೆಗೆ ಸಂಬಂಧಿಸಿದ ವೈವಿಧ್ಯಪೂರ್ಣ ಜಾತ್ರ–ಉತ್ಸವಗಳು, ಹಬ್ಬಗಳು, ಆಚಾರಗಳು, ಸಂಘರ್ಷಗಳು, ಕಲೆ–ಸಂಗೀತ– ಈ ಎಲ್ಲ ಅಂಶಗಳು ಹೇಳಿಕೆಗಳ ಉದರದಲ್ಲಿ ವ್ಯಾಪಿಸಿವೆ. ಆ ಕಾಲದ ಸಮಾಜೋಧಾರ್ಮಿಕ, ಸಮಾಜೋ ಸಾಂಸ್ಕೃತಿಕ ಅಂಶಗಳನ್ನು ತಿಳಿದುಕೊಳ್ಳವಲ್ಲಿ ಬಹುಮುಖ ಆಕರಗಳಾಗಿವೆ.

ಒಡೆಯರರು ಮತ್ತು ಅವರ ಮೌಖಿಕ ಸಾಹಿತ್ಯ ತಮ್ಮ ಸುತ್ತ ಮುತ್ತಣ ಜೀವನವನ್ನು ಪರಿಶೀಲಿಸುವುದು, ಅದರ ಅರ್ಥವನ್ನು ಕಂಡುಕೊಳ್ಳಲು ಪ್ರಯತ್ನಿಸುವುದು, ಲೋಕದ ಚೆಲುವನ್ನು ಕಂಡು ಹಿಗ್ಗುವುದು ಅದರ ಓರೆ–ಕೋರೆಗಳನ್ನು ಕಂಡು ಗಂಭೀರತೆ, ಭಯ ಮತ್ತು ಬೆಡಗುಗಳ ಮೂಲಕ ಕೆಲವು ಸಾರಿ ಕಟುನುಡಿಗಳ ಮೂಲಕ ಅವನ್ನು ತಿದ್ದಲು ಪ್ರಯತ್ನಿಸುವುದು ಇವು ಹೇಳಿಕೆಗಳ ಪ್ರಮುಖ ಲಕ್ಷಣಗಳು. ಒಟ್ಟಾರೆ, ಹಾಲುಮತ ಸಾಹಿತ್ಯದ, ಸಮುದಾಯದ ಉತ್ತಮ ಉಪದೇಶವಾಗಿ, ವಿವೇಕಿಗಳಾಗಿ ಹೇಳಿಕೆಯ ಒಡೆಯರರು ಮತ್ತು ಅವರ ಸಾಹಿತ್ಯ ಕಂಗೊಳಿಸುತ್ತದೆ. ಹೀಗೆ, ಹೇಳಿಕೆಗಳು ಸಮುದಾಯದ ತಿಳಿವಳಿಕೆಯನ್ನು ವಿಸ್ತರಿಸಲು ತುಂಬ ನೆರವಾಗುತ್ತವೆ. ಧಾರ್ಮಿಕ ಮತ್ತು ಸಾಮಾಜಿಕ ಸಮಾನತೆ ಜೊತೆಗೆ ಒಡೆಯರರು ಪರಸ್ಪರ ಪ್ರೀತಿ ಮತ್ತು ಗೌರವಗಳನ್ನು ತಾತ್ವಿಕ ಬುನಾದಿಯಾಗಿ ಹೊಂದಿರುವುದೇ ಆಗಿದೆ. ವಿಚಾರ ಮಾಡಿದರೆ. ಹೇಳಿಕೆಗಳ ಮೂಲದ್ರವ್ಯ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವುದೆ ಆಗಿದೆ. ಆ ಮೂಲಕ ಕರ್ನಾಟಕದ ಸಾಂಸ್ಕೃತಿ ಚರಿತ್ರೆಯ ಪುನಾರಚನೆಗೆ ಒಡೆಯರರ ಮೌಖಿಕವಾದ ಈ ಹೇಳಿಕೆಗಳು ತುಂಬ ನೆರವಾಗುತ್ತವೆ. ಇದುವೇ ಹೇಳಿಕೆಗಳ ಸಾಂಸ್ಕೃತಿಕ ಮಹತ್ವವಾಗಿದೆ ಮತ್ತು ಸಮಾಜೋ ಸಾಂಸ್ಕೃತಿಕ ವೈಶಿಷ್ಟ್ಯವಾಗಿದೆ.

**ಅಡಿ ಟಿಪ್ಪಣಿ :**

೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೪

೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೫

೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೬

೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೭

೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೨

೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೩

೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೪

೮. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೩೫

೯. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫೧

೧೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೫೪

೧೧. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೨. ಕುರುಬ ಸಮುದಾಯದ ಭಾಷೆ, ಎಸ್.ಎಸ್. ಅಂಗಡಿ, ಪು.ಸಂ. ೧೧೮

೧೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೮

೧೪. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೩೯

೧೫. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೬೫

೧೬. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೫

೧೭. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೪೪೦

೧೮. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ, ಪು.ಸಂ. ೧೬೭

೧೯. ಕುರುಬರ ಗುರುಒಡೆಯರು ಸಾಂಸ್ಕೃತಿಕ ಅಧ್ಯಯನ, ಬಿ.ಜಿ.ಬಿರಾದಾರ, ಪು.ಸಂ. ೧೬೮

೨೦. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೬

೨೧. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೪೪

೨೨. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೧೬೬

೨೩. ಅಪ್ರಕಟಿತ ಹೇಳಿಕೆಗಳು, ಕ್ರಮ ಸಂ: ೨೨೭

# ಅಧ್ಯಾಯ-ಆರು
# ಸಮಾರೋಪ

ಕುರುಬರ ಹೇಳಿಕೆಗಳನ್ನು ಕುರಿತು ಅಭ್ಯಾಸ ಮಾಡುವಾಗ ಮುಖ್ಯವಾಗಿ ಕಂಡು ಬರುವ ಅಂಶಗಳೆಂದರೆ ಒಡೆಯರರ ವಿಶಿಷ್ಟ ಚಿಂತನೆಗಳು ಮತ್ತು ಅವುಗಳ ಪ್ರತಿಮಾರೂಪದ ಭಾವಸಂವಹನೆ. ಹೇಳಿಕೆಗಳಲ್ಲಿ ಮುಖ್ಯವಾಗಿ ಕಾಣುವುದು ಸಾಮಾಜಿಕ ಕಳಕಳಿಯ ತೀವ್ರತೆ, ಮತ್ತು ವ್ಯವಸ್ಥೆಯ ಸುಭದ್ರತೆಯ ಬಗ್ಗೆ ಕಾಳಜಿ ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳು.

೧. ಹೇಳಿಕೆಗಳ ಅರ್ಥವನ್ನು ಸ್ಪಷ್ಟಪಡಿಸಿದ್ದು, ಹೇಳಿಕೆಗಳು ಸಮುದಾಯದ ಬದುಕಿನಲ್ಲಿ ಕಂಡು ಬರುವ ಸಂಗತಿಗಳನ್ನು ಸ್ಥೂಲವಾಗಿಯೂ, ಬೆಡಗಿನ ರೂಪದಲ್ಲಿಯೂ ತಿಳಿಯಪಡಿಸುತ್ತವೆ. ವಿಶೇಷವಾಗಿ ಹೇಳಿಕೆಗಳು ಕೃಷಿ ಮತ್ತು ಕೃಷಿಯನ್ನು ಅವಲಂಬಿಸಿದ ರೈತಾಪಿ ವರ್ಗವನ್ನು ಕುರಿತು ರಚನೆಯಾಗಿದೆ. ಮಳೆ-ಬೆಳೆ-ವ್ಯಾಪಾರ-ವಾಣಿಜ್ಯ ಪ್ರಕೃತಿ ವಿಕೋಪಗಳು ಇವು ಹೇಳಿಕೆಗಳಲ್ಲಿ ಹೆಣೆಯಲ್ಪಟ್ಟಿವೆ. ಇದನ್ನು ಗುರುತಿಸಲಾಗಿದೆ.

೨. ಹೇಳಿಕೆಗಳು ನಂಬಿಕೆಯ ತಳಹದಿಯ ಮೇಲೆ ರೂಪಿತವಾದ ಮೌಖಿಕ ಸಾಹಿತ್ಯ ಪ್ರಕಾರ. ಕಣಿ ಹೇಳುವುದು, ಹೊತ್ತಗೆ ತೆಗೆಯುವುದು, ಸಾರುವಯ್ಯಗಳ ಕಾಲಜ್ಞಾನ ಇವೆಲ್ಲ ಮಾನವನ ಭವಿಷ್ಯತ್ತಿನ ಚಿಂತನದ ವಿವಿಧ ರೂಪಗಳಾಗಿವೆ. ಹೇಳಿಕೆಗಳು ಬೆಡಗು, ಕಾಲಜ್ಞಾನಗಳ ಹೋಲಿಕೆ-ವ್ಯತ್ಯಾಸಗಳನ್ನು ಗುರುತಿಸಲು ಯತ್ನಿಸಲಾಗಿದೆ. ಹೇಳಿಕೆಗಳು ಹಾಲುಮತ ಸಮುದಾಯದ ಒಡೆಯರರು ಹೇಳುವ ದೈವೀ ಆದೇಶಗಳಾಗಿವೆ. ಅವುಗಳ ಸ್ವರೂಪವನ್ನು ವಿವೇಚಿಸಲಾಗಿದೆ.

೩. ಹೇಳಿಕೆಗಳನ್ನು ಕುರಿತು ಎಂ.ಎಂ.ಪಡಶೆಟ್ಟಿ, ಚಿನ್ನಪ್ಪ ಕಟ್ಟಿ ಮುಂತಾದ ವಿದ್ವಾಂಸರು ಅವರ ಅಧ್ಯಯನಕ್ಕೆ ತಕ್ಕಂತೆ ವರ್ಗೀಕರಿಸಿದ್ದಾರೆ. ನಾನು ಕ್ಷೇತ್ರಕಾರ್ಯದಿಂದ ಸುಮಾರು ೪೪೨ ಹೇಳಿಕೆಗಳನ್ನು ಸಂಗ್ರಹಿಸಿ ಮಳೆ, ಕೃಷಿ, ವ್ಯಾಪಾರ-ವಾಣಿಜ್ಯ ಕೃಷಿಯೇತರ ಕುರಿತು ಹೇಳಿಕೆಗಳೆಂದು ವಿಂಗಡಿಸಿ ಅವುಗಳ ಹಿಂದಿರುವ ಆಶಯವನ್ನು ಗುರುತಿಸಲಾಗಿದೆ.

೪. ಒಡೆಯರರ ಹೇಳಿಕೆಗಳಲ್ಲಿ ಸಾಮಾನ್ಯನಿಗೂ ಕೂಡ ಅರ್ಥವಾಗುವ ಭಾಷೆಯನ್ನು ಬಳಸಿರುವಲ್ಲಿಯೂ ಅವರ ಸಮಾಜಮುಖಿಯಾದ ಚಿಂತನೆಯನ್ನು ಕಾಣುತ್ತೇವೆ. ಅವರು ಹೇಳಿಕೆಯನ್ನು ನಿರ್ಮಿಸಲು ಉದ್ದೇಶವಿಟ್ಟುಕೊಂಡು ಹೊರಟವರಲ್ಲ ಸಮುದಾಯದ ಸದಸ್ಯರ ಹಿತಕ್ಕಾಗಿ ಆ ಸಂದರ್ಭದಲ್ಲಿ ಒದಗಿಬಂದ ಪ್ರತಿಸ್ಪಂದಿಯಾಗಿ ಹೇಳಿಕೆಗಳು ಮೂಡಿಬಂದಿವೆ. ಆದುದರಿಂದ ಹೇಳಿಕೆಗಳು ಕಟ್ಟಿದ ಸಾಹಿತ್ಯವಲ್ಲ; ಅದು ಸಂದರ್ಭಾನುಸಾರಿಯಾಗಿ ಹುಟ್ಟಿಬಂದ ಸಾಹಿತ್ಯ. ಅದು ಸಮುದಾಯದ ಸದಸ್ಯರ ಸಮಸ್ಯೆಗಳಿಗೆ ಸ್ಪಂದಿಸುತ್ತದೆ. ಹೇಳಿಕೆಗಳಲ್ಲಿ ಗಾದೆಮಾತು, ನುಡಿಗಟ್ಟುಗಳು, ಹೆಸರುಗಳು, ಬೈಗುಳಗಳು, ಬಂಧು ಸೂಚಕಗಳಿವೆ. ತಾತ್ಪರ್ಯವಿಷ್ಟೆ, ಹೇಳಿಕೆಗಳು ಜನಮುಖಿಯಾದ ಸಾಹಿತ್ಯವಾಗಿದೆ. ಹೇಳಿಕೆಗಳಲ್ಲಿ ಭಾವತೀವ್ರತೆಯಿದೆ. ಸರಳತೆ, ಸಹಜತೆ ಮತ್ತು ಆಪ್ತತೆ ಇವು ಹೇಳಿಕೆಗಳ ಭಾಷೆಯ ಲಕ್ಷಣಗಳು. ಅವುಗಳ ಸ್ವರೂಪವನ್ನು ಉದಾಹರಣೆ ಸಮೇತ ಗುರುತಿಸಲಾಗಿದೆ.

೫. ಹೇಳಿಕೆಗಳಲ್ಲಿ ಸಮಾಜ ವಿಮರ್ಶೆಯಿದೆ. ಸಮಾಜದ ಕೊರತೆಗಳ ಬಗ್ಗೆ ಬಹುಸ್ಪಷ್ಟ ಟೀಕೆ ಇದೆ. ಸಮಾಜವನ್ನು ತಿದ್ದುವ ಹಂಬಲವಿದೆ. ಜನರ ಯೋಗಕ್ಷೇಮದ ಪ್ರಭಾವವಾಗಿರುತ್ತದೆ. ಹೇಳಿಕೆ ಹೇಳುವ ಒಡೆಯರರು, ಪೂಜಾರಿಗಳು ಸಮಾಜ ಸುಧಾರಕರೂ ಹೌದು. ಅದನ್ನು ಗುರುತಿಸಲಾಗಿದೆ. ಭಕ್ತರಿಗೆ ಕಷ್ಟಬಂದಾಗ ಉತ್ಕಟ ಕ್ಷಣಗಳಲ್ಲಿ ವಿಶೇಷವಾಗಿ ಕಾಣುವ ಅವರ ಸಾಮಾಜಿಕ ಪ್ರಜ್ಞೆ ಆ ಮೂಲಕ ಅವರು ಭಕ್ತರಿಗೆ ಹೇಳುವ ನೀತಿ ಮತ್ತು ಎಚ್ಚರಿಕೆಯ ಮಾತುಗಳು ಸತ್ವಪೂರ್ಣವಾಗಿವೆ. ನಿತ್ಯ ಬದುಕಿನ ಸಮಸ್ಯೆಗಳು ಮತ್ತು ಸಂಕೀರ್ಣತೆಗಳನ್ನು ಹಿಡಿದಿಡುವ ಸಹಜ ವಿಧಾನವೇ ಹೇಳಿಕೆಗಳ ಜೀವಂತಿಕೆಗೆ ಕಾರಣವಾಗಿವೆ. ಮನುಷ್ಯನ ನಡುವಳಿಕೆಗಳ ವಿಮರ್ಶೆ ಮತ್ತು ಪುನರ್ ಪರಿಶೀಲನೆಗಳು ಅವರ ಹೇಳಿಕೆಗಳ ಮುಖ್ಯವಸ್ತುವಾಗುತ್ತವೆ. ಸಮುದಾಯದಲ್ಲಿ ಕಂಡುಬರುವ ಸಿರಿತನ-ಬಡತನ, ಗೃಹಕೆಲಸ, ಕೃಷಿ ಕ್ರಿಯೆಗಳು, ಕೌಟುಂಬಿಕ ಜೀವನ, ಸ್ನೇಹಸಂಗ ಈ ಕುರಿತು ಹೇಳಿಕೆಗಳಲ್ಲಿ ಸಾಮಾಜಿಕ ಕಳಕಳಿ ಮತ್ತು ಸುಧಾರಣೆಯಿಂದ ಅದನ್ನು ಗುರುತಿಸಲಾಗಿದೆ. ಒಡೆಯರರ ಸಾಮಾಜಿಕ ಹೇಳಿಕೆಗಳಲ್ಲಿ ಭಕ್ತರಲ್ಲಿ ಕಂಡು ಬರಬೇಕಾದ ವಿನೀತ ಭಾವ, ಬದುಕಿನಲ್ಲಿ ವೀರಭಾವ, ದೇವರ ನಡೆ-ನುಡಿ ಸಹಜೀವಿಗಳಲ್ಲಿ ಅನುಕಂಪ ಇವುಗಳನ್ನು ಭಕ್ತರು ಅಳವಡಿಸಿಕೊಳ್ಳುವಂತೆ ಸೂಚಿಸಿದರು.

೬. ಒಡೆಯರರ ಹೇಳಿಕೆಗಳಲ್ಲಿ ಶರಣರು ಪ್ರತಿಪಾದಿಸಿದ 'ದಯವೇ ಧರ್ಮದಮೂಲ' ಎಂಬ ಪರಿಕಲ್ಪನೆಯ ಬಗ್ಗೆ ಸ್ಪಷ್ಟವಾದ ಧೋರಣೆ ಕಂಡು ಬರುತ್ತದೆ. ಜಾತಿ ಮತಗಳ ಕಟ್ಟುಪಾಡಿನಲ್ಲಿ ಸಿಕ್ಕಿ ನರಳುತ್ತಿದ್ದ ಸಮಕಾಲೀನ ಸಮಾಜದಲ್ಲಿ ಜಾತ್ಯಾತೀತವನ್ನು ಅರಳಿಸಿ ವಿವಿಧ ಮತೀಯರನ್ನು ಒಂದು ಗೂಡಿಸುವ ಏಕತಾಭಾವ ಹೇಳಿಕೆಗಳಲ್ಲಿದೆ. ಹಾಲುಮತ ದೈವ ಹಬ್ಬಹರಿದಿನಗಳಲ್ಲಿ ಎಲ್ಲ ಸಮುದಾಯದವರು ಬಂದು ಸೇರುತ್ತಾರೆ. ತಮ್ಮ ತಮ್ಮ ಕಷ್ಟಸುಖಗಳನ್ನು ಕೇಳುತ್ತಾರೆ; ದೇವರಿಗೆ ಮೊರೆಯಿಡುತ್ತಾರೆ. ಅಂದರೆ ಸಾಮಾನ್ಯ ಜನತೆ ಕೂಡ ಧರ್ಮದ (ನೀತಿ/ನ್ಯಾಯ) ಹಾದಿಯಲ್ಲಿ ನಡೆದು ಆಧ್ಯಾತ್ಮಿಕ ಆನಂದವನ್ನು ಅನುಭವಿಸಿ ರಚಿಸಿದ ಅನುಭಾವದ ಗದ್ಯಭಾಗಗಳೇ

ಹೇಳಿಕೆಯಾಗುತ್ತಿದ್ದವು. ಧಾರ್ಮಿಕ ಚೌಕಟ್ಟನ್ನು ರಚಿಸುವುದಕ್ಕೆ ಮೊದಲು ಮಾನವಧರ್ಮವನ್ನು ಎತ್ತಿ ಹಿಡಿಯುವಂತಹ ಒಡೆಯರರ ವ್ಯಕ್ತಿತ್ವ ನಿರೂಪಣೆಗೆ ಆದ್ಯತೆ ದೊರಕಿತು. ಭಕ್ತರು (ಮನುಷ್ಯ) ಅಂತರಂಗ ಶುದ್ದಿ ಮತ್ತು ಬಹಿರಂಗ ಶುದ್ದಿ ಕಂಡುಕೊಳ್ಳಬೇಕೆಂಬ ಆರೋಗ್ಯಕರ ಚಿಂತನೆ ಹೇಳಿಕೆಗಳಲ್ಲಿದೆ. ದೈವ, ಸಂಸ್ಕಾರ, ಗುರು, ಆಚರಣೆಗಳು, ಹೊಂದಾಣಿಕೆ– ಈ ಎಲ್ಲ ಆಂಶಗಳನ್ನು ಅವರ ಧಾರ್ಮಿಕ ಹೇಳಿಕೆಗಳಲ್ಲಿ ಅಭಿವ್ಯಕ್ತವಾಗಿರುವುದನ್ನು ಸೋದಾಹರಣವಾಗಿ ಗುರುತಿಸಲಾಗಿದೆ.

೭. ಹೇಳಿಕೆಗಳ ಮನಃಶಾಸ್ತ್ರೀಯ ನೆಲೆಯು ತುಂಬ ಮುಖ್ಯವಾದುದಾಗಿದೆ. ಮಾನವನ ಆಂತರಿಕ ಮತ್ತು ಬಾಹ್ಯ ವರ್ತನೆಗಳ ಅಭ್ಯಾಸವೇ ಮನಃಶಾಸ್ತ್ರವೆನಿಸಿಕೊಳ್ಳುತ್ತದೆ. ಮನಶಾಸ್ತ್ರವೂ ಸಹಿತ ಮನುಷ್ಯನ ಬದುಕಿನಲ್ಲಿ ಬಹುಮುಖ ಪಾತ್ರವಹಿಸುತ್ತದೆ. ಹೇಳಿಕೆಗಳು ಒಡೆಯರರ ಆಲೋಚನೆ, ಚಿಂತನೆ, ತಿಳಿವಳಿಕೆ, ಸ್ಮರಣೆ, ಗ್ರಹಿಕೆ ದೇವರು ಮೈಮೇಲೆ ಬಂದಾಗ ಅವರ ಭಾಷೆ, ಭಾವತೀವ್ರತೆ, ಸಂವೇದನೆ ಆಗ ಉಂಟಾಗುವ ದೈವೀವಾತಾವರಣ ಆಗ ಒಡೆಯರರು (ದೇವರಸಿ)ದೈಹಿಕವಾಗಿ ನೆಲದ ಮೇಲಿದ್ದರೂ ಆತನ ಭಾವ ಬೀರಪ್ಪನಲ್ಲಿ ಅಥವಾ ಹಾಲುಮತ ದೈವದಲ್ಲಿ ಲೀನವಾಗಿ ದೈವೀಸ್ಫೂರ್ತಿಗೆ ಒಳಗಾಗುತ್ತಾನೆ. ಆಗ ಅವನು ತನಗಾದ ಅನುಭವವನ್ನು ಬೆಡಗಿನ ಮಾತುಗಳಲ್ಲಿ ಉಚ್ಚರಿಸುತ್ತಾನೆ. ಅವುಗಳಿಗೆ ದೇವರ ಹೇಳಿಕೆಗಳೆನ್ನುವರು. ಅವುಗಳ ಬಗ್ಗೆ ಭಕ್ತರಿಗೆ ಅಪಾರ ಶ್ರದ್ಧೆ ಮತ್ತು ನಂಬಿಕೆ ಇರುತ್ತದೆ. ಈ ಕುರಿತು ವಿವರವಾಗಿ ವಿವೇಚಿಸಲಾಗಿದೆ.

೮. ಈ ಅಧ್ಯಯನದ ಉದ್ದೇಶಕ್ಕೂ ದಾಖಲಾಧಾರಿತ ಸಂಶೋಧನೆ ಮತ್ತು ಕ್ಷೇತ್ರಕಾರ್ಯ ಸಂಶೋಧನೆಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ದಾಖಲಾಧಾರಿತ ಸಂಶೋಧನೆಯ ವಿಧಾನದಲ್ಲಿ ಈ ಹಿಂದೆ ವಿವಿಧ ವಿದ್ವಾಂಸರು ವಿಶೇಷವಾಗಿ ಎಂ.ಎಂ.ಪಡಶೆಟ್ಟಿ ಅವರು ವಿಜಯಪುರ ಪರಿಸರದಲ್ಲಿ ಕ್ಷೇತ್ರ ಕಾರ್ಯಕೈಕೊಂಡು ೨೮೮ ಹೇಳಿಕೆಗಳನ್ನು ಮತ್ತು ೧೧೭ ಮೈಲಾರ ಕಾರ್ಣಿಕೋತ್ಸವದ ಹೇಳಿಕೆಗಳನ್ನು ಸಂಗ್ರಹಿಸಿದ್ದಾರೆ. ಅದರಂತೆ ಬಿ.ಜಿ.ಬಿರಾದಾರ, ಚೆನ್ನಪ್ಪ ಕಟ್ಟಿ ಮುಂತಾದ ವಿದ್ವಾಂಸರು ೫೨ ಹೇಳಿಕೆಗಳನ್ನು ತಮ್ಮ ಸ್ವತಂತ್ರ ಗ್ರಂಥದಲ್ಲಿ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಮೇಲೆ ಹೇಳಿದ ವಿದ್ವಾಂಸರ ಹೇಳಿಕೆಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳನ್ನು ಹೊರತುಪಡಿಸಿ ಬೆಳಗಾವಿ, ವಿಜಯಪುರ, ಬಾಗಲಕೋಟ, ಧಾರವಾಡ, ಹಾವೇರಿ, ಗದಗ ಮತ್ತು ಬಳ್ಳಾರಿ ಜಿಲ್ಲೆಗಳ ಹಾಲುಮತ ದೈವಗಳಿರುವ ನೆಲೆಗಳನ್ನು ಶೋಧಿಸಿ, ಕ್ಷೇತ್ರಕಾರ್ಯ ಕೈಕೊಂಡು ೪೪೨ ಹೇಳಿಕೆಗಳನ್ನು ಹೊಸದಾಗಿ ಸಂಗ್ರಹಿಸಲಾಗಿದೆ. ಅವೆಲ್ಲವೂ ಅಪ್ರಕಟಿತ ಹೇಳಿಕೆಗಳಾಗಿವೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಪ್ರಶ್ನಾವಳಿ, ಸಂದರ್ಶನ, ವೀಕ್ಷಣೆ ಮುಂತಾದ ಸಾಧನ ಮತ್ತು ತಂತ್ರಗಳನ್ನು ಬಳಸಿಕೊಳ್ಳಲಾಗಿದೆ.

ಒಟ್ಟಿನಲ್ಲಿ ಕ್ಷೇತ್ರಕಾರ್ಯದ ಮೂಲಕ ಹೇಳಿಗಳನ್ನು ಸಂಗ್ರಹಿಸಿ ಅವುಗಳ ಸ್ವರೂಪಕ್ಕೆ ತಕ್ಕಂತೆ ವರ್ಗೀಕರಿಸಿ ಅವುಗಳ ಭಾಷೆ, ಸಮಾಜ, ಸಂಸ್ಕೃತಿ, ಧರ್ಮ, ನಂಬಿಕೆ, ಆಚರಣೆ, ಮನಃಶಾಸ್ತ್ರ ಈ ನೆಲೆಗಳಲ್ಲಿ ವಿವರವಾಗಿ ವಿವೇಚಿಸಲಾಗಿದೆ. ಆ ಮೂಲಕ ಒಡೆಯರರು ಹೇಳಿಕೆಗಳಲ್ಲಿ

ಪ್ರತಿಪಾದಿಸಿದ ಸಾಮಾಜಿಕ ಮೌಲ್ಯಗಳು, ಕೃಷಿ ಸಂಸ್ಕೃತಿಯನ್ನು ಒಳಗೊಂಡಂತೆ ಬದುಕಿನ ವಿವರಗಳನ್ನು ಮಾನವೀಯ ನೆಲೆಯಲ್ಲಿ ಗ್ರಹಿಸಲಾಗಿದೆ. ಕರ್ನಾಟಕದ ಜನಪದ ಸಂಸ್ಕೃತಿಯ ಅಧ್ಯಯನಕ್ಕೆ ಮತ್ತು ಪುನಾರಚನೆಗೆ ಪ್ರಸ್ತುತ ಅಧ್ಯಯನ ಆಕರವಾಗುತ್ತದೆ.

# ಅನುಬಂಧಗಳು

೧. ಛಾಯಾಚಿತ್ರಗಳು

೨. ಅಪ್ರಕಟಿತ ಹೇಳಿಕೆಗಳು

೩. ವಕ್ತೃಗಳ ಹೆಸರುಗಳು

೪. ಆಕರ ಗ್ರಂಥಗಳು



ಸರೂರ ರೇವಣಸಿದ್ದೇಶ್ವರರ ದೇವಾಲಯ

ಸರೂರ ಶಾಂತಮುತ್ತಯ್ಯನ ಒಡೆಯರು


ಸರೂರ ಶಾಂತಮುತ್ತಯ್ಯನ ಹೇಳಿಕೆಗೆ ಹೋಗುವ ಸಂದರ್ಭ


ದೇವರಕಡಬಿ ಇಟ್ಟಪ್ಪನ ಹೇಳಿಕೆ ಸಂದರ್ಭ



ತೂಗುಡ್ಡ ರೇವಣ್ಣಸಿದ್ದೇಶ್ವರ ದೇವಾಲಯ



ಯರಝುರ್ವಿ ಕರಿಸಿದ್ದೇಶ್ವರ ಹೇಳಿಕೆ ಸಂದರ್ಭ



ಚೀಂಚಲಿ ಮಾಯವ್ವನ ಗದ್ದುಗೆ




ಚಿಂಚಲಿ ಮಾಯವ್ವನ ಡೊಳ್ಳು ಸಂಗ್ರಹ



ಮಮದಾಪೂರ ಬೀರಪ್ಪನ ಹೇಳಿಕೆಯ ಸಂದರ್ಭ



ಗೊರಗುದ್ದಿ ಇಟ್ಟಪ್ಪನ ಹೇಳಿಕೆಯ ಜಗುಲಿ



ಮುಳ್ಳುಕಂಟಿಯ ಮೇಲೆ ನಿಂತು ಹೇಳಿಕೆ ಮಾಡುವ ಸಂದರ್ಭ



ಮಲಕಾರಿಸಿದ್ಧ ಒಡೆಯರೊಂದಿಗೆ ಸಂದರ್ಶನ

# ಅನುಬಂಧ-೨

## ಅಪ್ರಕಟಿತ ಕುರುಬರ ಹೇಳಿಕೆಗಳು

### (ಕ್ಷೇತ್ರಕಾರ್ಯ ಆಧಾರಿತ)

೦೧. ಕೇಳರಲೇ, ಅಡವ್ಯಾನ ಕುರಿಗಳಿಗೆ ಕುಡ್ಯಾಕ ನೀರಿಲ್ಲ ಉತ್ತರ ದಿಕ್ಕಿನ್ಯಾಗ್ ಉರಿ ಬರ್ತದ ಜ್ವೋಕಿಲೆ ಇರಬೇಕ್

೦೨. ಕೇಳರಲೇ, ಮೂಡಣ ದಿಕ್ಕಿನ್ಯಾಗ್ ಹೆಣಾ ಎಣಿಕಿ ಇಲ್ದ ಬಿದ್ದಾವ್, ಹಂದಿ ನಾಯಿಗೋಳ ತಿಂದ ದಣದಾವ್ ಹಿಂಗ್ ಆಗದಂಗ್ ನೋಡರಲೇ

೦೩. ನಾಲ್ಕು ಮಂದಿ ಬರಲೇ, ಸುತ್ತ ಮೂರು ಗಾವುದ ದಾಟಿ ಸುದ್ದಿ ತಂದನ್ ಅಲ್ಲಿಂದ ಕಡೋಲಿ ಇಟ್ಟಪ್ಪ ಬಂದಾನ್, ಭಂಡಾರ್ ಹಚ್ಯಾನ ಕೌಲ್ ಕೇಳ್ಯಾರ್ ಮಕ್ಕಳ ಮರಿ ಆಗತಾವ್ ಮೂರ ಅಮಾಸಿ ಬಂದ್ ಹೋಗಪ್ಪ

೦೪. ತಂಗಿ ಚಂದಾಗಿ ಕೇಳವ್ವ ಹಾಲು, ಹೈನು, ಮೊಸರು ಗಡಿಗ್ಯಾಗ್ ಇಲ್ಲ ಇದು ದೂರದ ಮಾತು ಅಲ್ಲ ಮನಿ ಮನಿಗೆ ಕಡಬಿ ಇಟ್ಟಪ್ಪ ಸಾರಿ ಹೇಳ್ಯಾನ್

೦೫. ಹುನ್ನ ಎಲ್ಲರಿಗೂ ಬರ್ತದಲೇ, ಅದಕ ಅಂಜಬ್ಯಾಡ್ರಿ ಹುನ್ನ ಗುರು ಬೀರಪ್ಪಗ ಬಿಟ್ಟಿಲ್ ಭಂಡಾರ್ ಹಾಕರಲೇ

೦೬. ಎಲೇ, ರೈತ ಭಕ್ತಿಯಿಂದ ಬಿತ್ತರಲೇ ಪುಣ್ಯಾದ ಬೆಳಿ ಬರ್ತೈತಿ ಆಗ ಅಂಗ್ಯೆ ನೋಡಿ ಮುಂಗ್ಯೆ ಏರತಾವ ಅನ್ನದ ಮನಿ ಆಗ್ತದ್

೦೭. ತಂಗೀ ಅಂಜಬ್ಯಾಡ ಐದು ಅಮಾಸಿ ನನ್ನ ಗುಡಿಗಿ ಬಾ, ಹೂ ಹಾರಸ್, ಬೆಕ್ಕಾ ಓಡಿದ ತಂದ್ ನಿನ್ನ ಕೈಯಾಗ್ ಕೊಟ್ಟೇನ್ ಮಕ್ಕಳ ಆಗತಾವ, ಹಿಡಿ ಭಂಡಾರ್

೦೮. ಬ್ಯಾಡ, ಬ್ಯಾಡ ಏ ತಮ್ಮ ಉರಿ ಕಿಚ್ಚು ಬಂದಾವ್ ಹೋಗಬ್ಯಾಡ ತಡಕೊಂಡಷ್ಟು ಸುಖಾ ಐತಿ ಚಿಂಚಿಲಿ ಮಾಯವ್ವ ಹೇಳ್ಯಾಳ

೦೯. ಕಣ್ಣೀಲಿ ನೋಡಬಾರದ ಮುತ್ತಿನ ಸೆರಗ ಹಿಡಿದಾರ ಹೊಟ್ಟಿಮ್ಯಾಲ ಕೈಯಿಟ್ಟು, ಪಿಂಡಾಂಡ ನೋಡ್ಯಾನ್ ನಿಂಗ್ ಬೀರಣ್ಣ ಹೇಳಕಿ ಹೇಳ್ಯಾನ

೧೦. ಮಕ್ಕಳಿರಾ ಇದ ಸುಕಾಕಾಲ ಅಲ್ಲರಲೇ ಹೊಟ್ಟಿ ಹೊಸದ ದಾಟಬೇಕು, ಗ್ವಾಡಿ ಹಿಡಿದ ನಡಿಬೇಕು, ಸೋತ ಮಾತಾಡಿದರ ಬಾಳೆ ಅಕ್ಕತಿ ಸಣ್ಣವನಾಗಿ ಸರಕೋಲೆ

೧೧. ಭೂಮಿಮ್ಯಾಲ್ ಕರ್ಮ ಹೆಚ್ಚಾತಾಯಿತು, ಧರ್ಮ ಮುಳುಗ್ತಾಯಿದೆ. ಧರ್ಮಿಗಳ ರಾಜ್ಯ ಲೋಪಾಗಿ ಈ ಕಲಿಯುವ ಕರ್ಮಿಗಳದೇ ಆಟ ಆಗ್ತಾಯಿದೆ

೧೨. ಲೋಕದಾಗ ಮಾನವಂತರು ಇಲ್ಲಾ, ದಾನವಂತರು ಇಲ್ಲಾ, ಮಾನ ಹೋಗ್ತಾಯಿದೆ ಅದಕ ಭೂಮಿಮ್ಯಾಲ್ ಮಳಿ ಬೆಳಿ ಕಡಿಮೆ ಆಗ್ತಾ ಇದೆ

೧೩. ಮಾರಕೊಬ್ಬ, ಸತ್ಯ ಮಾರಕೊಬ್ಬ, ಮಿತ್ಯ ಮಾರಕೊಬ್ಬ ಭಕ್ತ, ಮಾರಕೊಬ್ಬ ಭಕ್ತ, ಉಳಿದಾರು ಜೊಳ್ಳ ತೂರಿ ಗಟ್ಟಿ ಉಳಿಬೇಕು

೧೪. ತಪ್ಪ ಇದ್ದರ ತೆಗೆದು ಹಾಕಿರಿ ನನ್ನ ಬೀರಪ್ಪನ ಉಡಿಗಿ ಹಾಕೊಳ್ಳ

೧೫. ಹೆಂಡತಿ ಒಂದ ಕಡೆ, ಗಂಡ ಒಂದ ಕಡೆ, ಹುಂಜದ ಕಾಳಗ ಹಾಗಲೇಡಿರಲೇ ಹೊಂದಕೊಂಡ್ ಹೋಗ್ರಿ

೧೬. ಅಂತು ಇಂತು ಅನ್ನ ಬ್ಯಾಡರೀ ಹುಚ್ಚ ಸೂಳಿಮಕ್ಕಳು, ನೀವು ಹೊತ್ತ ಕಳದ ವ್ಯಾಳೆ ಹಾಳಮಾಡಿ ಅಂತರಂಗ ತಿಳಿಲಿಲ್ಲ.

೧೭. ದೀವಿಗೆ ದೀಪದ ಕುಡಿಹಂಗ್ ದಿನಮಾನ ಬಂದಾವು ಗೊತ್ತು ನೋಡಿ ಹೊತ್ತು ಹೇಳಬೇಕು

೧೮. ಈ ವರ್ಷ ಮಳಿ ಬಂದ ಊರ ತಂಪ ಅಕ್ಕತಿ ಈ ವರ್ಷ ಹೊಟ್ಟ ನೆತ್ತಿಗೆ ಕಡಿಮಿ ಇಲ್ಲ ತಪ್ಪ ಇದ್ರ ತಗದ ಹಾಕ್ರಿ ಬೀರಪ್ಪನ ಉಡ್ಯಾಗ ಹಾಕ್ರಿ

೧೯. ನರ ಜನ್ಮಕ ಬಂದು ಗರವು ಇರಬಾರದು ಅರಿವಿನೊಳಗೆ ಅರಿವು ಇರಬೇಕು

೨೦. ತಂದಿ–ತಾಯಿನ ಸೇರಲಿಲ್ಲ ಮನಕ ನಾಚಿಕೆ ಹುಟ್ಟಲಿಲ್ಲ, ಕನಕ–ಹೆಣ್ಣು–ಮಣ್ಣಿಗಾಗಿ ನಾಯಿಯಂತೆ ಬೆನ್ನ ಹತ್ತಬಾರದ

೨೧. ಮುಚ್ಚಿದ ಕದಗಳು ತೆರೆಯದೇ ಹೋದಾವು, ಹೊಂಗಲ ಸೀಮಿ ಬಯಲಾಗಿ ಹೋಯಿತು, ಗಾಣದಾಗಿನ ಎಣ್ಣಿ ಗಾಣ ನುಂಗಿತು ತಿಳಿಯದೇ ಹೋದೀತು

೨೨. ಸತ್ತ ಕ್ವಾಟಿಯ ಮೇಲೆ ಮತ್ತೆ ಕ್ವಾಟಿಯ ಕಟ್ಟಿ ಮುತ್ತೈದೆ ಮಗ ಆಳ್ತಾರ, ಈ ನಾಡ ನಿತ್ತ ಹೋದಿತು ಹಾಕರಲೇ ಡೊಳ್ಳು

೨೩. ಐದ ಅಮಾಸಿ ಉಪ್ಪ–ಹಪ್ಪಳ–ಸ್ಯಾಂಡಿಗಿ ತಪ್ಪದ ಎಡಿ ಮಾಡಿರಿ ನಮ್ಮ ಭರಮಪ್ಪನಿಗೆ

೨೪. ಮಳಿಗಳು ಹೋದಾವು, ಬೆಳೆಗಳು ಕೆಟ್ಟಾವು, ಹಲವು ಬುದ್ಧಿಗಳು ಶೇಣಸ್ಯಾವು ಹಲವು ತಪ್ಪಲ ತಿನಿಸ್ಯಾರು ಹಿಂಗ್ ಇದ್ರ ನನ್ನ ಗುಡಿಹ್ಯಾಂಗ್ ಕಟ್ಟತೀರೋ

೨೫. ಭರಾ ಬಿದ್ದೈತಿ ಜನರಿಗೆ ಇರಾಕ ಮನಿಯಿಲ್ಲಾ, ನಿಲ್ಲಾಕ ನೆರಳಿಲ್ಲಾ ಅಳಲಿಕ್ಕೆ ದನಿಯಿಲ್ಲ ಹೆಣಾ ಎಳಿಲಿಕ್ ದಿಕ್ಕಿಲ್ಲದಂಗ್ ಆದೀತು ನೋಡಿ ನಡೀರಲೇ ದಿನಮಾನ ಸುಮಾರು ಬಂದಾವು

೨೬. ಕೂರಿಗಂಟಲೀ ಹೊಲ ಹಿಡಿದುಕ್ಕಿಂತ, ತುಂಡ್ ಹೊಲಾ ಹಿಡಿದ ಬಾಳ ಮಾಡರಲೇ

೨೭. ನಂಜಿನ ಗಾಳಿ ಬೀಸೀತು ಕೆಂಡದ ಮಳೆಗರದೀತು ವಿಷದ ಬಳ್ಳಿ ಹರದೀತೋ ಹುಷ್ಯಾರಿಂದ ಹೋಗ್ರಿ.

೨೮. ಧರ್ಮಕ್ಕ ಬೆಲೆ ಇಲ್ಲ, ಕರ್ಮಕ್ಕ ಬೆಲೆ ಹೆಚ್ಚ ಆದರ ಧರ್ಮದ ಮಾರ್ಗ ಬಿಡಬ್ಯಾಡ್ರಿ

೨೯. ಸತ್ಯದ ದಿನಮಾನ ಒತ್ತೊತ್ತಿ ಬಂದಾವು ಚಿತ್ತ ಕೊಟ್ಟ ಕೇಳರಲೇ ಕರ್ತೃ ಗುರು ಅಮೋಘಸಿದ್ಧ ಬರುವಾಗ ಮೃತ್ಯುಲೋಕ, ಜೀವ ಜಂತು ಉಳಿತಾವು.

೩೦. ಇನ್ನ್ ನೋಡರಿ ಜಗದ ಹೈರಾಣ ಸುಳ್ಳಲ್ಲ, ಕಳ್ಳ ಜನರನು ಕೊರೆದು ಒಟ್ಟುತ ಸುಳ್ಳ ಜನರನು ಸುಲಿದು ನುಂಗುತ

೩೧. ನ್ಯಾಯದಿಂದ ನಡೀರಿ ಹಾಕ್ಯಾಡ ಬ್ಯಾಡ್ರಿ, ಎಲ್ಲ ಕಾಲಕ್ಕೂ ಎಲ್ಲರೊಂದಾಗುತ್ತ ಜಗದಾಗ ಬದಕರ್ರಿ

೩೨. ಗುರುಬೇಕು ಗುರುವಿನ ಹೇಳಕಿ ಕೇಳಬೇಕು, ಗುರು ಮರೆತು ಬರೀ ಗರ್ವಮಾಡಿ ಹಾಳಾಗಿ ಹೋಗಬ್ಯಾಡರಿ, ಗುರು ಬೀರಪ್ಪಗ ಮರಿಬ್ಯಾಡರೀ

೩೩. ಸತ್ಯವ ಬಿಟ್ಟು ಮಾತಾಡ ಬ್ಯಾಡರಿ ಹುಚ್ಚೆದ್ದು ಹೋಗತೀರಿ ಖರೇ ಮಾತಾಡ್ರಿ ಬೀರಪ್ಪ ಒಲಿತಾನ

೩೪. ಹಬ್ಬಿದ ಬೆಟ್ಟಕ್ಕ ತೊಟ್ಟೀಲ ಕಟ್ಯಾರೋ ಮೂಡಲ ಪಟ್ಟಣಕ ಅಂಬಲಿ ಸೂರೆಯಾದೀತು, ಎಚ್ಚರ ಮುಂದಿನ ದಿನಮಾನ ಕೆಟ್ಟೀತು

೩೫. ನರೀ, ಬೆಕ್ಕು, ಕುರಿ, ಕೋಳಿ ಹೂಯ್ಯ ಕುಟ್ಟಿವ್ ದೊರೆಗಳ ಮನೆಯಲ್ಲಿ ಹೊರಳಿದ್ದು ಹೋದಾವು ಎಚ್ಚರ, ಎಚ್ಚರ

೩೬. ತಪ್ಪದ ನಡಕೋರಿ ನಮ್ಮ ಬೀರಪ್ಪಗ ಇರದಿದ್ರ ಮಂಗ್ಯಾ ಆಗಬ್ಯಾಡ್ರಿ

೩೭. ನೀವು ನಡಕೊಂಡ್ರ ಬೀರಪ್ಪ ನಿಮಗ ಬೇಕಾದ್ದ ಕೊಡತಾನು ಹಿಂದಕ ಹತ್ತು ಮುಂದಕ ಹನ್ನೊಂದು ಇದರ ಅಂದಾವ ನಮ್ಮ ಆಳು ಮಕ್ಕಳು ಬಲ್ಲರು

೩೮. ನನ್ನ ನುಡಿ, ಬೀರಪ್ಪನ ನುಡಿ ಹೇಳುವ ದಿನ ಬಂತು ಯಾರಿಗೂ ಇದಿರಾಗಬ್ಯಾಡರಿ ದಾನ ಧರ್ಮ ಮಾಡರಲೇ

೩೯. ಕಾಳಗ ಹೆಚ್ಚಿ ಕಡದಾಡಿ ಸತ್ತರು, ಕೇಳ್ರಿ ಕಿವಿಗೊಟ್ಟು ಸತ್ಯಕ್ಕ ಸಾವಿಲ್ಲ

೪೦. ನಿತ್ಯ ನೇಮಗಳೆಲ್ಲ ಬಟಾ ಬಯಲಾಗಿ ಹ್ವಾದಾವ ಸತ್ಯ ಬಿಟ್ಟು ನಡದ್ರ ಹ್ವಾದಿ ನರಕ ವಟ್ಟ ತಪ್ಪಬ್ಯಾಡರಲೇ

೪೧. ಬಾಳ್ಯಾರ, ಬದುಕ್ಯಾರ, ನೀವು ಬದುಕಿ ಉಳಿದವರನ್ನು ಬದುಕಿಸಿ ಮನಿಗ್ ಬಂದವರಿಗೆ ಹಿಡಿ ನುಚ್ಚ ಅಂಬಲಿ ಕೊಡ್ರಿ ಹಂಗ್ ಕಳಸಬ್ಯಾಡ್ರಿ

೪೨. ಬಿತ್ತಿ ಬೆಳೆದ ಲೋಕದ ಭೂಮಿ ಹದ ಮಾಡಿರಿ, ಹೊಲ ಬೆಳೆದ ರಾಶಿ ಅಕ್ಕಾವ್ ಈ ವರ್ಷ ಬಡತಾನ ಇಲ್ಲ

೪೩. ಈ ವರ್ಷ ಮಳಿ ಬೆಳಿ ಸಂಪೂರ್ಣ ಆಗೇತಿ, ಅನ್ನದಾನ ಮಾಡ್ರಿ, ಕೂಸಾ ಕುನ್ನಿ ಇದ್ದವರಿಗೆ ಕರುಣಾ ಇರಲಿ

೪೪. ಹೆಂತಿ ಮಾತು ಗಂಡ ಕೇಳಬೇಕು, ಗಂಡನ ಮಾತು ಹೆಂತಿ ಕೇಳಬೇಕು, ಒಬ್ಬರಿಗೊಬ್ಬರ ಅರಿತು ಹೋಗಬೇಕ್ ಹಿರ್‍ಯಾರನ, ಗುರುನ ಮರಿಬ್ಯಾಡ್ರಿ

೪೫. ಭೂಮಿಮ್ಯಾಲ ನೀಚರು ಹೆಚ್ಚಾಗ್ಯಾರ ಈ ಕೈ ಕೊಟ್ಟು, ಆ ಕೈ ಕೇಳತಾರು ವಿಚಾರ ಮಾಡಿ ನಡಿರಿಲೇ

೪೬. ಕಡೆಗಾಲ ಬಂದೈತಿ ಕರ್ಮ ಮಾಡಬ್ಯಾಡರೀ, ಆಚಾರ ಬಿಟ್ಟು ನೀಚ ಬುದ್ದಿ ಮಾಡಬ್ಯಾಡರೀ ಋಣ ಭಾರಕ್ ಅಂಜಿ ಹೋಗರಲೇ

೪೭. ಕಾಗಿ ಬರ್‍ತದ, ಹದ್ದು ನುಂಗತದ ಆ ಹೊತ್ತಿನ್ಯಾಗ ಏನ್ ಅನ್ನಬ್ಯಾಡರಲೇ

೪೮. ನಂದಿ ಗುಡ್ಡದಾಗ ಮಂಕಸಿದ್ಧ ಹೇಳ್ಯಾನ, ಮೊಳಕಾಲ ಊರಿ ಹೇಳ್ಯಾನ ಗುಡಿ ಕಟ್ಟಿ ಜಾತ್ರೆ ಮಾಡಂತ

೪೯. ಕಪ್ಪಿಹಂಗ ವಟ ವಟ ಮಾಡಬ್ಯಾಡರಲೇ ಹಿಟ್ಟ ಮಾರಿ ತಿನ್ನಬ್ಯಾಡರಿ ರಟ್ಟಿ ಮನಿಸಿ ದುಡಿರಿ, ಜ್ವಾಳ ಬೆಳದ ತಿನ್ನರಿ ಯಾರದು ಅಂಜಿಕಿ ಇಲ್ಲ ದುಡದ ತಿಂದ್ರ ಯಾರಪ್ಪನ ಅಂಜಿಕಿ ಇಲ್ಲ ಶಾಪ ಬರುದಿಲ್ಲ ಸರ್ಪದ ಹುನ್ನ ಮೈಮ್ಯಾಲ ಆಗುದಿಲ್ಲ

೫೦. ಬಿತ್ತಿದ ಬೆಳೆ ಕತ್ತಿಗೊಳ ಮೈಬಾರದ ನಿಮ್ಮ ಕುರಿ ಮೇಯಲಿ, ನಿಮ್ಮ ದನ ಕರಾ ಮೆಯಲಿ ಭಂಡಾರ ಒಗಿಯಿರಿ

೫೧. ಉತ್ತರ ದಿಕ್ಕಿನ್ಯಾಗ್ ಕೆಂಡದ ಮಳಿ ಬರತ್ತೈತಿ, ದಕ್ಷಿಣ ದಿಕ್ಕಿನ್ಯಾಗ್ ಬಿರುಗಾಳಿ ಬೀಸತ್ತೈತಿ ಭಂಡಾಗಿ ಹೋಗಬ್ಯಾಡರಿ

೫೨. ಇದು ಸಿದ್ಧರ ಭೂಮಿ ಮಾಯಕಾರ ಸಿದ್ಧನ ಆಟ ಯಾರಿಗೂ, ತಿಳಿದಿಲ್ಲ ಅದೃಶ್ಯವೆಲ್ಲ ಬಯಲಾಗತ್ತೈತಿ

೫೩. ಮಾಯಕ್ಕನ ಆಟ ಮಾಯಕ್ಕಗ ಗೊತ್ತು ಚಿಂಚಲಿಯಿಂದ, ಮಾಯಕ ಬರುವಾಗ ಆ ದಿಕ್ಕಿನ್ಯಾಗ್ ಕಲ್ಲಿನ ಕೋಳಿ ಕೂಗತ್ತೈತಿ

೫೪. ಎಂತಹ ಕಾಲ ಬಂದೈತಿ ಇಲಿ, ಬೆಕ್ಕ ಹಿಡಿತೈತಿ, ಮೊಲ ನಾಯಿ ಹಿಡಿತೈತಿ ಲೋಕ ಬಟಾಬಯಲಾಗತೈತಿ ಸಿದ್ಧ ಬೀರನ ಮಾತು ಇದೆ.

೫೫. ನಾಳಿ ಉತ್ತರಿ ಮಳಿ ಬರತೈತಿ ಗಿಂಡಿ ಗಾತ್ರ ಬಾರಿಮಳಿ ಆಗತೈತಿ, ಮುತ್ತಿನ ತೆನಿ ಮನಿಗಿ ಬರ್‍ತಾವು

೫೬. ಸೊಸಿಗೆ ಮಾವ ಗುರ್ತು ಹತ್ತಂಗಿಲ್ಲ, ಮಾವಗ ಸೊಸಿ ಗುರ್ತು ಹತ್ತಂಗಿಲ್ಲ, ಅಪ್ಪಗ ಮಗ ಗುರ್ತು ಹತ್ತಂಗಿಲ್ಲ ಮಗಗ ಅಪ್ಪ ಗುರ್ತು ಹತ್ತಂಗಿಲ್ಲ ಕಲಿಕಾಲ ಕೆಟ್ಟತಲೇ ನೋಡಿ ನಡಿರಿ

೫೭. ಬರು ದಿನಮಾನ ಬಾಳ ಸುಮಾರ ಅದಾವು, ಶರೀರ ಸಾನದ ಬುದ್ದಿ ದೊಡ್ಡದಾಗಿ ಜಗತ್ತ ಕೆಟ್ಟ ಹೋಗು ಕಾಲ ಸಮೀಪ ಐತರಲೇ

೫೮. ಭಂಡಾರದಿಂದ ಬ್ರಹ್ಮಾಂಡ್ ಉಳಿಯುವ ಕಾಲ ದೂರವಿಲ್ಲ

೫೯. ಚೆಂದಂಗಿ ಕೇಳಿಲೇ ಸದರ್ ಮ್ಯಾಲ ಕುಂತ ಹೇಳತನ್ ಕಂಬಳಿ ಗದ್ದಿಗಿ ಮ್ಯಾಗ ಕರಿ ಮಲ್ಲಿಗೆ ಏರ್‍ಯಾವ ನಿಂಗ ಬೀರಣ್ಣ ಅಲ್ಲಿ ಸದರ ಏರತಾನ ಮನಿ ಬೆಳಗತತಿ ಭೂಮಿಮ್ಯಾಗ ಬೆಳಿ ಬೆಳಗತತಿರ್ಕಿ

೬೦ ಬಿಜಾಪುರ ಅಗಸಿಮ್ಯಾಲ ನಿಂತ ಕಂಬಳಿ ಬೀಸಿ ಹೇಳ್ತಿನಿ ನಾ ಮಾತಾಡೂದು ಖರೆ ಆಕ್ಕೆತಿ ಕುಂಬಿ ಮ್ಯಾಲ ನವಿಲ ಕುಣಿತೈತಿ ಆಗುದು ಆಗತತಿ ನೋಡಿ ತಿಳಿದು ಕೊಳ್ಳಿರಿಳಳ

೬೧. ಐದ ಅಮಾಸಿ ನನ್ನ ಗುಡಿಗಿ ತಪ್ಪದ ಬರಬೇಕು ಪೌಳ್ಯಾಗ ಇರಬೇಕು, ಮೂಖಿಲಿ ಬರಬೇಕು ಮೂರು ಹಾದಿ ಕೂಡುವಲ್ಲಿ ಅದಕ್ಕೆ ಬೇಕಾದ ಕೂಳ ಹಾಕಿ ಹೊಳ್ಳಿ ನೋಡದ ಮೂಖಿಲೆ ನನ್ನ ಗುಡಿಗೆ ಬರಬೇಕು, ಬಂದ ದೆವ್ವ ಬಂದ ಹಾದಿಲ ಹೋಗತತಿ ಏನ ಅಂಜಬ್ಯಾಡರಿ ಹಿಡಿ ಭಂಡಾರ

೬೨. ಗುರುವಿಗೆ ನಡಕೋರಲೇ ಪುಣ್ಯ ಬರ್ತತೆ ಗುರು ಕೊಟ್ಟದ್ದ ಗುರುವಿಗೆ ಸಲ್ಲಬೇಕು ಗುರುವಿನ ಪಾದಕ್ಕ ಮುಟ್ಟಲಿ ಅಂದ್ರ ಹಾಲು–ಹೊನ್ನಾಗಿ, ಬೆಳ್ಳಿ–ಬಟ್ಟಲಾಗಿ ತೂಗು–ತೊಟ್ಟಿಲ ಅಕ್ಕತಿ ಮಕ್ಕಳ ಹೆಚ್ಚಾಗಿ ಹೊಲದಾಗ ಫಸಲ ಬರ್ತತಿ ನಾಳೆ ಗುಡಿಗಿ ಬಂದ ಹೋಗರೆಪಾ

೬೩. ದಿಲ್ಲಿ ಜಗದಾಗ ಕಮಲದ ಹೂ ಅರಳತದ

೬೪. ನಾಳೆ ಅಮಾಸಿ ದಿನ ಬರ್ರಿ, ನಾ ನುಡಿ ಮಾಡ್ತೀನಿ ಅದೇನ ಕೇಳ್ತಿರಿ ಕೇಳ್ರಿ ಕೌಲ ಕಟ್ರಿ ಮನಸಿನ್ಯಾಗ ಇದ್ದದ್ದ ಆಗತ್ಯೆತಿ ಭಂಡಾರ ತಗೊಂಡ ಮನಿಗೆ ಹೋಗ್ರಿ ಬಂದ ದುಃಖ ಬಂದ ಹಾದ್ಯಾಗ ಹೊಕ್ಕಾವ

೬೫. ನಾ ಎಲ್ಲಿ ಬೀಳ್ಳಿ : ಅಲ್ಲಿ ಬೀಳ್ಯಾ : ಇಲ್ಲಿ ಬೀಳ್ಯಾ ಅರ್ಥವಾಗದ ಜನ : ಅಜ್ಜ ಕೈ ಮುಗಿತೀವಿ ನೀ ಬೀಳೂದ ಬ್ಯಾಡ್ ಸುಮ್ನ ಕುಂಡ್ರಿ ಅಂದರಂತ ಆಗ ಆವೇಶಭರಿತನಾದ ಸಿದ್ರಾಯಜ್ಜ : ಥೂ ನಿಮ್ಮನೆ ಹಾಳಾಗ ಬೀಳಿತೀನಿ ಅಂದ್ರ ಬ್ಯಾಡ ಅಂದ್ರಿ ಕಳಕಂಡ್ರಲೇ ನೀವೆಲ್ಲ ಕಳಕಂಡ್ರಿ ಅಂದ್ರಂತ ಎಲ್ಲರೂ ದಿಗ್ಭ್ರಾಂತರಾದರು. ದಿಗ್ಭ್ರಾಂತರಾದ ಜನ

ಸಿದ್ರಾಯಜ್ಜ ನಮಗ ನೀ ಹೇಳಿದ್ದು ತಿಳಿದಿಲ್ಲ ಬಿಡಿಸಿ ಹೇಳು ಅಂದಾಗ ನಾನು ಮಳಿಯಾಗಿ ಬಂದಿದ್ದೆ ನೀವ ಬ್ಯಾಡ ಅಂದ್ರಿ ನಾ ಹೊರಟು ಹೋದೆ, ಅಂದಾಗ ಎಲ್ಲ ಜನ ವಿಪರೀತ ಗೊಂದಲಕ್ಕೀಡಾಗಿ ತಪ್ಪಾಗೈತಿ, ಎಂದಾಗ ಛಾನ್ಸ್ ಹೋಯಿತ್ರಲೇ ಮತ್ತ ಮುಂದ್ ನೋಡೋಣ ಅಂದ್ರಂತ

೬೬. ಆಳ ಮಕ್ಕಳ ಅಂದ್ರ ಹೂವಿನ ವಾಸನೆ ಹಂಗ ಇರಬೇಕು ದುಂಬಿ ಹೂ ಹೊಕ್ಕಾಂಗ ನೀವು ದೇವರ ಜೊತೆಗೆ ಇರಬೇಕು

೬೭. ಸಂಜಿ ಹೂವಿನಂಗ ಮಾರಿ ಮಾಡಬಾರದ ಸೆಟಿಬ್ಯಾನಿ ಬಂದವರಾಗ ಮಾಡಬ್ಯಾಡರಿ ದುಡದ್ ತನ್ನಿರಿಲೇ ಹೂ ಅರಳಿದಂತೆ ಅರಳಬೇಕು ಬಾಳೆ

೬೮. ಚಿತ್ತ ಹತ್ತಿ ಹಣ್ಣ ಆಗಬಾರದು ಅದರಿಂದ ಏನೂ ಹುರುಳಿಲ್ಲ ವಿಚಾರ ಮಾಡಿ ನಡೀರಿ

೬೯. ಎಳ್ಳಿನ ಒಳಗ ಎಣ್ಣಿ ಇದ್ದಂಗ ಹಣ್ಣಿನೊಳಗ ರುಚಿ ಇದ್ದಂಗ ಇರಬೇಕು ಓಣ್ಯಾಗ ಬಾಳೆ ಮಾಡಿರಿವ ನಮ್ಮ ಧ್ವನಿ ಇನ್ನೊಬ್ಬರ ಕೆಳಬಾರ ಹಂಗ ಇರಬೇಕು.

೭೦. ನಿಜವಾದ ಗುರು ನಿಜವಾದ ಭಕ್ತ ಫಲಹೊತ್ತ ಗೋಧಿ ಬೆಳಿ ಹಂಗ ಇರಬೇಕು

೭೧. ಮಾಡುದೆಲ್ಲ ಮಾಡಿ ಕಡಿಕ್ ನನ್ನ ಗುಡುಗಿ ಬಂದ್ರ ಹೆಂಗಲೇ ಮುದಕಾದಿ ಇನ್ನಾದರ್ ತಿಳಿದ ನಡಿ

೭೨. ಮನುಷ್ಯನ ಹತ್ತಿರ ಅರುವು, ಜ್ಞಾನ ಇರಬೇಕು ಅಂದರ ಪ್ರಾಣ ಇದ್ದಂಗ ಇರದಿದ್ದರ್ ಏನ್ ಫಲ ಹಿಡಿಭಂಡಾರ

೭೩. ಭಕ್ತಿಯಿಂದ ಗುರುಭಕ್ತಿಗೆ ಬೇಕಾಗಿ ಅವನೇ ನಿಜವಾದ ಶಿಷ್ಯ ಅವನೇ ನಿಜವಾದ ಆಳಮಗ

೭೪. ಚೆಂದವಾಗಿ ಬಾಳೆ ಮಾಡರಿ ಹುರಿದ ಬಿತ್ತಿದ ಬೀಜದ ಆಗಬಾರದ ಬಾಳೇ ವಿಚಾರಮಾಡಿ ಹೋಗಿರಿ

೭೫. ಭೂಮ್ಯಾಗ ಬೀಜ ಬಿತ್ತಿದರ ಮೊಳೆತ್ ಮೊಳೆತ್ ಮತ್ ಬೀಜ ಆಕೈತಿ ಅರಿವು ಹಂಗ್ ಅನುಭವದಿಂದ ಅರಿವು ಬರ್ತದೆ ಹಿಡಿಭಂಡಾರ

೭೬. ಗಿಡಕ್ಕ ಫಲ ಒಜ್ಜೆ ಅಲ್ಲ ಬಳ್ಳಿಗೆ ಕಾಯಿ ಒಜ್ಜೆ ಅಲ ಎಲ್ಲರಿಗೂ ಸದ್ಗುರುವಿನ ಕರುಣ ಬೇಕರಿಲೇ ಆಗ ಆಗುವ ದಗದ ಆಗತತಿ

೭೭. ಒಲವಿಲ್ಲದ ಭಕ್ತಿ, ಚಲವಿಲ್ಲದ ನಿಷ್ಠೆ ಉಪಯೋಗವಿಲ್ಲ ಮನುಷ್ಯನ ಹತ್ತಿರ ಭಕ್ತಿ-ನಿಷ್ಠೆ ಎರಡೂ ಬೇಕ್

೭೮. ತೆಂಗಿಗೆ ನೀರ್ ಹಾಕಿದರೆ ಅಂಗೈಯಾಗ ಫಲಕಾಣುತ್ತಿರಿ ಐದು ಅಮಾಸಿ ತಪ್ಪದ ಗುಡಿಗಿ ಬಾರವ್ವ ಆಗ ನೋಡ ಫಲಾ

೭೯. ಕುರಬ್ಯಾಟ ಬೀರಪ್ಪನ ಮಾತು ಮಾತಾಡಾಕ ಕಹಿಯಾದರೂ ಮನಸಿಗೆ ಸಿಹಿ ಬೇವು ಬೆಲ್ಲ ಇದ್ದಂಗೋ ತಿಳದ ನಡಿರಿ.

೮೦. ಈಗ ಮಾಡಿದ ಕರ್ಮ ಈಗ ಅನುಭವಿರಬೇಕು ಕರ್ಮ ಆಗದ ಹಾಗೆ ಇರಬೇಕು ಗಾಡಿ ಹ್ವಾದ ಮ್ಯಾಲ ಟಿಕೇಟ್ ತಗಿದರ ಏನ್ ಫಲ ವಿಚಾರ ಮಾಡಿರಿ

೮೧. ಬಾರಲೇ ಬಾ ಉಡೆಒಡ್ಡ ನಿನ್ನ ಬಾಳೆ ಕರಕಿ ಕುಡಿಹಂಗ ಹಬ್ಬತೈತಿ ಹಿಡಿಭಂಡಾರ

೮೨. ತಿಳಿದ ನಡಿರಿ ಅವಸರಬ್ಯಾಡ ಸ್ವಲ್ಪ ಸುಖಕ್ ದೊಡ್ಡ ಕುತ್ ಬರತತಿ ಹುಷಾರ್‌ದಿಂದ ಹೋಗಿರಿ

೮೩. ಮಗನ ಹತ್ತ ಹಡದರ್ ನೋಡಾವ ಒಬ್ಬನ ಬಹಳ ಮಕ್ಕಳ ತಗೊಂಡ್ ಏನ್ ಮಾಡವ್ ಒಬ್ಬನ ತಿಳಿವಳಿಕೆಯಿಂದಲೆ ಬೆಳಸ್ ಚಲೋ ಆಗತತಿ ಹಿಡಿ ಭಂಡಾರ

೮೪. ಹತ್ತ ಮಕ್ಕಳಾ ಹಡದರ್ ಎಲ್ಲರೂ ದುಡಿಯುದಿಲ್ಲ ಹುಣಿಸ್ ಹೂವೆಲ್ಲ ಕಾಯ ಆಗುವುದಿಲ್ಲ ತಿಳಿದ ನಡಿ

೮೫. ಕೇಳಲೇ ಓಣ್ಯಾಗ್ ಮಂದಿ ಬೈತಾರಂತ್ ಚಿಂತಿ ಮಾಡಬ್ಯಾಡಲೇ ಆನಿ ಹೋಗುಮುಂದ್ ನಾಯಿ ಬೋಗಳಿದರೆ ಏನ್‌ಫಲ ಚಲೋ ಆಗತತಿ ಹೋಗ್ ಹಿಂದ್ ಇಟ್ಟಪ್ಪ ಅದಾನ್

೮೬. ಕಬ್ಬ ಕಡದ ಬೆಲ್ಲ ಆಗೇತಿ ಉಪ್ಪ ಸಮುದ್ರ ಸೇರಿದೆ ಆಗುದ ಆಕೈತಿ ಚಿಂತಿ ಮಾಡಬ್ಯಾಡ ಕೌಲಕಟ್ಟು ಒಳ್ಳೆಕಾಲ ಬರತತಿ ಹಿಡಿಭಂಡಾರ

೮೭. ಹೆಣ್ ಮಕ್ಕಳ ಎಲ್ಲಿ ಇರಬೇಕು ಅಲ್ಲಿಯೇ ಇರಬೇಕು ಹಿಂಡ ಅಗಲಿದ ಕಣ ಹಿಂಡ ಸೇರಬೆಕು. ನಿನ್ನ ಮಗಳನ್ ಗಂಡನ್ ಮನಿ ಕಳಿಸ್ ಬೀರಪ್ಪ ಹೇಳ್ಯಾನ್

೮೮. ಲೇ ಕೇಳಲೇ ಎಲು ತಿಂದ ನಾಯಿಹಂಗ್ ಓಡಿ ಓಡಿ ಹೋಗಬ್ಯಾಡ್ ತಿಳಿದ ವಿಚಾರಮಾಡಿ ಕಲ್ಕಿಮಾತ್ ಒಳ್ಳೆದಲ್ಲ

೮೯. ಕೊಟ್ಟ ಹೆಣ್ ಕುಲಕ್ ಹೊರಗ್ ಗಾದಿ ಸುಳ್ಳಲ್ ಅಳ್ಯಾ ಬಂದರ್ ವಾಗಾತಿಲೇ ಹೋಗಿರಿ ಕಲಿಯುಗದ ಕಾಲಮಾನ ಸರಿಯಿಲ್ಲ ಸಜ್ಜನರು ಒಮ್ಮೆ ಬಿಟ್ಟ ಹತ್ ಸಾರಿ ವಿಚಾರ ಮಾಡಬೇಕು

೯೦. ಕೇಳಲೇ ಮೊಲಕಂಡ ನಾಯಿಯಂತೆ ಅಂಜಬ್ಯಾಡ್ ಆಗಬಾರದು ಆಗಿಲ್ಲ ಹೊಂದಿಕೊಂಡು ಹೋಗ್ ಹಿಡಿ ಭಂಡಾರ

೯೧. ಮುಂದಿನ ಅಮಾಸಿಗೆ ನಿಮ್ಮೂರ ಕರೆವ್ವ ಜಾತ್ರಿಗೆ ಬರ್ತೆನಿ ನನ್ನ ಆಳು ಮಕ್ಕಳಿಗೆ ಅಂಬಲಿ ಕಿಚಡಿ ಮಾಡಿರಿಲೇ ಆಳಮಕ್ಕಳು ಉಂಡನುಡಿ ಭಾಗ್ಯದ ಬಾಗಿಲು ಆಕೈತಿ

೯೨. ಮನಸ್ಸು ಚಂಚಲ ಇರಬಾರದು ಮರಹತ್ತಿದ ಮಂಗ್ಯಾ ನಂಗ ಮಾತಾಡಬಾರದು ಒಂದ್ ನೆಲೆಕಾಣುದಿಲ್ಲ ತಿಳಿದ್ ನಡಿಯಿರಿ

೯೩. ಒಂದು ಹುತ್ತಕ್ಕೆ ಒಂಭತ್ತು ಬಾಗಿಲು ಒಂದು ವರ್ಷ ಒಂಭತ್ತು ಕಡೆ ನೋಡೇತಿ ಹುಷಾರ್ ಆಗಿ ಜಲ್ಮಗಳಿರಿ

೯೪. ನೀರ ತಪ್ಪಿದ ಮೀನ್ ಬಲಿ ತಪ್ಪಿದ ಸರ್ಪದ ಹಂಗ್ ಬಾಳೆ ಆಗಬಾರದು ನೆಲೆ ಕಳೆದುಕೊಳ್ಳಬಾರದು

೯೫. ಸಂಸಾರ ಅದ್ರೆ ಸರ್ಪ ಇದ್ದಂಗ ಸರ್ಪದ ಬಾಯಾಗ ರೊಕ್ಕ ತಗೊಡಂಗ್ ಬಾಳ ತ್ರಾಸ್ ಐತಿ ಹುಷಾರ್ ಹೋಗಿರಿ

೯೬. ಮಾತನಾಡಿದರ್ ಶಕುನದ ಗಿಳಿಹಂಗ್ ಮಾತಾಡಬೇಕು ಹಾಗಭಾಗ ಇಲ್ಲದ್ ಮಾತನಾಡಬೇಡಿರಿ

೯೭. ಗುಡ್ಡದಾಗ ಕಳಗೊಂಡ ಆಕಳ ಕರದಂಗ ಕಕ್ಕಾಮಿಕ್ಕಿ ಆಗಬ್ಯಾಡರಿ ನಿಮ್ಮ ಹಿಂದ್ ಕಡಬಿ ಇಟ್ಟಪ್ಪ ಅದಾನ ಅರಹೊತ್ತಿನ್ಯಾಗ ಕರಿರಿ ಬರ್ತಾನ್ ನಿಮ್ಮ ಹಿಂದ್ ನಿಲ್ಲತಾನ

೯೮. ಎಳಗರು ತಾಯಿ ಹುಡಕಿದಂಗ್ ಗುರುವಿನ ಬೆನ್ನ ಹತ್ತಬೇಕು ಭಕ್ತಿಲಿ ಬೆನ್ನ ಹತ್ತಬೇಕು

೯೯. ಗಾಣದ ಎತ್ತಿನಂತೆ ಗೊತ್ತು ಹೊತ್ತು ತಿರಿಗಿದರ ಫಲಯಿಲ್ಲ ಬದುಕಿಗೆ ಒಂದು ಗುರಿ ಇಟ್ಟುಕೊಳ್ಳಲೇ ಹಿಡಿ ಭಂಡಾರ

೧೦೦. ತಿಳಿದ ನಡಿರಿಲೇ ಗುಬ್ಬಿಮ್ಯಾಲ್ ಬ್ರಹ್ಮಾಸ್ತ್ರ ಬಿಡಬ್ಯಾಡರಿ ಬಡವರನ್ ಬಗ್ಗಿಸ ಬ್ಯಾಡರಿ ಆ ಕರ್ಮ ಕಟ್ಟಿಕೊಳ್ಳಬೇಡರಿ

೧೦೧. ಬೀರಲಿಂಗನ ಮ್ಯಾಲ ನಿಷ್ಠೆ ಇರಲಿ ನಾಳೆ ಅಮಾಸಿ ಬಂದ್ ಹೋಗಿರಿ ಫಲಕೊಡತಾನ್ ಕೌಲ ಬಲಕ್ಕೆ ಬೀಳತ್ತೈತಿ

೧೦೨. ಹೊಲ ಬೆಳೆದಿದ್ದರ್ ಕುರಿಮಲಗಿಸಿರಿ ಕುರಿಹಿಕ್ಕಿ ಹೊಲತುಂಬ ಸೂಸಲ ಆಡಬೇಕು ನೋಡಫಲ ಹಿಡಿ ಭಂಡಾರ

೧೦೩. ಮನಸಿನ್ಯಾಗ ಕೆಟ್ಟಭಾವನೆ ಇಟ್ಟು ಗುಡಿಗಿ ಬರಬ್ಯಾಡರಿ ಒಳಗೆ-ಹೊರಗೆ ಶುದ್ಧ ಇರಬೇಕು ಆಗ ಮಸಿನ್ಯಾಗ್ ಆದಂಗ ಆಗತತಿ

೧೦೪. ಅಣ್ಣ-ತಮ್ಮ ಜಗಳಾಡ ಬ್ಯಾಡರಿ ಕಾಗಿಹಂಗ ಒಂದ್ ಅಗುಳ ಕಂಡರ್ ಹಂಚಿಕೊಂಡ ತಿನ್ನಿರಿ ಚಲೋ ಆಗತತಿ ಹಿಡಿ ಭಂಡಾರ

೧೦೫. ಕಂಬಳಿ ಮ್ಯಾಲ ಕುಂತ ಹೇಳ್ತನ ಬೀರನಮಾತ ಚಿನ್ನ ಪುಟಕ್ಕೆ ಹಾಕಿದಂತೆ ಕಣ್ಣು ಕಾಣದೆ ಕಾಡ ಬೀಳಬೇಡಿರಿ ಆಗಬಾರದು ಆಗಿಲ್ಲ, ಹೋಗಿರಿ ಕುಪ್ಪಿ ಸಿದ್ದನ ಮಾತು ಗರಸಿನಲ್ಲಿ ಗೂಟಾ ಬಡಿದಂಗ

೧೦೬. ಬರಗಾಲದಾಗ ಅಡಮಳಿ ಬಂದರ್ ಹೆಂಟಿ ಕರಗಿ ಹೊಕ್ಕಾವ ನಡುಹಗಲು ಮಿಂಚಿದಂಗ್ ಮಳಿ ಬರತತಿ

೧೦೭. ಭೂಮಿಮ್ಯಾಗ ತುಂತುರ ಹನಿ ಬಿದ್ದಾವ ಹೊಲ ಹದ ಆಗತತಿ ಈವರ್ಷನು ಸುಖಕಾಲ ತಗ್ಗಿ ಬಗ್ಗಿ ನಡಿಯುದ ಮರಿಬ್ಯಾಡರಿ

೧೦೮. ಕೊಡು ಕೈ ಆಗಬೇಕು ಕಡಿಗಾಣ ರಾಶಿ ಆಯಗಾರರಿಗೆ ಕೊಡರಿಲೇ

೧೦೯. ರಾಶಿಸುಗ್ಗಿ ಬೆಚ್ಚ ಗಡಿಗ್ಯಾಗ ಹುಳಿನುಚ್ಚ ತಗೊಂಡ ಗುಡಿಗಿ ಬರೀಲೆ ಹೊಲ ಹುಲುಸು ಆಗತತಿ

೧೧೦. ಕುರಿ ಇಳಿದ್ ಎಂಟದಿನ ಆಯಿತು ಹಟ್ಟಿತುಂಬ ಹಿಕ್ಕಿ ಹಾಕೇತಿ ನನ್ನ ಗುಡಿಗ ಕುರಿಹಾಲ ಬೇಕ್ ಕುರಿಹಂಗ್ ನಿಮ್ಮ ಬಳಿಹಬ್ಬತೈತಿ

೧೧೧. ಸತ್ಯುಳ್ಳ ಭರಮನ ಮಾತು ಹುಸಿಹೋಗಿಲ್ಲ ಬಿತ್ತುವಕಾಲಕ್ ಭರಮ ಬರತಾನ ನಿಮ್ಮ ಎತ್ತುಗಳಿಗೆ ಗಲೀಪ ಹಾಕತೇನ್ ಹಿಡಿಭಂಡಾರ

೧೧೨. ಹಿಂದ್ ಆಗಬಾರದು ಆಗೇತಿ ಮುಂದ್ ಆಗಬಾರದು ಆಕೈತಿ ಬಡಬಗ್ಗರ ಬಂದರ್ ದಾನ-ಧರ್ಮ ಮಾಡಿರೀಲೆ ಕೊಡುಕೈ ಆಗಬೇಕು ನಾಲ್ಕು ಮಂದಿ ನೆನೆಸುತಾರ ನೆನಸು ಹಂಗ ಬಾಳೆ ಮಾಡಬೇಕು

೧೧೩. ದುಂಡಾದ ತೆನಿ ಪುಂಡ ತುಳಿದಂತೆ ತುಳಿಬೇಕು ಗುಡ್ಡದಂತಹ ರಾಶಿ ಕಣದಾಗ

೧೧೪. ಗಾಣದಮಿನಿ ಸುಗ್ಗಿಯಗಾಳಿ ಸುಳಿಗಾಳಿ ಬೀಸೆತಿ ರೈತ ನಿನ್ನ ರಾಶಿ ಹಸನಾಗತತಿ

೧೧೫. ತಂಗಿ ಬಹಳ ವಿಚಾರ ಮಾಡಬ್ಯಾಡ ಆಡಿನ ಮಲಿಹಂಗ ಇರಾವರ ಇಬ್ಬರು ಅಕ್ಕತಂಗಿಯರಿದ್ದೀರಿ ಹೊಂದಿಕೊಂಡ ಹೋಗ್ರಿ

೧೧೬. ದುಂಡ ಕಲ್ಲಿನ ಮ್ಯಾಲ ಬೀರಪ್ಪನ ಗುಡಿಗಿ ಮಗಿಕಟ್ಟಿರಿ, ಗೊಂಡೆನೇಯಿರಿ ಮನಸ್ಸಿನ್ಯಾಗ ಆಗುವುದು ಆಗುತ್ತದೆ.

೧೧೭. ಬೇವಿನ ತಪ್ಪಲದಾಗ ಎಕ್ಕಿ ಎಲೆಯಾಗ ಮುತ್ತಿನ ಉಡಿಯಕ್ಕಿ ಹಾಕ್ಕೊಂಡ ಬರ್ರಿ

೧೧೮. ಮೂರು ಅಮಾಸಿ ಬಂದ ಪೌಳಿ ಸಾರಿಸಿರಿ ನೀರಾಗ ಕಲ್ಲ ನೆಗಿವಿದಂಗ ಆಗಬೇಕು ಬಂದ ದುಃಖ ಬಯಲಾಗತಾವ

೧೧೯. ಬೇವಿನ ಗಿಡಕ್ ಕರಿಗೊಂಗಡಿ ಹಾಕಿ ಹೇಳತನ ಈ ವರ್ಷ ಹೊಲದಾಗ ಹೊನ್ನ ಬಿತ್ತತೀರಿ

೧೨೦. ಮಡಿಮಡಿ ಅನ್ನಬ್ಯಾಡರಿ ಭಾವ ಶುದ್ಧ ಇರಬೇಕು ಆದನುಡಿ ಪರಿಸ್ಥಿತಿಗೆ ಹೊಂದಕೊಂಡ ಹೋಗಬೇಕು ಎಲ್ಲದಕ್ಕೂ ರ‍್ವಾಳೆ ತೆಗೆಬಾರದು ಹಿಡಿಭಂಡಾರ

೧೨೧. ಕೇಳರಲೇ ಹೊಳಿದಂಡಿಮ್ಯಾಲ ಹೊಲ ಐತಿ, ಚಿತ್ತಕೊಟ್ಟ ದಗದಾಮಾಡಿರಿ ಕಳಕೊಂಡ ಮಂಗ್ಯಾ ಆಗಬೇಡಿರಿ

೧೨೨. ಗುಡ್ಡದ ವಾರ್‍ಯಾಗ, ಹೊಳಿದಂಡಿಮ್ಯಾಲ ಹೊಲದಾಗ ಬೆಳ್ಳಿ ಕೂರಗಿ ತುಂಬಿ ಬಿತ್ತರಿ

೧೨೩. ಸ್ವಾತಿ ಮಳಿ ರೈತರಿಗೆ ಭಾಷೆ ಕೊಟ್ಟತಿ ಈಸರೆ ಬಾಳ ಆಗುತ್ತದೆ ಬೀರನ ಮಾತ ಹುಸಿ ಹೋಗುದಿಲ್ಲ

೧೨೪. ಸುಮ್ಮ ಸುಮ್ಮನ್ ಇನ್ನೊಬ್ಬರನ್ನ ಮರಗಸಬ್ಯಾಡ್ರಿ ಕಣ್ಣೀರ ಸ್ವಾತಿ ಮಳಿಹಂಗ ಸುರಿದಾವ ಹುಷಾರ್ ಆಗಿ ಹೋಗಿರಿ

೧೨೫. ಲೇ ಕೇಳಿರಿಲೇ ಎಡವಿದ ಕಲ್ಲ ಉಡ್ಯಾಗ ಹಾಕೋಳ್ಳಿರಿ ಜೂಜ್ ಆಡಬ್ಯಾಡರಿ ಹೇಳಿಕೆಮಾತ ಕೇಳಬ್ಯಾಡರಿ ಹಿಡಿ ಭಂಡಾರ

೧೨೬. ಲೇ ಭೀಮಪ್ಪ ನಿನ್ನ ಬಾವಿಯಲ್ಲಿ ತೇಲಿ ಬಂದ ಬೆತ್ತ ಇಟಗೊಂಡು ಏನ್ ಮಾಡಾವ ಮಠಕ ಕೊಟ್ಟ ಬಾ, ನನ್ನ ಮರಿ ಮುಂದ್ ಗದ್ದಿಗಿ ಮಾಡುವಾಗ ಕೈಯಲ್ಲಿ ಬೆತ್ತ ಇರಬೇಕು. ಸಂಚಾರ ಹೊರಟಾಗಲೂ ಇರಬೇಕು ನೀನು ಬೆತ್ತ ಇಟಗೊಂಡಿ ಅಂದ್ರ ಕೇಡಾಕೈತಿ.

೧೨೭. ಸಂದ್ಯಾಗಿನ ವಿಚಾರ ಮಂದ್ಯಾಗ, ಬಂದ ಮಾನ ಮಾರಾಟ ಆಗು ಕಾಲ ದೂರ ಇಲ್ರೋ ಗಡಾದ ಹಾಲಸಿದ್ಧ.

೧೨೮. ಸಂಸಾರವೆಂಬುದು ಬಲು ಕಷ್ಟ ಇದು ಮೂರು ದಿನದ ಸಂತೆ ಸೂಳೆ ಮಕ್ಕಳಿರ್‍ಯಾ ನೋಡಿ ನಡಿರ್‍ರೆ ಒಮ್ಮೆ ಸಿಕ್ಕರೆ ಹೊಳ್ಳಿ ಬರುದಿಲ್ಲ ಕಳಕೊಂಡ ಹುಡಕ್ಯಾಡಬ್ಯಾಡ್ರಿ ಒಮ್ಮೆ ಹ್ವಾದದ್ದು ಮತ್ತ ಬರೊದಿಲ್ಲ ತಿಳಕೊಂಡ ನಡಿರ್‍ರಿಲೆ, ಮೂರು ದಿನ ಆಗೇತಿ ಮೂರು ದಿನ ಹೋಗ್ಯೈತಿ, ಮೂರು ದಿನ ಉಳಿದೈತಿ ಇದ್ದದ್ದ ಕಳಕೊಂಡ ಜ್ವಾಕಿಲಿ ಹೋಗಿ

೧೨೯. ಕದಲ ಬದಲ ಕಂಚಿ ಬದಲ ಮ್ಯಾಲಿಂದ ಮಾಯಣ್ಣ ಕಾಣತಿದ್ದ ಬೆಂಕಿ ಮಜಲ ಸುಟ್ಟ ಹೋಗಬ್ಯಾಡರಲೇ ಹಿಂದ ಸರಿದು ಮಾತನಾಡಿರಿ ದೀಪಾ ಆರಸರಿ

೧೩೦. ಬಂದ ದಾರ್‍ಯಾಗ ಬಂದವರ ಹೊಂದಿ ಹೋಗುದಿಲ್ಲ, ಹಂದಿಗೋಳ್‌ಕ್ಕಿಂತ ಮಂದಿ ಕಡೆ ಆಗು ಕಾಲ ದೂರ ಇಲ್ಲ.

೧೩೧. ಸಂಸಾರದ ಅಡವಿಯಲಿ ಹುಲಿಯಿದೆ, ಕರಡಿಯಿದೆ, ಕುರಿಯಿದೆ, ಆಡುಯಿದೆ ತಿಳಕೊಂಡ ಹೋಗ್ರಿ ಗಿಡದಾಗ ಕುಂತ ಬಡ್ಡಿ ಕಡ್ಯಾಕ ಹತ್ತೀರ್‍ಯೋ, ಮಡ್ಡ ಮಕ್ಕಳಿರ್‍ಯಾ ಕೊಡ್ಲಿ ಕೈಬಿಟ್ಟ ಹಣ್ಣ ಹರಕೋರ್‍ಯೋ.

೧೩೨. ರಾತ್ರಿ ಮಾಯಾಗಿ ಮಾತ್ರೆ ಬದುಕಾಗಿ ಮಧ್ಯಾಹ್ನದ ಕೋಳಿ ಕೂಗತೈತಿ; ಕಳಸದ ಗಿಂಡಿ ಡಬ್ಬ ಹಾಕಬಾಡರಲೇ ಕಡ್ಲಿ ಶಿಡರ್ ನೋಣ ಕುಂತಾನ್

೧೩೩. ಒಳಗಿಂದ ಹೊರಗ ಬಂದ ಮೆರೆದಾಡುವಾಗ, ಹೊರಗಿಂದಕ್ಕ ಹೋಗಿ ಬಡಿತೈತಂತಾನೋ ಹಾಲಸಿದ್ಧ ಹಟ್ಟಿ ಹಬ್ಬದಾಗಿ ತಪರಿ ಬಿಡರಲೇ

೧೩೪. ಒಳಗಿಂದ ಬ್ಯಾಡಾಗಿ ಹೊರಗಿಂದ ಜೋರಾಗಿ ಎಲ್ಲರೂ ಡೊಳ್ಳ ಹಾಕುವಂಗಕೈತಿ ಜಾತ್ರಿ ಮಾಡಿ ಪಲ್ಲಕ್ಕಿಗೆ ಹೂಕರಿ ಮನಿಮನಿ ತಿರಗತನ್

೧೩೫. ದೂರ ಇದ್ದವ್ರ ಹಂತೇಕಾಗಿ ಹಂತೇಕ ಇದ್ದವ್ರ ದೂರಾಗಿ ಹುಚ್ಚರಗತೇ ಮಾತಾಡಿ ಲೋಕ ಹುಚ್ಚೆದ್ದು ಹೋಕ್ಕೈತ್ರೋ.

೧೩೬. ಆಕಾಶಕ್ಕ ಸಿಡಿಲು ಬಡಿದಿತಲೇ ಪರಾಕ್– ೨೦೧೭ ಚಿಕ್ಕ ಮೈಲಾರ ಕಾಣಿಕೆ.

೧೩೭. ಗದ್ದಗಿ ಮುಗದೈತಿ, ಏನ ಇದ್ರೂ ಅವನ ಕಾಯ್ತಾನ ಅವನ ಭಂಡಾರ ಆಧಾರನ ನೀರಿನ್ಯಾಗ ಕಲಸಿ ಬಾಯಿಯೊಳಗ ಹಾಕ್ರಿ, ಅವನ ಪುಣ್ಯ ಇತ್ತು ಅಂದ್ರ ಕುಂದ್ರತಾಳ ಇಲ್ಲಾ ನಿಮ್ಮೂರಿಗೆ ಹೋಗಿರಂತ.

೧೩೮. ಮನ್ಯಾಗ ದೇವರ ಮರಗತೈತಿ ಗುಡ್ಡದ ದೇವರಿಗೆ ಕಾಯಿ ಒಡೆತತಿ, ಊರಾನ ದೇವರ ಮರತೀರಿ ಮೊದಲ ನಾಕ ಮಂದ್ಯಾಗ ಬೇಕಾಗರಲೆ ಸೆಟದ ನಡೆಬ್ಯಾಡ್ರಿ ಊರನ ಮರಿಬ್ಯಾಡ್ರಿ ಸಮಾಜ ಮರಿಬ್ಯಾಡ್ರಿ ಗೊರಗುದ್ದಿ ಇಟ್ಟಪ್ಪ ಹೇಳ್ಯಾನ.

೧೩೯. ಕಪ್ಪಿ ಮದುವೆ ಮಾಡಿ ಕತ್ತಿ ಕಾಲ ಹಿಡಿರಿ, ಮಳಿ ಬರ್ತದ, ಎಕರೆ ಹೊಲದಾಗ ಹನ್ನೆರಡು ಬೀಜ ಬಿತ್ತರಿ ಚಲೋ ಆಗತೈತಿ.

೧೪೦. ಈ ಸಲ ರೋಣಿ ಮಳಿ ಸುಳ್ಳು ಮಿರಗ್ ಬರ್ತತಿ, ಸ್ವಾತಿ ತಪ್ಪಸುದಿಲ್ಲ ನಂಬಿ ಬಿತ್ತರಲೇ ಕಣದಾಗ ರಾಶಿ ಬರ್ತತೆ.

೧೪೧. ಬಿತ್ತುವಾಗ ಮುಂಗ್ಯೆ ಹಿಡಿಬ್ಯಾಡ ಅಂಗ್ಯೆ ಹಿಡಿರಿ, ಮುತ್ತಿನಂತಹ ಜ್ವಾಳ ಮನ್ಯಾಗ.

೧೪೨. ಸ್ವಾತಿ ಮಳಿ ಬರ್ತತಿ ಅದು ಬರುದರೊಳಗ ಕೂರಿಗಿ ಕುಂಟಿ ಸಾಗ ಮಾಡಿರಿ, ಬಿಳಿ ಜೋಳ ಹಿಡಿಕೊಂಡ ಬಿತ್ತರಿ ಬಂಗಾರ ಖಡೆ ಬಂದಾಗ ಆಗತೆತಿ.

೧೪೩. ಮುತ್ತಿನಂತಹ ಪಲ್ಲಕ್ಕಿ ಏರಿ ಬೀರಪ್ಪ, ಹೇಳ್ಯಾನ ಗುಡ್ಡದಾಗ ನಿಂತ ಕಂಬಳಿ ಜಾಡಸ್ತಾನ ಗಿಂಡಿ ಗಾತ್ರದ ಮಳಿ ಸುರಸ್ತಾನ

೧೪೪. ಮಕ್ಕಳಿರ್‍ಯಾ ಕೂಸಾ-ಕುನ್ನಿ ಹುಟ್ಟಿದರ್ ಮಳಿ ಇಲ್ಲ ಹೇಳಿರೊ, ಹೇಳಿರೋ ಕೇಳಿರೊ,-ಕೇಳಿರೋ ಕರಿ ಕಂಬಳಿ ಬೀರಪ್ಪ ಮೂಡಲ ದಿಕ್ಕಿಗೆ ನಿಂತ ಕಂಬಳಿ ಬೀಸತಾನ ಸುತ್ತಲು ಮಳಿ ಸುರಿತೈತಿ ಚಿಂತಿ ಮಾಡಬ್ಯಾಡರಲೇ

೧೪೫. ಕೂಸಿನ ಕೈಯಾಗ ಕಂಬಳಿ ಕರಿ ಕಟ್ಟರಿ ಕೂಸಿಗೆ, ಬಂದ ಕಂಟಕ ಬಯಲಾಗತೈತಿ ಹಚ್ಚರಿಲೇ ಭಂಡಾರ.

೧೪೬. ಬೀರಪ್ಪನ ಜಾತ್ರ್ಯಾಗ ಆಳು ಮಕ್ಕಳು ಉಂಡಮನ್ಯಾಗ ಹಾಲು ಹೊಳಿ ಸುರಸ್ತಾನ ಹಾಲ ಹರವಿ ತುಂಬತೈತಿ.

೧೪೭. ಅಣ್ಣ ತಮ್ಮಂದಿರರು ಜಗಳಾಡಬ್ಯಾಡರಲೇ ಮಗ್ಗಲ ಮುಳ್ಳು ಆಗಬ್ಯಾಡರಿ, ಹೊಂದಿಕೊಂಡ ಹೋಗರಲೇ, ಹೊಡಿರಿ ಡೊಳ್ಳು.

೧೪೮. ಕಾಳು ಕಡಿ ಅಗ್ಗ ಆಗ್ಯಾವ ಅಂತ ಹಿಗ್ಗಬ್ಯಾಡರಲೇ, ಮುಗ್ಗರಿಸಿ ಬೀಳ್ತಿರೀ. ಹಿಗ್ಗುತಲಿ ದುಡಿರಿ ಡೊಳ್ಳು ಹೊಡಿರಲೇ.

೧೪೯. ಕಡಬಿ ಗುಡ್ಡದಾಗ ಮಿಂಚ ಕಾಣತೈತಿ ಇಟ್ಟಪ್ಪ ಕಂಬಳಿ ಬೀಸ್ಯಾನ, ಅವನ ಬಾಯಿಂದ ಹವಳ ಬಿತ್ತು. ಮುತ್ತು ಬಿತ್ತು. ಇಟ್ಟಪ್ಪನ ಮಾತಂದ್ರ ಬಂಡಿ ಕೀಲ ಜಡಿದಾಂಗ

೧೫೦. ಮಡ್ಡಿ ಹೊಲದಾಗ ತಮ್ಮ ಹುಳ್ಳಿ ಹಾಕ್ಯಾರೋ. ಹೇಳಿದಷ್ಟು ಕೇಳಿರೋ ಸಾಗಮಾಡಿರಿಲೇ

೧೫೧. ಅಡಗಿ ಮನ್ಯಾಗ ಕಾಗಿ ಕುಂತೈತಿ, ನಡು ಮನ್ಯಾಗ ಮೆನಸ್ ಅರಿಬ್ಯಾಡ್ರಿ ಹುಷ್ಯಾರಲೇ.

೧೫೨. ಕುಲ ಎತ್ತಿ ಮಾತಾಡಬ್ಯಾಡ್ರಿ ಕುಲ ಎತ್ತಿ ಕೊಡಬ್ಯಾಡ್ರಿ ಹಾಲ, ಅನ್ನ ಇಟ, ಮನಿ ಹಾಲ ಸಾಗವಾಗತತಿ ಬೆಣ್ಣಿ ಬಟ್ಟಲವಾಗತತಿ ಮನಿಗೆ ಗಂಡ ಮಕ್ಕಳ ಹೆಣ್ಣು ಮಕ್ಕಳ ತುಂಬತತಿ ದಂಡಿಗೆ ಹೋದ್ರೂ ಧರ್ಮ ಮರಿಬ್ಯಾಡ್ರಿ ಬಣ್ಣದ ಬಾಗಲ ಎರಡಾಗಬಾರದು ತಿಳಕೊಂಡ ನಡಿರಲೇ

೧೫೩. ನೀರಾಗ ಬತ್ತಿ ಉರಿತೈತಿ ಒಂದು ಹೋಗಿ ಒಂಬತ್ ಆಗಬಾರದು, ಇದು ಇಟ್ಟಪ್ಪನ ಹೇಳಿಕಿ. ಖರೇ ಖರೇ ಲೇ.

೧೫೪. ಎಲೇ ಹತ್ತಿ ಹೊಲದಾಗ ಒತ್ತಿ ತುಂಬಿರಿ, ಕಾಗಿ ಕೂಡ್ರುದರೊಳಗ ಮನಿಗೆ ಬರ್ರಿ, ಸರಹೊತ್ತಿನ್ಯಾಗ ಹೋಗಬ್ಯಾಡ್ರಿ

೧೫೫. ಹಸ್ದ ಬಂದವರಿಗೆ ಅನ್ನ ಹಾಕ್ರಿ ಸುಣ್ಣಾ ಹಾಕಬ್ಯಾಡ್ರಿ ಹಿಂದಾಗಡೆ ಒದ್ದಾಡಿ ಸತ್ತಿರಿ ಹೊತ್ತಿನ್ಯಾಗ ಆದವರನ್ನು ನೆನಿಸಿರಿ

೧೫೬. ಹೊಳಿಗೆ ಹೋಗಿ ಪೂಜಾ ಮಾಡುದರೊಳಗ ತಪಸಿ ಬಿಟ್ಟಿರಲೇ ಭೂತ ಪಿಶಾಚಿ ಹೊಕ್ಕಾಗ ಜುಟ್ಟ ಕೈಯಾಗ ಹಿಡಿದ ಹೊಳ್ಯಾಗ ಒಗಿತಾನ.

೧೫೭. ಮೂಲಿ ಮನಿಬ್ಯಾಡ, ಮೂರ ಮೂಲಿ ಬ್ಯಾಡ, ಐದ ಗ್ವಾಡಿ ಇದ್ದ ಮನಿಬ್ಯಾಡ ದೋಕಾ ಆಗತೈತಿಲೇ ಡೊಳ್ಳು ಹೊಡಿರಲೇ.

೧೫೮. ಅಪ್ಪಗ ಅಪ್ಪ ಅನ್ನರಲೇ ಕಾಲಮಾನ ಕೆಟ್ಟೈತಿ, ಶ್ರೀಮಂತಿಕೆ ಬಂದೈತಿ ಅಂತ ಕಣ್ಣ ನೆತ್ತಿಮ್ಯಾಲ ಬರಬಾರದು ಹಾದಿ ಬಿಡಬ್ಯಾಡರಿ ಬದುಕಿನ್ಯಾಗ ಸುಖಾ ಇಲ್ಲಾ.

೧೫೯. ಮುಂದಿನ ಜಾತ್ರಿಯೊಳಗ ಈ ಉರಾಗ ಎರಡ ಬೆಳ್ಳಕ್ಕಿ ಬೀಳತಾವ. ಕಳಸದ ಗಿಂಡಿ ಒಡಿತೈತಿ

೧೬೦. ಸೋಸಿ ನಡಿರಿ ಧರ್ಮ ಬಿಡಬ್ಯಾಡ್ರಿ, ತುತ್ತು ಕೊಟ್ಟು ಉಣಿಸಿದ ತಾಯಿನ ಮರಿಬ್ಯಾಡ್ರಿ ಬೆಳಸಿದ ತಂದೆ ಮರಿಬ್ಯಾಡ್ರಿ ಕಲಸಿದ ಗುರುವಿನ ಮರಿಬ್ಯಾಡ್ರಿ ಶ್ರೀಮಂತಿಕೆ ಬಡತನ ಬೆಳದಿಂಗಳಿದ್ದಾಂಗ್ ಇಂದ ಹೊಕ್ಕತಿ ನಾಳೆ ಬರತೈತಿ.

೧೬೧. ನಂಬಿಕೆಗೆ ಮೋಸ ಮಾಡಬ್ಯಾಡರಿ, ಕೊಟ್ಟ ವಚನ ತಪ್ಪಬ್ಯಾಡರಿ ಕಡಬಿ ಇಟ್ಟಪ್ಪನ ಮಾತ ಸುಳ್ಳಲ್ಲ ಹಿಡಿರಿ ಭಂಡಾರ.

೧೬೨. "ಬೀರಪ್ಪ ಖರೆ ಹೇಳತಾನ ಬೀರಪ್ಪನ ಮಾತ ಗಚ್ಚಿನ್ಯಾಗ ಗೂಟ ಬಡಿದಂಗ ಮೊದಲ ನಾವು ಶುದ್ಧ ಇದ್ದ ಇನ್ನೊಬ್ಬರಿಗೆ ಹೇಳಬೇಕ, ಬೆಳ್ಳಿ ಬಟ್ಲ ಒಡೀತದ ಮುತ್ತಿನ ರಾಗಿ ಒಡಿತದ ಊರ ಕೆಟ್ಟ ಹೊಕ್ಕತ್ಯೆ ಮೂರು ಮೂಲಿ ಕೂಡಿ ಬರುದರೊಳಗ ಬಂದ ಹೋಗರಿಲೇ

೧೬೩. ನಾಳೆ ಸ್ವಾತಿ ಮಳಿ ಶುರುವಾಗತೆತಿ, ಮೊದಲ ಹಳ್ಳದ ಹೊಲ ಹರಗರಿ ಬೋರ್ಯಾಡತಾನ ಮಳಿರಾಜ.

೧೬೪. ಏ ತಮ್ಮಾ, ಹಳ ಹಳಿ ಮಾಡಬ್ಯಾಡ ಮುಂದಿನ ಬ್ಯಾಸಗಿಗೆ ಬಾಸಿಂಗ ಬಲ ಕೂಡಿ ಬರತೈತಿ ಇದು ಬೂದಿಗೊಪ್ಪ ಮಾಳಿಂಗನ ಮಾತ ಹುಸಿ ಹೋಗೋದಿಲ್ಲ.

೧೬೫. ಮುತ್ತಿನ ರಾಶಿ ಕಣದಾಗ ಬಿದೈತಿ ಆನಿ ತುಳಿದರ ಸವೆದಿಲ್ಲ, ಬೀರಪ್ಪನ ಪಲ್ಲಕ್ಕಿ ಹ್ವಾದರ ನುರಿತೈತಿ ಐದ್ ಅಮಾಸಿ ಬರ್ಲೆ.

೧೬೬. ಟಗರಿನ ಬಾಲಾ ಮುರಿಬೇಕ ಎದುರಿಗೆ ಬಂಟ ಬಂದರೂ ಹಿಂದ ಸರಿತಾನ. ತಂಗಿ ಹೊತ್ತ ಮುನಗುದರೊಳಗ ಮೂರು ಮೂಲಿ ಜಾಗದಾಗ ಅಂಬಲಿ ಕಿಚಡಿಯಿಟ್ಟ ಹಿಂದ ಹೊಳ್ಳಿ ನೋಡಬ್ಯಾಡ

೧೬೭. ಹತ್ತಬಾರದ ಗುಡ್ಡ ಹತ್ತೇನ್, ಘಟ್ಟದ ತೆಗ್ಗ ಇಳಿದೇನ, ಆಕಾಶಕ್ಕ ಘಂಟಿ ಬಡದೇನ ನಿಮ್ಮೂರ ಕಂಟಕ ಬಯಲು ಮಾಡೇನ

೧೬೮. ಅಂಗಾಲು ಮೇಲಾಗಿ ನೀರು ಕುಡಿತೈತಿ, ಇಂದು ಊರಾಗ ಜಾತ್ರೆ ಐತಿ, ನಿನಗ್ಯಾರು ಹೇಳಿದರೋ ಅಲಕನೂರು ಕರಿಸಿದ್ಧಪ್ಪ.

೧೬೯. ವಟ ವಟ ಮಾತಾಡಬ್ಯಾಡ್ರ್ಯೋ ಎಮ್ಮಿ ಉಚ್ಚಿ ಹೋದಾಂಗ ಮಾತಾಡಬ್ಯಾಡ್ರೀ ಕಂಬಳ್ಯಾಗ ಕನಕ ನಾದಬ್ಯಾಡ್ರೀ ಅಣ್ಣ ತಮ್ಮ ಇಬ್ಬರ ಅದಿರಿ ನಾ ಮುಂದ ನೀ ಮುಂದ ಅಂತ ಹೋಗಬ್ಯಾಡ್ರೀ ಯಾರ ಮುಂದ ಹೋಗುದಿಲ್ಲ, ಯಾರ್ ಹಿಂದ್ ಹೋಗುದಿಲ್ಲ ಈ ಜಲ್ಮ ಮೂರು ದಿನದ ಸಂತಿ ತಿಳಿದ ನಡಿರಿ ಐದು ಅಮಾಸಿ ಗುಡಿಗೆ ಬಂದ್ ಹೋಗರಲೇ

೧೭೦. ಆಡಿನ ಮಲಿಯ್ಯಾಂಗ ಇಬ್ಬರ ಅಕ್ಕ-ತಂಗಿ ಆದಿರಿ ತವರು ಮನ್ಯಾಗ ಪಾಲಾ ಕೇಳಬ್ಯಾಡ್ರೀ, ತವರ ಮನಿಗೆ ಆಸೆಕೊಟ್ಟ ಹೋಗ್ರೀ ಅಣ್ಣ ತಮ್ಮರಿಗೆ ಮೂರು ರೊಟ್ಟಿ ಅದಾವ ಇಬ್ರೂ ತಿನ್ನರಿ ಅಂತ ಹೇಳ್ರಿ ಎಲ್ಲರನೂ ಸಮನಾಗಿ ನೋಡ್ರಿ ವರುಷಕ್ಕೊಮ್ಮೆ ಬಂದ ಹೋಗ್ರೀ ತವರಮನಿ ಸೀರೆ, ಇಳಕಲ್ ಜರಿ ಅಂತ ತಿಳಕೋರಿ ಬಾಳ ಆಸೆ ಮಾಡಬ್ಯಾಡರಿ ನನ್ನ ಗುಡಿಗೆ ಬಂದ ಹೋಗ್ರಿ

೧೭೧. ಹಳ್ಳದ ದಂಡಿ ಮ್ಯಾಗ ಮೂರು ಹಕ್ಕಿ ಕುಂತಾವ, ನೀರ ಕುಡಿದ ವರ್ಷಕ್ಕೊಂದ್ ಫಲ ಕೊಡತ್ತಾವ.

೧೭೨. ಹಬ್ಬ ಬಂತ ಅಂತ ಸಾಲಾ ಮಾಡಬ್ಯಾಡರ್ರಲೇ, ಸಾಲ ತೀರಸುದೊರಳಗ ಬಾಳೆ ಮೂರಾಬಟ್ಟಿ ಆಗತೈತಿ. ಗುಡಿಗಿ ಬಂದ ಭಂಡಾರ ಹಚ್ಚಕೊಳ್ಳಿರಿ

೧೭೩. ಅವ್ವ, ಅಪ್ಪ ಮ್ಯಾಲ ಮಾಡಬ್ಯಾಡರಿ ಅವರ ನಮಗಾಗಿ ಇರ್ತಾರಿ. ಅವರ ದುಡಿದಿದ್ದನ್ನ ಚಲೋತಾಗಿ ಬಳಸಿಕೊಳ್ಳರಿ ಯಾರ ಮಾತ ಕೇಳಿ ಕುಂತ್ ಬರ್ತತಿರಿ.

೧೭೪. ನಿಮ್ಮ ಅಪ್ಪನ ಹೊಲಾ ಎಲ್ಲಿತ್ತ್ರೋ? ಮನಿ ಎಲ್ಲಿತ್ತ್ರೋ? ಅಜ್ಜನ ಗುಡ್ಯಾಗ ಐತಿ ಅಜ್ಜಗ ನಡಕೋರಿ.

೧೭೫. ಅಂಗೈ ಗಾತ್ರದ ಹೊಲ ಐತಿರ್‍ಯೋ, ಮುಂಗೈ ಗಾತ್ರದ ಬದುವು ಐತಿರ್‍ಯೋ, ಬೆಳಿತತಿ ಬೆಳಿತತಿ ಬೆವರಸಿಟಿ ತಿನ್ನಬೇಕು ಇರದಿದ್ರ ಹೊಲಾ ಮಡ್ಡಿ ಆಗತೈತಿ ಹಂಗ ಆಗದ್ಹಂಗ ನೋಡರಲೇ.

೧೭೬. ಆ ಕಡೆ ಈ ಕಡೆ ಗುಡ್ಡ ನಡುವೆ ಕಾಗಿ ಕೂಗತೈತಿ. ಕೆಳಗೆ ಲಿಂಬಿಹಣ್ಣು ಬಿದ್ದೈತಿ ಭಂಡಾರ ಹಚ್ಚಿ ಹಕ್ಕ್ಯಾಗ ಕಟ್ಟಿರಿಲೇ

೧೭೭. ಮಗನಿಗಿ ಬಂದ ಕಂಟಕ ಬಯಲಾಗಿದೆ, ಏನೂ ಹರಕತ್ ಇಲ್ಲ ಕುದುರಿ ಹಂಗ ಮೇಯ್ಸಿರಿ ನನ್ನ ಮರಿಬ್ಯಾಡರಿ.

೧೭೮. ಕಂಟಕ ಬಯಲಾಗಿದೆ ಎಂದು ಹಿಗ್ಗಬ್ಯಾಡರಲೇ ತಗ್ಗಿ, ಬಗ್ಗಿ ನಡಿರಿ. ನಾಳೆ ಅಮಾಸಿಗೆ ಗುಡಿಗೆ ನಾರದ ಹಗ್ಗ ಡೋಹರ ಹಲಗೆ ತಗೊಂಡು ಬರ್‍ರ್ಯೋ

೧೭೯. ದುಡಿಬೇಕರೋ, ಈ ಜಲ್ಮ ಈ ಜಲ್ಮ ಹೊಳ್ಳಿ ಬರುದಿಲ್ಲ ಉದ್ದನ್ ಗಿಡಕ್ ನೆರಳಿಲ್ಲ, ಹಂಗ್ ಆಗಬ್ಯಾಡರಲೇ

೧೮೦. ಹೊಲದಾಗ ಹುತ್ತ ಐತಿ ಒಳಗ ತೆಕ್ಕಿ ಮಡಿಸಿಕೊಂಡು ಮಲಗೇತಿ ಹುಷಾರ ಆಗಿ ಬಾಳೆ ಮಾಡಿರೊ

೧೮೧. ಮಳಿ ಭಾಳ ಆಗೇತೆಂತ ಉಂಡುಂಡು ಮಲಗಬ್ಯಾಡ್ರಿ, ಸೆಟಿಸಿ ದುಡಿದ್ರ ಸೆಟಿವಿ ಹೇಳಿದಂಗ ಆಗತೈತಿ. ಬರದ ಬರೀ ತಪ್ಪುದಿಲ್ಲ

೧೮೨. ಊರಿಗೆಲ್ಲಾ ಐತಿ ಬೀರಪ್ಪನ ಕಂಬಳಿ ಎತ್ತಲಾರದ ಕೊಪ್ಪರಗಿ, ಐತಿ ನಿಮ್ಮ ಮನಸ್ಸಿನಂಗ್ ಕೊಡ್ರಿಲೇ ಏಳ್ರಿ ಏಳ್ರಿ ಎಣಿಸಲಾರದ ಗೆಜ್ಜಿ ಬರ್‍ತಾವ

೧೮೩. ಮೈ ಮನಿಸಿರೋ ಹದನೋಡಿ ಬಿತ್ತರೋ, ಕೂರಿಗಿ–ಕುಂಟಿ ಸಾಗಮಾಡ್ರಿ ಬಲ್ಲಂಗ ಮಳಿ ಸುರಿತೈತಿ

೧೮೪. ಎರಿ ಮಣ್ಣಿನ ಹೊಲದಾಗ ತೆನಿ ಜ್ಯೋತ್ಯಾಡತಾವ, ಕಾಯಿ ನೇತಾಡತಾವ ಅದಕ್ ಕುರಿ ಮೇಯಿಸರೋ ಫಸಲ್ ಹೇಳಿದಂಗ ಬರತೈತಿ.

೧೮೫. ಎರಡು ಗುಡ್ಡದ ನಡುವೆ ಬೀರಪ್ಪ ಮಲಗ್ಯಾನ ಅವಗ ನಡಕೊರೋ ಉರಿ ಹೋಗಿ ಸಿರಿ ಬರ್‍ತದೆ.

೧೮೬. ಬಂದ ಮನ್ಯಾಗ ದೈವದವರೆಲ್ಲಾ ನೀರು ತುಂಬಿದರು ತುಂಬಲಿಲ್ಲ, ಸಂಗಟ ಬಂದಾಗ ಮಾತ್ರ ನನ್ನ ನೆನಸ್ಬ್ಯಾಡರಲೇ ಎಲ್ಲಾ ಕಾಲಕ್ಕೂ ದೇವರ ಬೇಡರೋ.

೧೮೭. ಗಿಡಕ್ ಹೂವಿಲ್ಲ ಕಾಯಿ ಇಲ್ಲ, ಎಲೆ ಇಲ್ಲ, ಅಂಥಾ ಗಿಡಕ್ ಏನ್ ಬೇಲೆಯ್ಯೋ ಮನುಷ್ಯರ ಬಾಳೆ ಹಂಗ್ ಆಗಬಾರದ್.

೧೮೮. ಹರೆದವರಿಗೆ ಅರಿದವರಿಗೆ ಬುದ್ದಿ ಹೇಳಿದ್ರ, ಹನಿಗಿ ಗುಂಡಕಲ್ಲ ಬಡಕೊಂಡ ಹಾಗೆ ಮನುಷ್ಯಾ ಪೆಟ್ಟು ತಿಂದ್ರ ಹರೆ ತಿರುಗಿ ಬುದ್ದಿ ಬರ್ತದ.

೧೮೯. ಬೀರಪ್ಪಗ ಬಗ್ಗಿ ನಮಸ್ಕಾರ ಮಾಡಿರೋ ಬೀರಪ್ಪ ಬೇಡಿದ್ದ ಕೊಡತಾನ. ಬಣ್ಣದಾಗ ಎರಡ ಆಗಬಾರದು

೧೯೦. ಒಂದು ಕುದರಿ ಓಡತೈತಿ ನಿಲ್ಲತೈತಿ, ಆಡತೈತಿ ಕುದರಿ ಹಂಗ ಓಡಬೇಕು ಬಾಳೆ ಬದುಕು ಚೆಂದ ಆಗತೈತಿ.

೧೯೧. ಏಳು ಹೊತಕ್ಕಂಡು ಏಳು ದೇವರ ಪೂಜೆ ಮಾಡುದಕ್ಕಿಂತ, ಒಂದ್ ದೇವರ ನಂಬಿ ನಡಿರೋ ಮನಸಿನ್ಯಾಗ ಅಂದದ್ದ ಆಗತೈತಿ.

೧೯೨. ತಿರಕ್ನೊಂಡು ತಿನ್ನುದಕ್ಕಿಂತ ದುಡಕೊಂಡು ತಿನ್ನರೋ.ರಟ್ಟಿ ಮುರಿದರ ರೆಂಟಿ ಸವಿತೈತಿ ಪುರಮಾಸಿ ಬೆಳಿ ಬರತೈತಿ

೧೯೩. ಒಂದು ಬತ್ತಿ ಮನಿಯೆಲ್ಲಾ ಬೆಳಗತೈತಿ, ಇರಾವ ಒಬ್ಬ ಮಗನ ಸಾಕರ್ಯೋ ಕುದರಿ ಹಂಗ ಬೆಳಸರಲೇ.

೧೯೪. ಸಾಲಾ ಮಾಡಿ ಸಕ್ಕರಿ ತಿನ್ನಬ್ಯಾಡರಿ, ಒಂದು ಬಿದಿರು ಒಡೆದು ಮುರು ಮನಿ ಕಟ್ಟಿದಂಗ್ ಬದುಕಾಕ ಕಲಿರಲೇ.

೧೯೫. ಹೆಗಲ ಮೇಲೆ ಕಂಬಳಿ ಹಾಕ್ನೊಂಡ, ಸರ್‌ಹೊತ್ತನ್ಯಾಗ ಹೊಂಟನ್ ಬೆನ್ ಹತ್ತರಿ. ಏಳುದಳಪತಿ ತಿಂದ ಬಂದೀದಿ

೧೯೬. ನಾನು ಕಣ್ಣಿಗೆ ಕಾಣೋದಿಲ್ಲ ಕೈಗೆ ಸಿಗೋದಿಲ್ಲ ನಿಮ್ಮ ಜೋಡಿನ ಅದನ್ ಅಮಾಸಿಗೊಮ್ಮೆ ಗುಡಿಗೆ ಬರ್‍ರಲೇ

೧೯೭. ಬಕ್ಕ ತಲೀಲೆ ಬರ್‍ರಲೋ ಕರಿ ಗುಡ್ಯಾಗ ಭರಮಪ್ಪ, ಅದಾನ್ ಅವನ ಅಂಬಲಿ ಕುಡದ ಹೋಗ್ರಿ

೧೯೮. ಇದ್ದದ್ದ ಹೇಳ್ರಿ ಮೆತ್ತಗ ಮಾತಾಡಬ್ಯಾಡ್ರಿ, ಖರೆ ಹೇಳಿದ್ರ ನಿಮಗ ವಚನಕೊಟ್ಟ ಸಮುದ್ರ ದಾಟತಾನ. ಏಳು ಸಮುದ್ರದಾಟಿ ಬಂದಿನಿ

೧೯೯. ಕತ್ತಲ ಮನ್ಯಾಗ ಕರಿ ದೆವ್ವ ಮಲಗೇತಿ, ಶನಿಯಾಗಿ ನಿಮಗ ಕಾಡತೈತಿ,ನಿಂಬಿಕಾಯಿ ಭಂಡಾರ ಹಚ್ಚಿ ಆ ಮನ್ಯಾಗ ಕಟ್ಟರಿ.

೨೦೦. ಎಲ್ಲೈ ಸಂಜಿಗಿ ಇಟ್ಟ ನಡಿರಿಲೇ ನಿಮ್ಮ ಮನಿ ಅರಮನಿ ಆಕೈತಿ ಕರಿ ಹೊಲದಾಗ ಕಾಲ ಹಾದಿ ಮಾಡ್ರ್ಯೋ ಒಯ್ಯುವಾಗ ಹೊತಗೊಂಡ ಹೋಗ್ರೀ ಹುಚ್ಚರ ಹಾಗೆ ಮಾತನಾಡ ಬ್ಯಾಡರಿ

೨೦೧. ಕರಿ ಹೊಲದಾಗ ಕುರಿ ಯಜಮಾನ ಆಗಬೇಕ. ನೆತ್ತಿ ಮ್ಯಾಲ ಮಳಿ ಬಂದಾಗ ಸುಖಾ ಆಗತ್ತೈತಿ.

೨೦೨. ಭೂಮಿ ಮ್ಯಾಲ ಬೆವರ ಹನಿ ಸೂಸಾಡಿ ಬೀಳಬೇಕು, ಗಾಳಿಗೆ ಮೈ ಹಗುರಾಗಬೇಕ ಹಂಗ್ ದುಡಿಬೇಕ್

೨೦೩. ಮನಸ್ಸು ಕಲ್ಲ ಮಾಡಕೋಬಾರದು ಹೂವಿನಂಗ ಮೆತ್ತಗ ಇರಬೇಕು ನಾಲ್ಕು ಜನರಿಗೆ ಬೇಕಾಗಬೇಕು ಉಗುಳನುಂಗಿ ಬದುಕುವುದನ್ನು ಕಲಿಬೇಕ ತಾಳಿದಾವ ಬಾಳತಾನ ಹಿಂಡ ದನದಾಗ ನುಗ್ಗಿ ಕುರಿ ಹಾಲ ಹಿಂಡಿ ಬಂದರೋಗ ಹೊಕ್ಕಾವ ಇದು ಕರಿ ಭರಮನ ಮಾತು

೨೦೪. ಮುದಿ ವಗ್ಗಯ್ಯಾ ಮುಂಗೈಯಾಗ ಜೋಳಗಿ ಹಿಡಕೊಂಡ್, ಬರ್‍ತಾನ ಹಂಗ ಕಳಸಬ್ಯಾಡರಲೇ ಅಂಬಲಿ ನುಚ್ಚ ಕೊಡಲೇ ಹರಕೆ ಕೊಟ್ಟು ಹೋಗತಾನ.

೨೦೫. ಬದನಿಕಾಯಿ ಬರ್‍ತ ಚಲೋ ಆಗೇತೆಂಥ ಮನ್ಯಾನಕಿನ, ಮರಿಬ್ಯಾಡರೋ ಮನ್ಯಾನಾಕಿ ಕಡಿತನ ನೆಂಪ ಇರಲಿ ನೆಂಪ ಇರಲಿ ಒಂದ ಅಂಗಿಮ್ಯಾಲ ಇನ್ನೊಂದು ಅಂಗಿ ಚೆಂದಅಲ್ಲ

೨೦೬. ಕಾಯಿ ಜೋತಾಡತಾವ ಹೂ ನೇತಾಡತಾವ, ಊರಾಗಿನ ಮಾಯವ್ವ ಓಡಾಡತಾಳ ಮಾಯವ್ವನ ಮರಿಬ್ಯಾಡ್ರಿ.

೨೦೭. ಕುರುಬ ಹುಟ್ಟುವ ಕುಲದಲ್ಲಿ ಗೋತ್ರ ಇಲ್ಲ ಕುರುಬ ಎಲ್ಲಾದಕೂ ಮೂಲ, ಜಾಡ್ಸ ಕಂಬ್ಳಿ ನಾಡಿಗೆಲ್ಲ ಒಂದ್ ಕಂಬ್ಳಿ ಅಲಕನೂರ ಕರಿಸಿದ್ಧನ ಕಂಬ್ಳಿ ಒಮ್ಮೆ ಜಾಡಿಸಿದ ಭಾಳ ಮಳಿ ಅಲಕನೂರ ಸಿದ್ಧಗ ನಡಕೋರಿ" ಕಂಬಳಿ ಮ್ಯಾಲ ಕುಂತ ಹೇಳಿಕೆ ಮಾಡತಾನ ಅಲಕೂರಿನ ಕರಿಸಿದ್ದ

೨೦೮. ಯರಗಟ್ಟಿ ಎರಿ ಮ್ಯಾಲ ಕರಿಕುರಿ ಮೇಯುತಿತ್ತು, ತಲಿಮ್ಯಾಲ ಕರಿ ನೂಲು ಆ ನೂಲು ಕೊಳ್ಳಾಗ ಹಾಕರಲೇ ಆಗುದ ಅಕ್ಕೈತಿ ಹೋಗುದ್ ಹೊಕ್ಕೈತಿ

೨೦೯. ತುಂಬಿದ ಕೆರ್‍ಯಾಗ ಕೆಂದೆತ್ತು ನೀರು ಕುಡಿತು ಈ ವರ್ಷ ಬೂದಿಗೊಪ್ಪ ಮಾಳಿಂಗರಾಯ ಜಾತ್ರಿ ಭಾರಿ ಆತು. ಮಾಳಿಂಗರಾಯನ ಹುಲಿ ಹಾಲ ತಗೊಂಡ ಗುರುವಿನ ಸೇವಕ ಬಂದಾನ ಮಾಳಪ್ಪ ಗುರು ಬೀರಪ್ಪಗ ಹಾಲ ಹರವಿ ತಂದಾನ"

೨೧೦. ಕಾಡು ಕಾಲ ಹೋಯಿತು ಚಿಂತಿ ಮಾಡಬ್ಯಾಡ್ರಿ, ನಿಮ್ಮ ಕೆಲ್ಸ ನೀವು ಮಾಡರಲೇ.

೨೧೧. ಪಲ್ಲಕ್ಕಿ ಹೋಗತ್ತೈತಿ ಹೂವ್ರು ಜೀಳತ್ತೈತಿ, ನನ್ನ ಪೌಳ್ಯಾಗ ನ್ಯಾಯ ಕಟ್ಟಿ ಐತಿ ನೋಡಿ ನ್ಯಾಯ ಮಾಡಿ.

೨೧೨. ದಾನದ ಹುಗ್ಗಿ ಬಾಣದ ಹುಗ್ಗಿ, ಊರಿಗೆಲ್ಲ ಒಂದೇ ಹುಗ್ಗಿ ಬೀರಪ್ಪನ ಹುಗ್ಗಿ ಬಂದ ಸಂಕಷ್ಟ ಬಂದ ಆಯ್ತು ಹುಗ್ಗಿ ಉಂಡ ಹೋಗರಲೇ.

೨೧೩. ಕರಿಸಿದ್ಧ ಕಟ್ಟಿದ ಕೆರಿ ನಾಲ್ಕ ಮೂಲಿ ಚೌಕ ನುಗ್ಗಬಹುದು, ಬರಾಕ ಆಗುದಿಲ್ಲ ನುಗ್ಗಿದರ ಮುಳುಗುದಿಲ್ಲ ಎಡಗಡೆಯಿಂದ ಬಂದ ಎಡಗಡೆ ಹೊಗತೈತಿ

೨೧೪. ಕಾಡು ಕಾಲು ಐತಿ ಐದು ಮೂಲಿ ಮನಿ ಬ್ಯಾಡ, ಒಂದ್ಕಡೆ ಬಾಗಿಲ ಇಲ್ಲ ಬಿಟ್ಟ ಬೀಡರಲೇ

೨೧೫. ಬೀರಪ್ಪನ ಕುದ್ರಿ ನಿನ್ನ ತ್ವಾಟಕ ಬಂದ್ರ ಹೊಡಿಬ್ಯಾಡ್ರಿ, ಹೊಡದ್ ಮರಗ್‌ಬ್ಯಾಡ್ರಿ ಭಂಡಾರ ಹಚ್ಚಿ ಕಳಸಿರಿ ಕೇಡ ಇಲ್ಲ

೨೧೬. ಕಣ್ಣು ನೆತ್ತಿ ಮ್ಯಾಲ ಬರಬಾರದು ಎತ್ತಿದರೆ ಎರಡು ಹೋಳಾತತಿ ಹುಷಾರಾಗಿ ಹೋಗ್ರಿ.

೨೧೭. ಬಿಳಿ ಸಮುದ್ರದ ಮೇಲೆ ಬೆಳ್ಳಿ ಬಟ್ಲ ತೇಲುತ್ತದೆ ಆಗ ಆಗಬಾರದು ಆಗ್ತದೆ. ಕಳಸದ ಗಿಂಡಿಗಿ ದೀಪ ಹಚ್ಚೇರಿ

೨೧೮. ಕಾಳಾ ಕಡಿ ಅಗ್ಗ ಆಗ್ಯಾವ ಅಂತ ಹಿಗ್ಗಬ್ಯಾಡರಿ, ಮಗ್ಗಲು ಎಲುಬು ಮುರದೇನ್ ದುಡ್ಯಾಕ ಕಲಿರಲೇ.

೨೧೯. ಎಲೇ ಬಂಡಿ ಹೂಡ್ರಿ ಮ್ಯಾಲೆ ಕೊಲ್ಹಾರಿ ಬಿಗಿರಿ, ಬಂಡಿಗೆ ಭಂಡಾರ ಒಗಿರಿ ಬೀರಪ್ಪ ಹೋಗಿ ಬರ್‍ತಾನ ಹೊಲಕ್ ಆಗ ನೋಡ್ರಲೇ ರೈತಗ ಆಗುದ ಆಗುತೈತಿ.

೨೨೦. ಗುಡ್ಡ ಇಳಿವಾಗ ಬಿಟ್ಟಾನು ಪಾದದಗೆಜ್ಜೆ ಇಟ್ಟಪ್ಪ ಗುಡ್ಡಾನ, ಇಳಿಸಿ ಒದದಾನು ಏಳು ಸಮುದ್ರ ದಾಟಿ ಬಂದ ಹೇಳ್ಯಾನ್, ಕುಲವಿಲ್ಲ ಲೋಕಕ್ಕೆ ಸಾರಿ ಹೇಳ್ಯಾನ

೨೨೧. ಬಂಜಿಗೇನು ಗೊತ್ತರ್‍ರ್‍ಯೋ ಹಡಿಯುವ ಬ್ಯಾನಿ ಬಂಜಿಯ ಮಾತ ಅಲ್ಲ:ಕೋಳತುತಲ್ಲ ಕಳ್ಳನಿಗೇನು ಗೋತ್ತರ್‍ರ್‍ಯೋ ಖರೆ ಮಾತು ಅಂತಹವರ ಮಾತು ನಂಬಿದರ ಕೆಟ್ಟ ಹೋಗತಿರಲೇ ಅಲಗ ಚುಚ್ಚಿ ಹೇಳ್ಯಾನ ಮಾಳಪ್ಪ ಬಲಗೈಲಿ ಭಾಷೆ ಕೊಟ್ಟ ಕಳಿಸ್ಯಾನ ಬಡಕೊಂಡ ದೆವ್ವ ಬಂದ ಹಾದಿಲೇ ಹೊಕ್ಕೈತಿ

೨೨೨. ಎಲೇ ಕುಂತ ಮಾತಾಡ್ರಿ ನಿಂತ ಮಾತಾಡಬ್ಯಾಡ್ರಿ, ಕೂಸಿನ ಬ್ಯಾನಿ ತಿಳಿಯುದಕ ಹಡದವ್ವಾಗ ಗೊತ್ತು ಈ ವರ್ಷಕ ಉಂಡ ಆಡು ಮಕ್ಕಳ ಬರತಾರೋ, ನಿಮ್ಮ ಮನಿಗೆ.

೨೨೩. ಆಕಾಶಿಲಿ ಮಳಿ ಬಂದು ಮಡ್ಡಿ ಹೊಲ ಹಸಿ ಆತು, ಸುತ್ತ ಹತ್ತೂರಿಗೆ ಸಾಲ ಹಿಡಿತಾವ ಎತ್ತಗೋಳ ವಾಲಗಾ ಊದರಲೇ

೨೨೪. ಕುರುಡ ಇದ್ದವ್ಗ ಕಣ್ಣ ಆಗಬೇಕ್, ಕಾಲ ಇಲ್ಲದವ್ಗ ನಡೆಸಿ ಕಲಿಸಿರೋ, ನಾನಾತರ ಬ್ಯಾನಿ ಬಂದಾವು ಬಂದ ಮಾಳಪ್ಪ ಭಂಡಾರ ಹಚ್ಚಿಕೋಲ್ರೋ

೨೨೫. ಗುರುವಿನ ಕಿಲ್ಲಾರ ಈಗ ನಮ್ಮ ಹತ್ತೇಕ ಬಂದತಿ ಮರಗಬ್ಯಾಡ್ರಿ ತಮ್ಮಾ ಅದದ್ದೆಲ್ಲ ಚಲೋ ಅಕ್ಕತಿ ಹೊಟ್ಟಿ ತುಂಬತೈತಿ ನೆತ್ತಿಗೆ ಎಣ್ಣಿ ಅಕ್ಕತಿ ಹುಣ್ಣಿವಿ ಚಂದ್ರನಂಗ ಮಕ್ಕಳ ಬೆಳೀತಾರ ಜೋಡಿ ದೀಪ ಮನ್ಯಾಗ ಹಚ್ಚತೀರಿ.

೨೨೬. ಜಂಭೂ ದ್ವೀಪ ಅನ್ನೋ ಸ್ಥಳಕ ಹುಣ್ಣವಿ ಚಂದ್ರನಂಗ ಜಕ್ಕಪ್ಪ ಮಾಳಪ್ಪ ಬೆಳೆದಾರೋ, ಜಕ್ಕಪ್ಪ ಮಾಳಪ್ಪ ಜ್ಯೋತಿ ರೂಪ ಕಂಬಳಿ ಬೀಸ್ಯಾಡಿ ಮಳಿ ತರತಾರೋ

೨೨೭. ಹೆಗಲ ಮ್ಯಾಲ ಹೋಮದ ಕಂಬಳಿ ಹೊತ್ಕೊಂಡು ಕೈಯಾಗ ನೇಮದ ಬೆತ್ತ ಹಿಡಕೊಂಡು, ಮಾಳಪ್ಪ ಕುರಿ ಕಾಯ್ತಾನ ಕುರಿಗೋಳು ಹಟ್ಯಾಗ ಮರಿ ಹಾಕ್ಯಾವ ಮಾಳಪ್ಪ ಬಾಗಿ ದೊಡ್ಡಿಗೆ ಬಂದಾನೋ, ದೊಡ್ಯಾಗ ನಿಂತು ಹಾಲ ಹಿಂಡಿ ಭಕ್ತರಿಗೆ ಕೊಟ್ಟಾನು.

೨೨೮. ಕಾಲ ಬದಲ ಆಗ್ತಾಯಿದೆ ಖರೆ ಮಾತಾಡೋದು ಹೊಯಿತು, ತಗಲ ಮಾತಾಡೋದು ಬಂತು ಹುಸ್ಯಾರ ಇರಲೇ.

೨೨೯. ಎಲೇ ಯಾವ ಕೇಳಾವ ಮುಂಗೈ ಹಿಡಿದ್ ಕೇಳರಲೇ, ನಾಳೆ ಅಮಾಸಿಗೆ ನಾಲ್ಕ ಹಕ್ಕಿ ಬರ್ತಾವ ಭೂಮ್ಯಾಗ ಹಸಿರ ಬಣ್ಣ ಬರ್ತಾವ.

೨೩೦. ನಡು ಹಿತ್ತಲದಾಗ ಕಾಗಿ ಮನಿ ಕಟ್ಟಿದೆ, ಕುಂಬಿ ಮ್ಯಾಗ ಕುಂತ ಕಾಗಿ ಒದರತೈತಿ ತಮ್ಮಾ ಹಿಡಿ ಭಂಡಾರ, ಬಂದ ಕಾಗಿ ಬಂದ ಹಾದೀಲಿ ಹೊಕ್ಕತಿ.

೨೩೧. ಏಳು ಒಂಭತ್ತು ಆಗತೈತ್ಯೋ ತಮ್ಮಾ ಮುಗಿಲಕ ಗುಂಡು ಹೊಡಿತತೋ, ಸಮಭಾವದಿಂದ ಸಾಗಮಾಡರಿಲೇ.

೨೩೨. ರೈತರಿಗೆ ಎಷ್ಟು ಹೇಳಿದರೂ ಸಮಧಾನ ಆಗವಲ್ಲದು ಹಂಡ ಎತ್ತು, ಭಂಡ ಎತ್ತು, ಮೂಡಲಗಿ ಬಿಳಿಯತ್ತು ಹೊಡಕೊಂಡ ಬೆಳೆಸಾಲ ಮಾಡಿರಿ ವಾರದೊಳಗ ಮಳಿ ಆಗತೈತಿ ಉತ್ತರಿ, ಸ್ವಾತಿ ಈ ವರ್ಷಕ್ಕೆ ಕೂಡುದಿಲ್ಲ ಅಂಜಬ್ಯಾಡ್ರಿ ಮಕ್ಕಳಿರ್ಯಾ.

೨೩೩. ಕಡಬಿ ಇಟ್ಟಪ್ಪನ ಮುಂದ ಖರೇ ಹೇಳರಿಲೇ, ತಗಲ ಮಾತನಾಡಿದರ ಮುರದ್ ಹಾಕ್ತಾನ ಖರೇ ಹೇಳಿದರ್ ಕಾಪಾಡತಾನ್ ಹೇಳಿರಿ ಹೇಳರಿಲೇ. ಮಗನ ಹುಷಾರ್ ಜುಟ್ ಕಿತ್ ಬಾಯಾಗ ಕೊಡತನ, ಹಿಡಿ ಭಂಡಾರ

೨೩೪. ವರ್ಷಕ್ಕ್ ಒಮ್ಮೆ ಕರಿಸಿದ್ಧ ಮುನ್ನೋಳಿ, ಹೊಳಿಗೆ ಹೊಕ್ಕಾನ್ ತಪಸಿ ಬಿಡತಾನ, ಆಗ ಬರಿಲೇ ಮನಸಸ್ನ್ಯಾಗಿಂದ ಈಸಾ ಹೋಗಿ ಆಗು ಕೆಲ್ಸ ಅಕ್ಕವ.

೨೩೫. ಎಲೇ ಎಲೇ ಬಡವರನ್ನ ಬಗ್ಗಸ ಬ್ಯಾಡರಿ, ಅವರಿಗೆ ಕೊಡುವುದ ಕೊಡ್ರಿ ಇಲ್ಲದಿದ್ರ ಬಸವಣ್ಣ ಚಲೋ ಮಾಡೋದಿಲ್ಲ : ಬಾಳೆ ಮುರುದ ಮುರಾಬಟ್ಟಿ ಆಗತೈತಿ ತಿಳಿದ ನಡಕೋ.

೨೩೬. ಎಲೇ ಮಕ್ಕಳಿರ್‍ಯಾ ಮೆಲ್ಲಕ ಮಾತನಾಡಿರಿ ಎತ್ತು ಉಚ್ಚಿ ಹೋದ ಹಾಗೆ ಬ್ಯಾಡ ಎದ್ದಾಗ ಜುಟ್ಟು ಹಿಡಿಬ್ಯಾಡರಲೇ ಬಿದ್ದಾಗ ಕಾಲ ಹಿಡಿಬ್ಯಾಡರಲೇ. ಬಗ್ಗಿನಡಿರಿಲೇ

೨೩೭. ಎಲೇ ! ಇರೋದ ಕಳಕೋಬ್ಯಾಡರಲೇ ಕಳಕೊಂಡ್ರ ಕೂಡಿಸೋದು ಕಷ್ಟ ವಾಗತಲೇ ಹೋಗರಲೇ. ಹೇಳುದನ್ ನೆಟ್ಟಗ ಹೇಳರಿಲೇ

೨೩೮. ಎಲೇ ! ನಿಮಪ್ಪ ಎಲ್ಲರಿಗೂ ಚಿಂತಿ ಇಲ್ಲದವರಿಗೆ ಒಂದು ಚಿಂತಿ ಆದ್ರ ಇದ್ದವರಿಗೆ ನೂರಾರು ಚಿಂತಿ ಅದಕ್ಕಾಗಿ ಅಲಕನೂರು ಸಿದ್ಧಪ್ಪನ ಮರಿಬ್ಯಾಡರಲೇ.

೨೩೯. ಎಲೇ ! ಇದ್ದಾಗ ಯಾರು ಬ್ಯಾಡಾ ಇಲ್ದಾಗ ಎಲ್ರೂ ಬೇಕು ಅಂತಿರಿ, ಹಿಂಗ್ ಆದರ ಹೆಂಗರಲೇ ನಾಲ್ಕು ಮಂದಿ ಹಚ್ಚಕೊಂಡು ಬಾಳೆ ಮಾಡರಲೇ ಹಿಡಿ ಭಂಡಾರ.

೨೪೦. ಎಲೇ ! ಇದ್ದಂಗ ಇರಲಿಲ್ಲ ಬಿದ್ದ ಗ್ವಾಡಿ ಹಾಕಲಿಲ್ಲ ನಿಮ್ಮಂಥವ್ರು ಇದ್ದರೊಂದು ಸತ್ತರೊಂದು ಇದು ಅಲಕನೂರು ಸಿದ್ಧನ ಮಾತ್ ಹುಸಿ ಹೋಗುದಿಲ್ಲರಲೇ.

೨೪೧. ಎಲೇ ! ಬಲಗೈಲಿ ಕೊಡುವಾಗ ಎಡಗೈಗೆ ಕಾಣಬಾರದು ಕೊಟ್ಟಿದ್ದ ಹಂಗಸ್ ಬ್ಯಾಡರಲೇ. ಹಿಡಿ ಭಂಡಾರ. ಗೂಟದ ಮೇಟಿಹಂಗ ಗಟ್ಟಿನಿಲ್ಲರಿಲೆ

೨೪೨. ಎಲೇ ! ನಿಮ್ಮಪ್ಪ ಇದ್ದಾಗ ಅರಮನಿ ಇತ್ತು, ನೀವು ಬಂದ ಬರಮನಿ ಮಾಡಬ್ಯಾಡರಲೇ ಬರುವಾಗ ಹೊತ್ಕೊಂಡು ಬರಲಿಲ್ಲ ಹೋಗುವಾಗ ಹೊತ್ಕಂಡ ಹೋಗುದಿಲ್ಲ.

೨೪೩. ಎಲೇ ! ಬಾಯಾಗ ಬೆಲ್ಲ ಬಗಲಾಗ ಕತ್ತಿ ಹಿಡಿಬ್ಯಾಡರಲೇ, ಕೊಟ್ಟ ಮಾತ ತಪ್ಪಬ್ಯಾಡರಲೇ ಮಾಳಪ್ಪನ ಮಾತ ಹುಸಿ ಹೋಗುದಿಲ್ಲ.

೨೪೪. ಎಲೇ ! ಕಣ್ಣ ಬ್ಯಾನಿ ಬಂದರ ಕುರಿ ಹಾಲ ಕಣ್ಣಿಗೆ ಹಚ್ಚರಿಲೇ ಬಂದ ಬ್ಯಾನಿ ಮೂರದಿನಕ ಹೊಕೈತಿ ಅಜ್ಜನ ಭಂಡಾರ ನೆತ್ತಿಗೆ ಹಾಕರಿಲೇ

೨೪೫. ಎಲೇ ! ಕುರಿ ಬಾಯಿ ಹೆಂಗಸರ ಕೈ ಎಂದೂ, ಸುಮ್ಮನಿರುವುದಿಲ್ಲ ನೀವೂ ವಾಗಾತಿಂದ ಹೋಗರಿಲೇ ಹಿಡಿ ಭಂಡಾರ.

೨೪೬. ಹಟ್ಟಿ ಕಲ್ಲು ಪುಸಿಯಾಯ್ತು ಒಕ್ಕಿಯಿಂದ ಹೊಲ ಹದ ಆಯ್ತು ಒಟ್ಟಿನ ಗಡಿಗಿ ದೊಡ್ಡದಾಯ್ತು. ಹರಿವಿ ಒಡಿತತಿ ಮೆಲ್ಲಕ ಹೋಗಿರಿ

೨೪೭. ಎಲೇ ! ಹಗ್ಗ ಹಾವಲ್ಲ ನೀರ ಮಜ್ಜಿಗಿ ಪಾನಕ ಅಲ್ಲ, ಒಂದ್ ಬಿಟ್ಟ ಹತ್ತ ಬ್ಯಾರೆ ವಿಚಾರ ಮಾಡ್ರಿ ದುಡಿಕಿ ಮಾತಾಡಿದ್ರ ಒಡದ್ ಹೊಕ್ಕಿರಿ.

೨೪೮. ಎಲೇ !ಹಕ್ಕಿ ಸಾಕಿ ಬೆಕ್ಕಿನ ಕಯ್ಯಾಗ ಕೊಟ್ಟ ಹಾಗೆ ಹಂಗ ಆಗಬಾರದು, ಹಿಡಿ ಭಂಡಾರ ಎಲೇ ! ಬಿತ್ತಿದ ಹಾಗೆ ಬೆಳಿ ಬರ್ತದ ಬಯಸಿದ ಹಾಗ ಅಲ್ಲ, ಕುರಬ್ಯಾಟ ಬೀರಪ್ಪನ ಬುದ್ದಿ ಮಾತ ಕೇಳಿದರ್ ಸಿದ್ದಿ ಹೊಕ್ಕತಿ.

೨೪೯. ಎಲೇ ! ಬೆಂಕಿ ಇದ್ದಲ್ಲಿ ಬೆಳಕು ನೀರ ಇದ್ದಲ್ಲಿ ಕೆಸರ ಇದು ಮಾಯವ್ವನ ಮಾತ ನಂಬಿಕಿ ನಡದ ಹೇಳಿಕಿಕೇಳ್ರಿ

೨೫೦. ಕೇಳರಿಲೇ ! ನೆರೆ ಊರಿಗಿ ತುಪ್ಪದ ಅನ್ನ ಹಾಕೂದರ ಬದಲು ನಿಮ್ಮ ಊರಿಗೆ ಅಂಬಲಿ ಕೊಡರೀಲೆ.

೨೫೧. ಎಲೇ ! ಮಕ್ಕಳಿಲ್ಲದ ಮನೆ ಒಕ್ಕಲಿಲ್ಲದ ಊರು ಎಕ್ಕಡಕ್ಕಿಂತ ಕಡೆ ಭಂಡ ಬದುಕು ಬ್ಯಾಡರಲೇ ಹಿಡಿ ಭಂಡಾರ.

೨೫೨. ಎಲೇ ! ಬಡವಿ ಆಡಿದ ಮಾತ ಬ್ಯಾಸರ ಮಾಡಿಕೊಳ್ಳಬ್ಯಾಡರಲೇ. ಇಲ್ಲದವರು ಇದ್ದವರು ಎಲ್ಲರೂ ನನಗೆ ಅಷ್ಟ ನನ್ನ ಕಡೆ ವಿರದಿಲ್ಲ ಹಿಡಿ ಭಂಡಾರ

೨೫೩. ಎಲೇ !ನಾಯಿಗಿರುವ ನಿಯತ್ತು ನರನಿಗಿಲ್ಲ, ಜ್ವಾಕೀಲಿ ನಡೀರಿ ನಿಯತ್ತಿಲಿ ಬಾಳೆ ಮಾಡರಲೇ.

೨೫೪. ಎಲೇ ! ಅಂಜಬ್ಯಾಡರಲೇ ಜೀವನದಾಗ ದುಡಿದ ತಿನ್ನರಲೇ, ರಾಜಕೀಯದಾಗ ಬರಬ್ಯಾಡ ಒಕ್ಕಲಿಗ್ಯಾ ನಮ್ಮ ಮೂಲ ಉದ್ಯೋಗ ಬಿಡಲಾರದು. ಅದನ್ ನಂಬಿ ಬಾಳೆ ಮಾಡರಿಲೇ

೨೫೫. ಬೂದುಗ ಬಾಸಿಂಗ ಕರಿಭುಟಗ ಕರಿಕಂಬಳಿ, ಆರಿ ಹಿಂಗಾರಿ ಮುಂಗಾರಿ ಬಸವನ ಐದಕ್ ಹಾಕಿ ನಂಬಿ ನಡಿರಲೇ.

೨೫೬. ಮಾವಿನಕಾಯಿ ಹೆಚ್ಚಾದರ ಕರಿಕಂಬಳಿ ಬೀಸಿದರ, ಜೋಕುಮಾರ ಬಂದರ ಮಳಿಭಾಳ ಇದು ಹಿರ್‍ಯಾರ ಶಾಸ್ತ್ರ ಸುಳ್ಳಲ್ಲ.

೨೫೭. ಕಬ್ಬಿಣದ ಸರಪಳಿ ಹರದಿತಲೇ ಪರಾಕ್.

೨೫೮ ಹಿಂಗಾರಿ, ಮುಂಗಾರಿ ಹಚ್ಚಿ ತೂಗಿ ನೋಡುದ್ರಾಗ ಮುಂಗಾರಿ ಒಂದು ಗುಂಜಿ ಹೆಚ್ಚಾಯ್ತಲೇ ಬಸವನ ಚಿಕ್ಕ ದಸರಿಗಿ ಹರಿದೀನಿ ಭೂತ್ಯಾಗ ಹಚ್ಚಿ ಬಯಲ ಮಾಡೀನಿ

೨೫೯ ಎಲೇ! ಮೈಲಾರಲಿಂಗ ಹುಬ್ಬಿ ಹಿಡಿಯಾಯ್ತು ಉತ್ತರಿಗೆ ಉಡಿ ಕಟ್ಟೀನಿ.

೨೬೦ ಮುತ್ತಿನ ರಾಶಿ ಕಣದಾಗ ಬಂದೈತಿ ಆನಿ ತುಳಿದರ ಸವದಿಲ್ಲ ಬೀರಪ್ಪನ ಪಲ್ಲಕ್ಕಿ ಹ್ವಾದರ ನುರಿತತಿ ಐದ ಅಮಾಸಿ ಬರ್ಲೆ.

೨೬೧ ಎಲೇ! ಅರಕೇರಿ ಅರಮನಿ ಕಲ್ಲೂರ ಗುರಮನಿ ಮಣಕಾಪೂರ ಸಿಂಹಾಸನ ಗದ್ಗಿ, ಒಕ್ಕಲಗ್ಯಾನ ಮಗನೀಗಿ ಹೋದ ವರ್ಷಕ್ಕಿಂತ ಈ ವರ್ಷ ಖುಷಿ ಮಾಡ್ತೀನಿ. ಆನಿಮ್ಯಾಗ ಅನ್ನ ಹೇರಿನಿ, ನಂದಿ ಮ್ಯಾಗ ನೀರ ಹೇರಿನಿ.

೨೬೨ ಎಲೇ ! ಮಕ್ಕಳಿಲ್ಲದ ಮನೆ ಒಕ್ಕಲಿಲ್ಲದ ಊರು ಎರಡಕ್ಕಿಂತಲೂ ಕಡೆ ಭಂಡ ಬದುಕು ಬ್ಯಾಡರಲೇ ಹಿಡಿ ಭಂಡಾರ.

೨೬೩ ಲೋಕದಾಗ ಮಾನವಂತರು ಇಲ್ಲಾ, ದಾನವಂತರು ಇಲ್ಲ ಮಾನ ಹೋಗ್ತಾ ಇದೆ ಅದಕ ಭೂಮಿಮ್ಯಾಲೆ ಮಳಿ-ಬೆಳಿ ಕಡಿಮೆ ಆಗ್ತಾಯಿದೆ.

೨೬೪ ಶ್ರೀಮಂತಿಕೆ ಬಂದೈತಂತ ಗುರು ಹಿರ್‍ಯಾರನ ಮರಿಬ್ಯಾಡ್ರಿ, ತಂದೆ ತಾಯಿ ಮರಿಬ್ಯಾಡ್ರಿ ಶ್ರೀಮಂತಿಕೆ ಬಡತನ ಮಗ್ಗಲ ಮುಳ್ಳ ಇದ್ದಾಂಗ ನೆಳ್ಳ ಬಿಸಿಲ ಇದ್ದಂಗ ಬಿಸಿಲು-ಬೆಳದಿಂಗಳು ಶಾಶ್ವತವಲ್ಲಏರಿದ ಹೊತ್ತ ಇಳ್ಯಾಕ ಬೇಕು ಜ್ವಾಕೀಲಿ ನಡಿರ್‍ರೇ

೨೬೫ ನೀರಾಗ ಬತ್ತಿ ಉರಿತೈತಿ ಒಂದ ಹೋಗಿ ಒಂಭತ್ತ ಆಗತೈತಿ ಅಡಿಗಿ ಮನ್ಯಾಗ ಕುಂತೈತಿ ನಡಮನ್ಯಾಗ ಮೆಣಸ ಅರಿಬ್ಯಾಡರಲೇ ಇಟ್ಟಪ್ಪನ ನಂಬಿ ಬಾಳೆ ಮಾಡರಿ ಹುಶ್ಯಾರದಿಂದ ನಾಕ ಮಂದಿಗೆ ಬೇಕಾಗಿ ಬಾಳೆಮಾಡರಿ

೨೬೬ ರೊಕ್ಕದಾಗ ರುಚಿ ಇಲ್ಲ ರೊಕ್ಕ ಬಾಳ ಇದ್ರ ಎಲ್ಲರಿಗೂ ಅಳುಕಿ ನಡಿತೀರಿ ನಿಧಾನ ತಪ್ಪಿ ಕೌಳಹತ್ತಿ ಬೀಳ್ತಿರಿ ನಿರಾಸೆ ನಿರ್ಭಯದಿಂದ ಇರಬೇಕರಲೆ ಆಗ ಮನಸಿನ್ಯಾಗ ಇದ್ದದ್ದ ಆಕ್ಕೈತಿ

೨೬೭ ಬೀರಪ್ಪ ಖರೆ ಹೇಳತಾನ ಬೀರಪ್ಪನ ಮಾತ ಗಚ್ಚಿನ್ಯಾಗ ಗೂಟ ಬಡಿದಂಗ ಮೊದಲ ನಾವು ಶುದ್ಧ ಇದ್ದ ಇನ್ನೊಬ್ಬರಿಗೆ ಹೇಳಬೇಕ, ಬೆಳ್ಳಿ ಬಟ್ಲ ಒಡೀತದ ಮುತ್ತಿನ ರಾಗಿ ಒಡಿತದ ಊರ ಕೆಟ್ಟ ಹೊಕ್ಕತ್ಯೆ ಮೂರು ಮೂಲಿ ಕೂಡಿ ಬರುದರೊಳಗ ಬಂದ ಹೋಗರಿಲೇ

೨೬೮ ತಲಿಬಾಗಿ ನಮಸ್ಕಾರ ಮಾಡರಲೇ ತಲಿ ಎತ್ತ ಬ್ಯಾಡ ಗಚ್ಚಿನ ಕಣದೊಳು ಹೆಪ್ಪು ಹಾಲಿಗಿಟ್ಟಂಗ ಮಾತಾಡಬ್ಯಾಡ್ರಿ ಎತ್ತಿನ ಕುಲ ತೊಳೆದ ತುಳಿಸಿ ಬೆಣ್ಣಿ ಹಚ್ಚಿ ಪೂಜೆ ಮಾಡಬೇಕರಲೇ ಸಾದ ಎತ್ತ ಅಂತ ಒಂದ್ ಪೆಟ್ಟ ಜಾಸ್ತಿ ಹೊಡಿಬಾರದ ಎಳ್ಳ ಎಳ್ಳ ಹೊಡಿಬ್ಯಾಡರಲೇ ಹೊಳ್ಳಿ ತಿರುಗಿ ನೋಡಬ್ಯಾಡರಲೇನೋಡಿ ನಡಿರಿಲೇ

೨೬೯ ರೊಕ್ಕ ಇದ್ದಾಗ ತಗ್ಗಿ ಬಗ್ಗಿ ನಡೀರಲೇ ನಾಲಿಗೆಗೆ ಎಲುವು ಇಲ್ಲ ಆಕಾಶಕ್ಕೆ ಕಂಬ ಇಲ್ಲ ಅರಿತು ನಡಿರಿ, ಅರಿತು ನಡಿರಿ ಇದು ಗೊರಗುದ್ದಿ ಇಟ್ಟಪ್ಪನ ಮಾತು

೨೭೦. ಮಂಗ್ಯಾಗೇನು ಗೊತ್ತ್ರೋ ಮಾಣಿಕ್ಯದ ಮಹತ್ವ ಕತ್ತಿಗೇನು ಗೊತ್ತ್ರೋ ಕಸ್ತೂರಿ ನಾತ ಮನುಷ್ಯರು ನೀವು ತಿಳಿದ ನಡಕೋರೋ ನೀವು ಯಾರು ಏನು ಅಂತ ಅದಕಾಗಿ ಜ್ವಾಕೀಲಿ ಹೋಗ್ರಿ ಸಂತರು ಹೇಳ್ತಾರೆ ಮಾನವ ಜಲುಮ ದೊಡ್ಡದಂತ ಸುಳ್ಳಲ್ಲ ಮನುಷ್ಯಾಗಿ ಹುಟ್ಟಿದ್ದು ಅಪರೂಪ ನೋಡಿ ಹೋಗ್ರಿ

೨೭೧. ಎಲ್ಲಾರೂ ದುಡಿಬೇಕ್ರೋ ಒಬ್ಬರ ದುಡದರ ಮನಿ ಸಾಗೊದೆಂಗ್ ನಾಳಿ ಸ್ವಾತಿ ಮಳೆ ಸುರು ಆಕ್ಕತೆ ಮೊದಲ ಹಳ್ಳದ ಹೊಲ ಹರಗರಿ, ಮೂಡಲ ದಿಕ್ಕಿಗಿ ಮಳಿರಾಜ ಬೋರ್ರ್ಯಾಡಕತನ ಮನಸ ಕೊಟ್ಟ ದಗದಮಾಡರಲೇ

೨೭೨. ಭೂಮಿ ಬಿತ್ತುದರೊಳಗ ಇದಿಮಾಯಿ ಬರಬಾರದು ಮನ್ಯಾಗ ಎಲ್ಲರೂ ಕೂಡಿ ಒಂದೊಂದು ದಗದ ಮಾಡಿದರ ಮುತ್ತಿನ ತೆನಿ ಮನ್ಯಾಗ ಅದಕ್ಕಾಗಿ ಎಲ್ಲರೂ ಕೂಡಿ ದುಡಿರಿ ಹಿರಿಮಗ ದೊಡ್ಡಂವ ಅಲ್ಲ ಕಿರಿಮಗ ದೊಡ್ಡಂವ ಅಲ್ಲ ಎಲ್ಲರೂ ಅಷ್ಟ ನಂಬಿಕೆಗೆ ಮೋಸ ಮಾಡಬ್ಯಾಡರಿ ಫಳದ ಹೋಗ್ರಿ, ಮಳ್ಳ ಆಗಬ್ಯಾಡರಿ ಕೊಟ್ಟ ವಚನ ತಪ್ಪ ಬ್ಯಾಡರಿ ಕಡಬಿ ಇಟ್ಟಪ್ಪನ ಮಾತು ಸುಳ್ಳಲ್ಲ

೨೭೩. ರೊಕ್ಕ ಇರದಿದ್ರೂ ದಿಕ್ಕ ಇರಬೇಕ್ರೋ ಸತ್ರ ನಾಲ್ಕು ಮಂದಿಬಾಯಾಗ ಇರಬೇಕು ಹೆಗಲಮ್ಯಾಲ ಕಂಬಳಿ ಹಾಕ್ಕೊಂಡ ಸರಿಹೊತ್ತಿನ್ಯಾಗ ಹೊಂಟ್ರ ಏಳು ಮಂದಿ ಬರಬೇಕ್ರೋ ಬಾಳೆ ಮಾಡಿರ ಹಂಗ ಬಾಳೇ ಮಾಡಬೇಕು ಇರದಿದ್ರ ಬಾಳ ಮಾಡ ಬ್ಯಾಡರಿ ತಿಳಿಕೊಂಡ ಹೋಗಿರಿ

೨೭೪. ಹನ್ನೆರಡು ವರ್ಷ ಭಯಂಕರ ತಪಸ್ಸು ಮಾಡಿ ಆ ಮ್ಯಾಲ ಭರಮ್ಯಾ ಬಂದಾ ನೋಡಿ ಏನ ಬೇಡತಿ ಬೇಡಲೆ ಎಲ್ಲಾ ಕೊಡತಿನಿ ನಿನ್ನ ಭಕ್ತಿ ನೋಡಿ

೨೭೫. ಮನಸ್ಸು ಕಲ್ಲ ಮಾಡಕೋಬಾರದು ಹೂವಿನಂಗ ಮೆತ್ತಗ ಇರಬೇಕು ನಾಲ್ಕು ಜನರಿಗೆ ಬೇಕಾಗಬೇಕು ಉಗುಳನುಂಗಿ ಬದುಕುವುದನ್ನು ಕಲಿಬೇಕ.

೨೭೬. ಕುಂಡರಬ್ಯಾಡ್ರೀ ಬರ್ರೆಲೆ ಗದ್ದಗಿ ಹಂತೇಕ ಕುಂಡರ ಬರ್ರಿ ಭಂಡಾರ ಹಚ್ಚಗೋರಿ, ಗದ್ಗಿ ಮುಟ್ಟರಿ, ಕೌಲ ಕಟ್ರೇ ಹೂ ಹಾರಸರಿ ನನ್ನ ಹೇಳಕಿ ತಪ್ಪಾಗಿದ್ರ ಈಗ ಹೇಳ್ರಿ ಇನ್ನೊಮ್ಮೆ ಹೇಳತಿನಿ ಕೇಳ್ರಲೇ ಕೇಳ್ರಲೇ

೨೭೭. ಮುಸ್ಸಂಜೆಯಲ್ಲಿ ಗೂಗಿ ಕೂಗ್ಯಾವ ಗಿಡಗಂಟ್ಯಾಗ ಹಕ್ಕಿ ಮರಿ ಮಾಡ್ಯಾವ ಕುರಿಮರಿ ಮುದ್ದಿ ಆಗ್ಯಾವ ಕೆರ್ರ್ಯಾಗ ಕಪ್ಪಿ ವಟ ವಟ ಮಾಡಾತಾವು

೨೭೮. ಬಾಳ ಮೆರಿಬ್ಯಾಡ್ರಿಪಾ ಅನಗತ್ಯವಾಗಿ ಹಿಂಸೆ ಕೊಡಬ್ಯಾಡ್ರಿ ಬಡವರ ಕುರುಪಿ ಕಾವ್ ಮುರಿಬ್ಯಾಡ್ರೀ ಬಡವನ ರೊಟ್ಟಿಮ್ಯಾಲ ಕಲ್ಲ ಹಾಕಬ್ಯಾಡಿರಿ ಹತ್ತಿ ಸಾಲಾಗ ಹೆಜ್ಜಿ ಎಣಿಸಬ್ಯಾಡ್ರಿ ಭಾವ ಸುದ್ಧ ಇದ್ರ ಭಾಗ್ಯಕ್ಕೆ ಏನ ಕಡಿಮಿರ್ರೆಲೇ

೨೭೯. ಚಂದಾಗಿ ನಡಿರೇಲೇ ಹಾಳಾಗಿ ಹ್ವಾದಿರಿ ಬೀರಪ್ಪಗ ಚಂದಗ ನಡಕೋರಿ ಬೀರಪ್ಪ ಹೇಳಿದ ಮಾತ ಹುಸಿ ಹೋಗುದಿಲ್ಲ.

೨೮೦. ಅನ್ನ ದಾನಾ ಮಾಡರಲೇ ಎಲ್ಲ ದಾನಕ್ಕಿಂತ ಅನ್ನದಾನ ಮುಖ್ಯರಲೇ ತಿಳಕೊಂಡ ನಡಿರಿ ದೇವರು ದಿಂಡರು ಮರಿಬ್ಯಾಡ್ರಿ

೨೮೧. ಒಣಾದ ಚಿಂತಿ ಮಾಡಬ್ಯಾಡರಲೇ ಹೈರಾಣ ಆಗಬ್ಯಾಡ್ರಿ ಇನ್ನ ಕೇಳರಲೇ ಲೋಕದ ಆಟ ಹಳ್ಳ ಪಳ್ಳಕ್ಕ ಹೋಗಬ್ಯಾಡಿರಲೇ ಅಂದ ಇಂದ ಅನ್ನ ಬೇಡಿರಲೇ ಧರ್ಮಕ್ಕೆ ಬೆಲೆ ಕೊಡರಲೇ ಇದು ಗೊರಗುದ್ದಿ ಇಟ್ಟಪ್ಪ ಸಾರಿ ಹೇಳ್ಯಾನ

೨೮೨. ಭಂಡಾರ ಹಿಡಿರಿಲೇ ಅಜ್ಜನ ಅಂಬಲಿ ಉಂಡ ಹೋಗರಿಲೇ

೨೮೩. ಕಪ್ಪಿ ಮಾಸಿನ್ಯಾಗ ಕಾಲ ಇಡಬಾರದಲೇ ನುಡಿದಂತೆ ನಡೀರಿ ಬೀರಪ್ಪನ ಸಂಗ ಮಾಡಿರಲೇ ನಿಮಗೆ ತಿಳಿದ ಹಾಗೆ ಮಾಡಬ್ಯಾಡರಿ

೨೮೪. ಮನಸಾ ಹಾಲಿನಂಗ್ ಬೆಳ್ಳಗ ಇರಬೇಕು ಸಮುದ್ರದಂಗ ದೊಡ್ಡ ಮನಸ್ ಇರಬೇಕು ಬಂದ ಮನಸ್ಸಿನ್ಯಾಗಿನ ಕೆಲಸ ಆಕ್ತಾವ ಹಿಡಿ ಭಂಡಾರ

೨೮೫. ಹೋಗಿ ಹೋಗಿ ಹಗಲ ಕಂಡ ಬಾವಿ ರಾತ್ರಿ ಜಿಗಿ ಬ್ಯಾಡರಲೇ ಸಂಸಾರದಾಗ ಸಿಲಕಿ ಒದ್ದಾಡ ಬ್ಯಾಡ್ರಿ ಕಡಬಿ ಇಟ್ಟಪ್ಪನ ಮರಿಬ್ಯಾಡ್ರಿ

೨೮೬. ಗಾಳಿ ಬಿಟ್ಟಾಂಗ್ ತೂರಿಕೋಬ್ಯಾಡ್ರಿ ಆದಾವನ್ರ ಆರಹೊತ್ತ ರಾತ್ರ್ಯಾಗ ನೆನಸಬೇಕರಲೇ ಸುಖ ಬರತತಿ ಹಿಡಿ ಭಂಡಾರ

೨೮೭. ನೋಡಬಾರದ ನೋಡತಿರಿ ಕಾಣಬಾರದ ಕಾಣತಿರಿ ಕಲಿಯುಗದಾಗ ಬಲ್ಲವರಾರು ತಿಳಿದ ನಡಿರಲೇ

೨೮೮. ಕೇಳರಲೇ ನ್ಯಾಸರಗಿ ದಾಟಿ ಪಶ್ಚಿಮ ಸೂರ್ಯ ಮುಳುಗುದರೊಳಗ ಕುರಿ ಹುಲ್ಲ ತಿಂದ ಹಿಕ್ಕಿ ಬಿದ್ದಾವ ಈ ವರ್ಷ ಆಗಬಾರದ ಆಕ್ಕತಿ ಎಲ್ಲ ಚಲೋನ ಆಕ್ಕತಿ

೨೮೯. ಸುಖಾ ಯಾವಾಗ ಐತರಲೇ ಎಲ್ಲರಿಗೂ ಸುಖಾ ಐತಿ ಐತಿ ಅಂದ್ರ ಐತಿ, ಇಲ್ಲಂದ್ರ ಇಲ್ಲ ಅಲಗ ಚುಂಚಿಗೊಂಡ ಈ ಮಾತ ಹೇಳ್ತಿನಿ ನನ್ನ ಕುದರಿ ಏರಿ ಈ ಮಾತ ಹೇಳ್ತಿನಿ

೨೯೦. ಮಕ್ಕಳಿರಾ ಈ ವರ್ಷ ನನ್ನ ಜಾತ್ರಿ ಮಾಡಲಿಲ್ಲ ನನಗೂ ಕೋಪ ತಾಪ ಬಂದೈತಿ ನನ್ನ ತೇರ ಅರ್ಧಕ್ಕ ನಿಂತತಿ ಅದು ಮುಗಿಲಿಲ್ಲ ಕಣ್ಣೀಲಿ ನೋಡಿ ಸುಮ್ಮನ ಆಗತಿರಿ ಮುಂದಿನ ವರ್ಷಕ್ಕಾದ್ರೂ ನನ್ನ ಜಾತ್ರಿ ಮಾಡ್ರಿ

೨೯೧. ಭೂಮಿ ಮ್ಯಾಲ ಕರ್ಮ ಹೆಚ್ಚಾಗತತಿ ಧರ್ಮ ಮುಳಗತಾಯಿದೆ ಸತ್ಯವಂತರ ಕಾಲ ಹೋಗಿ ಕಲಿಯುಗದಾಗ ಕರ್ಮಿಗಳ ಕಾಟ ಹೆಚ್ಚಾಗೇತಿ ಭಂಡಾರದಿಂದ ಭಂಡಾರ ಉಳಿತೈತಿ ಹುಷಾರಿಲೇ ಬದುಕರಲೇ

೨೯೨. ಗುಡ್ಡದಾಗ ಕಳಗೊಂಡ ಆಕಳ ಕರದಂಗ ಕಕ್ಕಾಬಿಕ್ಕಿ ಆಗಬ್ಯಾಡರಿ ನಿಮ್ಮ ಹಿಂದ ಕಡಬಿ ಇಟ್ಟಪ್ಪ ಅದಾನ ಅರುಹೊತ್ತಿನ್ಯಾಗ ಕರಿರಿ ಬರ್‍ತಾನ ನಿಮ್ಮ ಹಿಂದ್ ನಿಲ್ಲತಾನ ಇಟ್ಟಪ್ಪನ ನಂಬಿ ನಡಿರಿಲೇ ನಂಬಿದವನಿಗೆ ಭಾಷೆ ಕೊಟ್ಟಾನ

೨೯೩. ಒಂದು ಹುತ್ತಕ್ಕೆ ಒಂಭತ್ತು ಬಾಗಿಲು ಒಂದು ವರ್ಷ ಒಂಭತ್ತು ಕಡೆ ನೋಡೇತಿ ಹುಷಾರ್ ಆಗಿ ಜಲ್ಮಗಳಿಗೆ ಇದು ಮಾಳಿಂಗನ ಮಾತ ಹುಸಿ ಹೋಗುದಿಲ್ಲ.

೨೯೪. ನೀರ ಹೊರಗಿನ ಮೀನ್ ಬಲಿ ತಪ್ಪಿದ ವರ್ಷದ ಹಂಗ ಬಾಳೆ ಆಗಬಾರದು ನೆಲೆ ಕಳಕೊಂಡ ಹುಡಿಕ್ಯಾಡ ಬ್ಯಾಡರಿಲೇ

೨೯೫. ಕುರಿ ಇಳಿದು ಎಂಟು ದಿವಸಾಯಿತು ಹಟ್ಟಿ ತುಂಬ ಹಿಕ್ಕಿ ಹಾಕೇತಿ ನಮ್ಮ ಗುಡಿಗೆ ಕುರಿ ಹಾಲ ಬೇಕ್ ಕುರಿ ಹಂಗ ನಿಮ್ಮ ಬಳ್ಳಿ ಹಬ್ಬತೈತಿ

೨೯೬. ಮರಕ್ಕೆ ಬಾಯಿ ಬೇರಿಲ್ಲ ಬೇರಿಗಿ ನೀರ ಹಾಕಿದರ್ ಬೆಳಿ ಬರತ್ತದ್ ಮುಂದ್ ಬೇಕಾದ್ ಆಗತತಿ

೨೯೭. ಎತ್ತ ನೋಡಿದರ ಭರಮಪ್ಪ ಎತ್ತ ನೋಡಿದರ್ ಬೀರಪ್ಪ ಭಕ್ತಿಲೆ ನಡೆದುಕೊಳ್ಳಿರಿ ಆಗುವ ಕೆಲಸ ಆಗತೈತಿ

೨೯೮. ಹಸಿರು ಗುಡಿಸಲು ಹಾಕಿರಿ ಭರಮಪ್ಪ ಮೀಸಲು ಅಕ್ಕಿ ಮಾಡಿ ನಿವದಿ ಮಾಡಿರಿ ಆಳು ಮಕ್ಕಳನ್ನು ಕರೆದುಕೊಂಡು ಬನ್ನಿರಿ ಹಿಡಿ ಭಂಡಾರ

೨೯೯. ಬೇವಿನ ಗಿಡಕ್ ಕರಿಗೊಂಗಡಿ ಹಾಕಿ ಈ ವರ್ಷ ಹೊಲದಾಗ ಹೊನ್ನ ಬಿತ್ತತೀರಿ

೩೦೦. ಗುಡ್ಡದ ದಂಡ್ಯಾಗ ಹೊಳಿದಂಡಿ ಹೊಲದಾಗ ಬೆಳ್ಳಿ ಕೂರಿಗೆ ತುಂಬೆತಿ

೩೦೧. ಸದರ್ ಏರಿ ಬೀರಪ್ಪ ಕುಂತಾನ ಸದರ್ ಮ್ಯಾಲ ಕುಂತ ಹೇಳಿಕೆ ಹುಸಿ ಹೋಗುದಿಲ್ಲ ತಂಗಿ ತಲಿಮ್ಯಾಲ ಸೆರಗ ಹಾಕೋ, ತಮ್ಮ ತಲಿಮ್ಯಾಲ ವಸ್ತ್ರ ಹಾಕೋ ಉಡಕ್ಕಿ ಹಿಡಿಯಿರಿ ನಿಮ್ಮ ಮನಸ್ಸಿನ್ಯಾಗಿಂದ ಬಿಚ್ಚಿ ಹೇಳಿರಿ

೩೦೨. ಇದಿರೆದ್ದೆ ಕಾಲಾಳ ಬಿರತಾವ; ಬೆದರಿ ಓಡಬ್ಯಾಡರ್ರಿ ತುರುಕುರ ಕುದುರಿ ಓಡಿಬರ್ತಾವ ಅಮೋಘಸಿದ್ಧ ಮಾತ ಸುಳ್ಳಲ್ಲ

೩೦೩. ಶ್ರೀ ಮಗನ್ ನಿನ್ನ ಹೊಟ್ಯಾಗ ಭಾಸ್ ಹುಟ್ಟಿತಾನ್.ಪತ್ರದಳ-ಭಂಡಾರ ಸುಂಗಿ ಹೇಳ್ತಾನ್ ನಿನ್ನ ಮಗ ದಿಕ್ಕು ದೆಸೆಯಲ್ಲಿ ಕೀರ್ತಿತರತಾನ ಹಾಕರಲೇ ಡೊಳ್ಳ

೩೦೪. ಸಂಸಾರದಾಗ ಹುರಳಿಲ್ಲ ಎಂದ ಬ್ಯಾಸರ ಪಡಬ್ಯಾಡ್ರಿಲೇ ರಟ್ಟಿ ಸವಿಸಿ ರೊಟ್ಟಿ ತಿನ್ನರಲೇ ಬೂದಿಗೊಪ್ಪ ಮಾಳಿಂಗನ ಮಾತ್ ಹುಸಿಯಿಲ್ಲ ಸವೇದ ಊರ ಬಂದ ನನ್ನ ಪೌಳಿ ಹಸನ ಮಾಡಿರಿಲೇ ಹಂಗ ಹೋಗ ಬ್ಯಾಡರಿ ಅಂಬಲಿ ಕಿಚಡಿ ಉಂಡ ಹೋಗರಿ

೩೦೫. ಮನಸ್ಸಿಟ್ಟ ನಡಿಕೊಂಡ್ರ ಕಾಲಾಗ ಅಲ್ಲ ಕೈಯಾಗ ಕೊಡತಾನ ಅಂದಿಂದ ಆಗತ್ತೈತಿ ನಂಬಿನಡದ್ರ ಮಾನವಂತರಾಗತಿರ್ರಿ ಹಾಕರಿಲೇ ಡೊಳ್ಳ

೩೦೬. ಲೇ ಮಕ್ಕಳಿರಾ, ಕಾಗಿ ಹಂಗ ಬದುಕಿರೋ ಕತ್ತಲದಾಗ ಹುಡಕಬೇಡಿರಿ ನಿಮ್ಮ ಸಮೀಪ ಐತಿ, ಕೆಚ್ಚಲಕ ಉಣ್ಣಿ ಹತ್ತಿದಂಗ ಆಗೈತಿ ನಿಮ್ಮ ಬಾಳೆ ಅದ ಬದಲಾಗಬೇಕು ಬುದ್ದಿ ಹೇಳತನ ಅಂತ ಗುದ್ದ ಸೇರಬ್ಯಾಡರಿ ತಿಳಿಕೊಂಡ ನಡಿರೀಲೇ

೩೦೭. ನಾಳೆ ಅಮಾಸಿಗೆ ನನ್ನ ಗುಡಿಗಿ ಬಂದ, ಕೌಲ ಕಟ್ಟಿರೇ ಲೇ ನಿಮ್ಮ ಮನಸ್ಸಿನ್ಯಾಗ ಇದ್ದಂಗ ಆಗತ್ತೈತಿ

೩೦೮. ಲೇ ಕೇಳರಿಲೇ ಇನ್ನೊಬ್ಬರನ್ ಬೈ ಬ್ಯಾಡರಿಲೇ ನಿನ್ನದು ನೀನು ನೋಡಿಕೊಳ್ಳರಿ ಇದು ಹೊರಗಿಂದ ಬೀರಮಾತ

೩೦೯. ಗಾಳಿ-ಗೂಳಿ, ದೆವ್ವಭೂತ ಎಲ್ಲ ಸುಳ್ಳ ಅಂದ್ರ ಸುಳ್ಳ-ಖರೆ ಅಂದ್ರೆ ಖರೆ ಎಲ್ಲಾನು ನಂಬ್ರಿಲೇ ಒಬ್ಬರ ನಂಬಿ ನಡಿರಿ ಅವನು ನಿಮ್ಮನ್ನು ಕಾಯಿತಾನ ಇದು ಅಮೋಘ ಮುತ್ಯಾನ ಮಾತು

೩೧೦. ಯಾವ ಬೀಜ ಬಿತ್ತಿರೋ ಆ ಬೆಳಿ ಬರತತಿ ಕ್ವಾಣಗಳಿರಾ ಸಾಗಮಾಡರಿ ವಿಚಾರ ಮಾಡಿ ಬಿತ್ತಿರಿ ಹಿಡಿರಿಲೇ ಭಂಡಾರ

೩೧೧. ಮರಕ್ಕೆ ಬಾಯಿ ಬೇರಲ್ಲ ಬೇರಿಗೆ ನೀರ್ ಹಾಕಿದರ್ ಬೆಳಿಬರತತಿ ಮುಂದ್ ಬೇಕಾದ ಆಗತತಿ

೩೧೨. ಮರಕ್ಕೆ ಬೇರು ಬಾಯಿ ಹಾಗೆ ಬೀರಲಿಂಗಗ್ ಭಕ್ತ ಬಾಯಿ ಇದ್ದಂಗ್

೩೧೩. ಉತ್ತರ ದೇಶದಾಗ ಕೆರೆ ತುಂಬಿ ಸೂಸಲ ಆಡಾಕ ಹತ್ತಿದಿ ಗುರುವಿನ ಪಾದಕಂಡು ಧನ್ಯರಾಗಿರಿ ಬಂದಂತಹ ಫಸಲ್ ಕೈಗೆ ಬರತತಿ

೩೧೪. ದುಡುಕ ಬ್ಯಾಡಿರಿಲೇ ಸಿಟ್ಟಿನ ಕೈಯಾಗ ಬುದ್ಧಿ ಕೊಡಬ್ಯಾಡರಿ ಹಂಗ ಹ್ವಾದರೀ ಮಳ್ಳ ಸೂಳಿ ಮಗನ್ ತಿಳಿದ ನಡೀರಿ

೩೧೫. ಎತ್ತ ನೋಡಿದರೆ ಬೀರಪ್ಪ ಎತ್ತೆತ್ತ ನೋಡಿದರೆ ಭರಮಪ್ಪ ಭಕ್ತಿಲೆ ನಡೆದು ಕೊಳ್ಳಿರಿ ಆಗುವ ಕೆಲಸ ಆಗತ್ತೈತಿ

೩೧೬. ನಮ್ಮ ಕರಿಸಿದ್ಧನ ಕೈಯಿಡಿದು ಬೇಡಿಕೊಳ್ಳಿರಿ ನಿಮ್ಮ ತಲಿತುಂಬ ಹೂ ಹಾಕತಾರ ಹೋಗರಿಲೇ

೩೧೭. ಬಂದ ಸಂಕಟ ಪಾರಾದರ್ ಈ ಭವದ ಭಮಗ ಹರಿತತಿ ಬೀರಲಿಂಗನ ಗೊಂಚ ಹಿಡಿರಿ ಪಲಕ್ಕಿಗೆ ಹೂ ಹಾಕಿರಿ ಅಂಗಲಿಂಗ ಕೈಯಾಗ

೩೧೮. ದುಡಿ ಬೇಕರಿಲೇ ಗಂಧ ಕೊರಡು ತೇದಂತೆ ಉರಿಕರ್ಪೂರ ತೆರೆದಂತೆ ಆಗ ನೀವು ಕರಿಸಿದ್ಧನ ಆಳ ಮಕ್ಕಳಾಗತೀರಿ ತರಿ ಭಂಡಾರ ಹಿಡಿರಿ ಭಕ್ತರಾಗಬೇಕರಿ

೩೧೯. ದೇವರು ಕೊಟ್ಟಾಗ ದಾನಧರ್ಮಮಾಡಿರಿಲೇ ಹೂವಿನ ವಾಸನೆ ಬರಬೇಕು ಹಂಗ ಬಾಳೆ

೩೨೦. ಮುತ್ತಿನ ರಾಶಿಗೆ ಮುತ್ತು ಕೊಟ್ಟೀತಲೆ ಪರಾಕ್, ಹಾವೇರಿ ತಾಲೂಕಿನ ಹಾವನೂರು, ೨೦೨೦

೩೨೧. ಸಂಪಾಯಿತಲೇ ಪರಾಕ್, ಮೈಲಾರ ಕಾರ್ಣಿಕ, ೨೦೨೦

೩೨೨. ಕತ್ತಲದಾಗ ಹೆಂಗ ಕುಂತಿರೋ ಸಣ್ಣ ಬೆಳಕ ಕತ್ತಲಾ ನುಂಗತೈತಿ ಸಣ್ಣ ಕಿಡಿಯೋ ಕತ್ತಲಾ ನುಂಗತೈತಿ ಬೀರಪ್ಪನ ಮಾತ ಅರವು ತಿಳಿದಕೊಂಡ ನಡೆದ ಹಾಗೆ ನಡೀರಿ ಆಗುವುದು ಆಗತತಿ ಹಿಡಿ ಭಂಡಾರ

೩೨೩. ಗುರು ಶಿಷ್ಯರ ಸಂಬಂಧ ಪರಿಮಳವಾಗಿರಬೇಕು ಕತ್ತಲಾ ಬೆಳಕಿಗಿ ಅಂಜಬಾರದು ಗುರೂಪದೇಶ ಮಂತ್ರ ಇದ್ದಹಾಗ ಭವರೋಗ ಮನಿಗೆ ಬಂದಾಂಗ

೩೨೪. ಕಳ್ಳ ಜನರು ಇನ್ನೊಬ್ಬರನ್ನು ಸುಲಿದು ವಟವಟ ಮಾಡ್ತಾರ್ ಸುಳ್ಳ ಜನರ್ ಸುಲಿದ ನುಂಗತಾರ ಕಲಿಯುಗ ಕೆಟ್ಟ ಮೂರಾಬಟ್ಟಿ ಆಗೇತಿ ಗುರುವಿನ ನಂಬಿ ನಡೀರಿಲೆ

೩೨೫. ಆಕಾಶ ಒದರೀತ ಭೂಮಿ ನಡುಗೀತ ಲೋಕಕ್ಕೆ ಮೀರಿದ ದೊರೆ ಬರ್ತಾನ್ ಕೇಳರಿಲೇ ಕೇಳಿಲೇ

೩೨೬. ಭೂಮಿಮ್ಯಾಲ ನಂಜಿನ ಗಾಳಿ ಬೀಸಿದೆ ವಿಷಯದ ಬಳ್ಳಿ ಹಬ್ಬಿದೆ ಈ ಮಾತು ಚಿತ್ತವಿಟ್ಟು ಕೇಳಿರಿ

೩೨೭. ಬಡವರನ್ನು ಬಗ್ಗಿಸ ಬ್ಯಾಡ್ರಿ ಆಯ್ದುಕೊಂಡ ತಿನ್ನುವ ಕೋಳಿ ಕಾಲ ಮುರಿಬ್ಯಾಡ್ರಿ ಪಾಪ ಹತ್ತದ್ ಹುಷಾರ್ ಎಲ್ಲವರು ನನ್ನವರೆಂದು ನಡೀರಿ

೩೨೮. ಖರೆ ಉಳಿತತಿ ಕೆಟ್ಟತನ ಮಾಡಬ್ಯಾಡ್ರಿ ಸತ್ಯಕ್ ಜಯ ಇದೆ ಹೊಟ್ಟ ಹೋಗಿ ಘಟ್ಟ ಉಳಿದೀತು

೩೨೯. ಹಿಂದಕ್ ಹತ್ತು ಮುಂದಕ್ ಹನ್ನೊಂದು ಆಗಬಾರದು

೩೩೦. ಇದ್ದಕ್ಕಿದಂತೆ ಹೇಳಿದರೆ ಮಾರಿಮ್ಯಾಲ ಬಂದ ಒದ್ದಂತೆ ಇದು ಕುರಬ್ಯಾಟ ಬೀರನಮಾತ ಸುಳ್ಳಲ್ಲ

೩೩೧. ತಂದಿ-ಮಗ ಹೊಂದಿಕೊಂಡ ಹೋಗರಿಲೆ ತಂದಿ ಕೊಂದ ಮನಿ ಆಳಬ್ಯಾಡರಿ ಕೇಡಬರತತಿ ಕೇಡಬರತತಿ

೩೩೨. ಗುರುವಿಗೆ ಶಿಷ್ಯ ತಲಿಬಾಗಬೇಕು ಶಿಷ್ಯ ಗುರುವಿನ ಮಾತ ಕೇಳಬೇಕು

೩೩೩. ಸದಾಚಾರದಿಂದ ನಡೆದುಕೊಳ್ಳಿರಿ ಭೂಮಿಮ್ಯಾಲ ಸತ್ಯಸುದ್ಧಕಾಯಕದಿಂದ ಇರಿ ಹೃದಯ ಹೂ ಅರಳಿದಂಗ ಅರಳಬೇಕು ಭೂಮಿಮ್ಯಾಲ ಸೌಖ್ಯ ನೆಮ್ಮದಿ ಬರ್ತತಿ ನಿತ್ಯ ಭಂಡಾರ ಸೇವೆ ಆಗಬೇಕು ನಿತ್ಯ ಪಲ್ಲಕ್ಕಿ ಸೇವೆ ಮಾಡಬೇಕು ಬೀರಪ್ಪ ಹೇಳ್ಯಾನ

೩೩೪. ಆಚಾರವೆಂಬುದು ಇದ್ದವರಿಗೆ ದುಡಿದು ತಿನ್ನುವುದು ಬಲ್ಲವರಿಗೆ ಭಾವ ತಪ್ಪಿದ ಮ್ಯಾಲ ದೇವರ ಧ್ಯಾನ ಇರಬೇಕು

೩೩೫. ದೇವಲೋಕ ಅಂದ್ರ ಹೊರಗಿಲ್ಲ ನೀ ಎಲ್ಲಿ ಬದಕಿಲಾ ಆದ ದೇವಲೋಕ ಕರೇ ಮಾತಾಡಿದರ ಅದೇ ದೇವಲೋಕ ಬೂದಿಗೊಪ್ಪ ಮಾಳಿಂಗನ ಮಾತು

೩೩೬. ಮನಸ್ಯಾ ಹುಟ್ಟಿದಮ್ಯಾಗ ಮನಸ್ಯಾನಂಗ್ ಬದುಕಬೇಕು. ಸಾಸಿವೆ ಅಷ್ಟು ಸುಖಕ್ಕ ಸಾಗರದಷ್ಟು ಚ್ಞಡಿಥ ಪಡಬಾರದು ಘಟ್ಟ ಹತ್ತೂದು ಕಠಿಣ ಇಳಿಯುವುದು ಸುಲಭ ಭಾವದಲ್ಲಿ ಕುಳ್ಳರಿಸಿ ಪರಮಾನ್ನ ಉನ್ನರೋ ಮತಿಗೆಟ್ಟ ನಡಿಬ್ಯಾಡ್ರಿ

೩೩೭. ಹಲ್ಲು ಹೋಗಿ ಬೆನ್ನ ಬಾಗೇತಿ ಮನಷ್ಯ ಜನ್ಮ ಹುಟ್ಟಿ ಬರಾಕ ಹುಲ್ಲು ಅಲ್ಲ ಮುಪ್ಪಿನ ಕಾಲಕ್ಕ ನಾಲ್ಕು ಮಂದಿಗೆ ಬೇಕಾಗಿ ಹೋಗು ಇರದಿದ್ರ ಸುಣ್ಣಾ ತಿಂದ ಮಂಗ್ಯಾನಂಗ ಆಗತತಿ ಹಿಡಿ ಭಂಡಾರ

೩೩೮. ಊರು ಪಡೆಯುವಲ್ಲಿ ಒಕ್ಕಲು ಪಡೆಯಲಿಲ್ಲ ಯ್ಹಿನ ಕುರುಬರ ಪಡದಲ್ಲೋ ಸೀಮೆಯ ಪಡೆಯಲಿಲ್ಲ, ಭೂಮಿ ಪಡೆಯಲಿಲ್ಲ ಜಿಡ್ಡು ಕುರುಬರ ಪಡೆದಲ್ಲೋ

೩೩೯. ಎಲೇ ! ಪಟ್ಟಣದಾಗ ಶಿಶು ಹುಟ್ಯಾವು ಲಿಂಗದಂಗ್ ಜ್ವಾಪಾನ ಮಾಡು ಇರದಿದ್ರ ಗಂಡ ಹೋಗಿ ಗುಂಡ ಆಕ್ಕತಿ ಗುಂಡ ಹೋಗಿ ಗೂಗಿ ಆಕ್ಕತಿ ಊರ ಮುಂದ ಹಂದ್ರ ಹಾಕು ಶಿಸುವಿಗೆ ತೊಟ್ಟಿಲಾ ಕಟ್ಟು ಕಳಸಗಿತ್ತಿಗೆ ಕಳಾ ಬರ್ತತಿ ಗಾಣಮಿಣಿ

೩೪೦. ಲೇ ! ಮಳ್ಳ ಮಗನ ಒರ್ರ್ಯಾರ ಆಸ್ತಿ ಕಳಿಬ್ಯಾಡ ಭಕ್ತಿಲಿ ದುಡಿದ ಅದನ್ ಬೆಳಸ್‌ಲೇ ಹೋಗು ಒಗ್ಗಸಲೇ ಕುಗ್ಗಸ ಬ್ಯಾಡಾ ಓಡಿ ಭಂಡಾರ ಗಾಣಮಿಣಿ

೩೪೧. ಛಲೋ ಮಂದಿ ಗೆಳೆತನ ಮಾಡರಲೇ ಕೆಟ್ಟ ಮಂದಿ ಗೆಳೆತನ ಮಾಡಿದ್ರ ಮಣಕೈಗೆ ಕಲ್ಲ ಬಡದಂಗ ನೂರಕ್ಕೊಬ್ಬ ಸತ್ಯ ನೂರಕ್ಕೊಬ್ಬ ಭಕ್ತ ಜೊಳ್ಳ ಹೊಕ್ಕತಿ ಕಾಲ ಉಳಿತೈತಿ ಅದಕಾಗಿ ಸತ್ಯವಂತರ ಸಂಗ ಮಾಡರಲೇ ಅಲಕನೂರ ಸಿದ್ಧ ಹೇಳ್ತಾನ

೩೪೨. ಹೌದು ಹೌದು ಕೆರಿ ತಪ್ಪಿ ಬಾವಿ ಬಿದ್ದಾಂಗ ಮುಳ್ಳ ಕಿತ್ತ ಗುಡ್ಡದಾಗ ಒಗದಾಂಗ ಮನ್ಯಾನ ಹಕ್ಕಿ ಹಾರಿ ಹೋಗೇತಿ ಕಿಚರಾಗ ಬಿದ್ದ ಕೀಡಿಯಂಗ ಹೊಳ್ಯಾಡತೈತಿ ಗಾಣಮಿಣಿ

೩೪೩. ಆಡು ಮಕ್ಕಳಿಗೆ ಉಡಾಹಿಡಿಬಾರದ ತಾಯಿ ತೊಡಿ ತೊಟ್ಟಿಲಾಗಬೇಕು ಉರಿ ಒಳಗಿನ ಕರ್ಪೂರದಂತೆ ಬೈಲು ಬಟಾ ಬೈಲಾಗಬೇಕು

೩೪೪. ಎರದ ಕೈಕಾಲು ಹಾಲ ಬಟ್ಲ ಬಲಗೈಯಾಗ ಆರತಿ ಆವಾಗ ಬಂದಾನೋ ನಮ್ಮ ಕರಿಸಿದ್ಧ ನಮ್ಮನ್ನ ಕೇಳಿ ಹಾಲು ಕುಡಿತಾನ ಭಕ್ತರಿಗೆ ಬೇಡಿದ್ದ ಕೊಟ್ಟಾನ ಬೇಡಿದ್ದ ಕೊಟ್ಟಾನ ಹಿಡಿ ಭಂಡಾರ

೩೪೫. ಬ್ಯಾಡಂದ್ರ ಬರಬಾರದಲೇ ರಸ್ತೆಗೆ ಬಿದ್ದ ಜಗಳಾಡ ಬ್ಯಾಡರಿ ಹುಲಿ ಕರಡಿ ಹೋಗಿ ತೊಟ್ಟಿಲ ಬರತತಿ ಬಳ್ಳಿ ಹಬ್ಬಿ ಮುಸುಕಿ ಕಾಯಿ ಬಿಟ್ಟತಿ

೩೪೬. ಗುರು ಹಿರ್‍ಯಾರನ ರಾಜ ಪ್ರಜೆಯಂತೆ ನೋಡಕೋಬೇಕು ಸತ್ಯವಂತ ತಲೆಬಾಗಿ ನಡೆಯಬೇಕು ಅನಿಷ್ಠ ತೊಲಗಿಸಬೇಕು ದುಷ್ಟ ಶಿಷ್ಟರಂತೆ ಬಾಳಬೇಕು ಅತ್ತಿ ಸೊಸಿ ಮಾತ ಕೇಳಬೇಕು ಸೊಸಿ ಅತ್ತಿ ಮಾತ ಕೇಳಬೇಕು ಗಾಣಮಿಣಿ ಹಿಡಿ ಭಂಡಾರ

೩೪೭. ಕೊನೆಗೂ ಒಮ್ಮೆ ಪುಣ್ಯದ ರಾಶಿ ಹೋತು ರಾಶಿ ಮಾಡಿದ ರಾಶಿಗಿ ಬೀಜ ಉಳಿಲಿಲ್ಲ ಖಿನ ಹೋತು ಕನಜ ಹೇರು ಬಂಡಿಗೆ ಕೀಲ ಮುರದಂಗ ಆತು

೩೪೮. ಕೇಳಿರಲೇ ಕೇಳಿ ಆಷಾಡ ಗಾಳಿ ಬೀಸೇತಿ ಮಳಿ ಹೋಗೇತಿ ತೌಡಿನ ಹೋಳಿಗಿ ತಿನ್ನವಂತ ಪರಿಸ್ಥಿತಿ ಬಂದೇತಿ

೩೪೯. ಈ ಜೀವನ ಮೂರ ದಿನದ ಸಂತಿ ತಿಳಿದ ನೋಡಿದರ ಏನ ಇಲ್ಲ ವಿಚಾರ ಮಾಡಿ ನಡಿಬೇಕ್ರೋ ಇವತ ಇದ್ದ ಮನುಷ್ಯ ನಾಳೆ ಇರುದಿಲ್ಲ ಇರುವ ತನಕ ಎಲ್ಲರೂ ನಮ್ಮವರೂ ತಮ್ಮವರೂ ಎಂದು ನಿಮ್ಮನ್ನ ನೀವು ತಿಳಿದುಕೊಂಡು ನಡೆಯಿರಿ ದೇವರ ದಿಂಡ್ರ ಮರಿಬ್ಯಾಡ್ರಿ

೩೫೦. ಏ ತಮ್ಮ ಹರೆಯ, ಅಧಿಕಾರ ಅಂತಸ್ತು ಇವು ಬಾಳ ದಿವಸ ಇರುದಿಲ್ಲ ನೀರಾಗಿನ ಗುಳ್ಳಿ ಇದ್ದಂಗ ಹರೆಯ, ಅಧಿಕಾರ ಅಂತಸ್ತು ಇದ್ದಾಗ ನಾಲ್ಕು

ಮಂದಿಗೆಸಹಾಯ ಮಾಡಬೇಕು ಇರದಿದ್ರ ಅವು ಮುಗಿದ ಮ್ಯಾಲ ನಿನ್ನ ಯಾರು ಮಾತನಾಡಿಸುವುದಿಲ್ಲ. ತಿಳಕೊಂಡ ನಡಿಲೇ ನನ್ನ ಗುಡಿಗೆ ಬಾಗಿ ಬಾ ಬಗ್ಗಿ ಬರಬೇಕು ಹಿಡಿ ಭಂಡಾರ

೩೫೧. ಬಂಡಿಯ ಹೂಡಿ ಕರಿದುಂಡಿ ಹೇರಿ ಶಂಕಿತೊಂಡಿ ಕುಳಿತ ಬಂಡಿಯ ಮೇಲ ಶಂಕಿತೊಂಡಿ ಕುಳಿತ ಬಂಡಿಯ ಮೇಲ ಹೊಡಕೊಂಡ ನಡೆದ ಗುಡ್ಡದ ಮೇಲ

೩೫೨. ಉಡುವಿನ ನಾಲಿಗೆ ಹಾಗೆ ಎರಡಾಗ ಬಾರದು ಬೀರಪ್ಪ-ಮಾಳಪ್ಪ ಮೆಚ್ಚುದಿಲ್ಲ

೩೫೩. ಕೇಳ್ರೀ ಕೇಳ್ರೀ ಮನಸ್ಸಿನ್ಯಾಗ ಇದದ್ದು ಆಗಿದೆ. ಬಾವುಳ್ಳ ಭಕ್ತನ ಮನಿಯಲ್ಲಿ ರಾಯಭಾರಿಯ ಮರವೇನು ರಾಯಭಾರಿಯ ಮರಕಪ್ಪ ರಾಜದಕ್ಕಿಗಳ ಕೂಡ್ಯಾವ ಲೆಕ್ಕನಿಲ್ಲದ ಗಿಣಿ ಹಿಂಡ ಕೂಡಿ ಹಾಲ ಹಣ್ಣವ ಮೇದಾವ ಹಾಲ ಹಣ್ಣವ ಮೇದಾವಲ್ಲೋ ಭಕ್ತಗ ಹರಕಿಯ ಕೊಟ್ಟಾವೊ ಆಳು ಮಕ್ಕಳ ಉಂಡಮನಿಯಾಗ ಹಾಲ ಕಾವಲ್ಯಾಗಿ ಹರಿತತಿ ಆಳು ಮಕ್ಕಳು ಉಂಡ ಮನಿಯಾಗ ತುಪ್ಪದ ಕಾವಲ್ಯಾಗಿ ಹರಿತತಿ ಹಿಡಿ ಭಂಡಾರ ಗಾಣಮಿಣಿ

೩೫೪. ಎಲೇ ಮಕ್ಕಳಿರಾ ಕೇಳ್ರಿ ಆಷಾಡ ಬೀಸೇತಿ ಮಿರಗನ ಸಾಲ ಬಂದಾವ ಹೌದೋ ಮೂಡಲ ಗಾಳಿ ಬೀಸ್ಯಾವ ಮೂಡಲ ಗಾಳಿ ಬೀಸ್ಯಾವ ಹೌದೋ ಮುಂದಿನ ಗಾಳಿ ಬಂದಾವ ಹಳ್ಳದ ನೀರ ಹೊಳ್ಳಾಡಿ ಹರದರ ಹಳ್ಳೆಲ್ಲ ಹಸರಾದಾವ ಹಕ್ಕರಕ್ಕಿ ಹಸರಾಣಿ ಮೇದಾವ ಚಿಕ್ಕದಾಹೂಡಿ ಮೇದಾವ

೩೫೫. ನಾಳೆ ಮಂಗಳಾರ ಕೌಲ ಕಟ್ಟರಿ ಏನೆಂಬುದು ತಿರ್ಮಾನ ಆಗುತ್ತದೆ. ಹಿಂಗ್ ಎಷ್ಟದಿವಸ ಜಗಳಾಡುತ್ತಾ ಹೊಗುತ್ತಿರಿ ಊರಾಗ ಕುಡ್ಯಾಕ ನೀರಿಲ್ಲ ಮೊದಲ ಅದನ್ನು ಬಗೆಹರಿಸಿಕೊಳ್ಳಿರಿ ನಂತರ ನನ್ನ ಜಾತ್ರೆ ಮಾಡಿರಿ ನಾಲ್ಕ ಮಂದಿ ಹಿರ್‍ಯಾರ ಬರ್ರಿ, ಭಂಡಾರ ತಗೋರಿ ಹೊಂದಕೊಂಡು ಹೋಗ್ರಿ

೩೫೬. ಎಲೇ ಮಕ್ಕಳಿರ್‍ಯಾ ಮದುವೆ ಆಗಿ ಐದು ವರ್ಷ ಆಯಿತು ಇನ್ನು ನಿಮಗ ಬುದ್ದಿ ಬಂದಿಲ್ಲ ಮಕ್ಕಳಾ ದೊಡ್ಡವರ ಆಗ್ಯಾರ ನಿಮ್ಮ ಜಗಳ ಕೇಳಿದರ ಅವರ ಮನಿಸ್ಸಿನಮ್ಯಾಲ ಯಾವ ಪರಿಣಾಮ ಆಗುತ್ತದೆ. ನಿಮಗೆ ತಿಳಿದುಲ್ಲಾ ಗಂಡ-ಹೆಂಡತಿ ಬ್ರಹ್ಮ ಹಾಕಿದ ಗಂಟು ಹೊಂದಕೊಂದ ಹೋಗ್ರಿ ಮುಂದಕ ಹೋಗಬ್ಯಾಡ್ರಿ ಇಲ್ಲಿ ಬಗೆಹರಿತು ಹಿಡಿ ಭಂಡಾರ ನಾಳೆ ಅಮಾಸಿಗೆ ಇಬ್ಬರು ಜೋಡಿಲೆ ಬರ್ರಿ

೩೫೭. ಎಲೆ ಮಕ್ಕಳಿರಾ ಮನ್ಯಾಗ ಇರಾವರು ಮೂರು ಮಂದಿ ಅದರಿ ಜಗಳಾಡಬ್ಯಾಡ್ರಿ ನಿಮ್ಮ ಹೊಲ ಆರು ಎಕರೆ ಇದೆ ತಲಾ ಎರಡೆರಡು ಎಕರೆ ಬರತೈತಿ

ಹಂಚಿಕೊಂಡು ಊಟಮಾಡ್ರಿ ನಿಮ್ಮ ಅವ್ವುಗು ವಯಸ್ಸಾಗಿದೆ. ಚಂದವಾಗಿ ನೋಡಿಕೊಳ್ರಿ ರಟ್ಟಿ ಮುರಿದ ರೊಟ್ಟಿ ತಿನ್ರಿ ಹನ್ನೆರಡ ಮಂದಿ ಮಾತ ಕೇಳಬ್ಯಾಡ್ರಿ ಈ ಜಲ್ಮ ಹುಟ್ಟಿ ಬರಲ್ಲಿಕ್ಕ ಹುಲ್ಲ ಅಲ್ಲ ವಾಗಾತಿಯಿಂದ ಹೋಗಿರಿ ಅಜ್ಜನ ಅಂಬಲಿ ಕುಡಿದ ಹೋಗ್ರಿ ಹಿಡಿ ಭಂಡಾರ ಗಾಣಮಿಣಿ

೩೫೮. ಎಲೆ ಮಕ್ಕಳಿರಾ ನಾನು ನಿಂತ ಹೇಳತೇನಿ ನೀವು ಕುಂತ ಕೇಳ್ರಿ ಗೌಡ್ರ, ಕುಲಕರ್ಣಿ ಅವರ ನೀವು ಊರ ಹಿರ್‍ಯಾರು ಬಡವರನ್ನು ಬಗ್ಗಿಸಬ್ಯಾಡರಿ, ಧ್ವನಿ ಇಲ್ಲದವರನ್ನು ತುಳಿಬ್ಯಾಡ್ರಿ ಊರಿನ ಮಾನ ಮರ್‍ಯಾದೆ ದೃಷ್ಟಿಯಿಂದ ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಹೋಗ್ರಿ ಎಲ್ಲರಿಗೂ ಚಲೋ ಆಗತೈತಿ ಹಿಡ್ರಿ ಭಂಡಾರ

೩೫೯. ಬಡ ಪಶುವಿನಂತೆ ಒದ್ದಾಡ ಬ್ಯಾಡರಲೇ ಕಾಲ ಬಡಕೊಂಡ ಒದ್ದಾಡಿದರ ಗತಿಹೆಂಗ ತುಡುಗ ದನದಂಗ ಒದ್ದಾಡಬ್ಯಾಡರಿ ಕೊಂಡವಾಡಕ ಹಾಕತಾರ ನೆಟ್ಟಗ ಬಾಳೇ ಮಾಡುವಂಗ್ ಕಲಿರಿ

೩೬೦. ಭಾವುಳ್ಳನನ ಭಕ್ತನ ಮನಿಯಾಗ ಮನವೊಂದು ಮೀಸಲಿಡದಾನ/ ಮನವೊಂದು ಮೀಸಲ್ಲಿಡದಾನೇನಂವ ಮೇಳ ಮಾಳಿಗಿ ಏರ್‍ಯಾನೋ/

೩೬೧. ಮೇಲ ಮಾಳಗಿ ಏರ್‍ಯಾನೇನಾಂವ ದೇವರ ದಾರಿ ನೋಡ್ಯಾನ/ ದೇವರ ದಾರಿ ಒಳಗಪ್ಪ ಕೆಂದೂಳ ಬರ ಮಂಡಲ/೯೧

೩೬೨. ಕೆಂದೂಳ ಬರ ಮಂಡಲದಾಗ ಕೆಂಪ ನಿಶಾನಿ ಕಂಡಾನ ಕೆಂಪ ನಿಶಾನಿ ಕಂಡಾನೇನಂವ ಗುಂಪ ಸತ್ತಿಗೆ ಕಂಡಾನೋ

೩೬೩. ಹಾಲು ಹಣ್ಣು ನೀಡುವಂತ ಭಾಗ್ಗೇವು ಕೊಡುವಂತ ಕರಿಸಿದ್ದ ಅಲಕನೂರ ಕರಿಸಿದ್ಧ ಚಿಂಚಲಿ ಮಾಯವ್ವ ಖಡೋಲಿ ಇಟ್ಟಪ್ಪ ಇವರನ್ಯಾಕ ಕರಸಲಿಲ್ಲ ಜಾತ್ರೆಗೆ ಮುಂದಿನ ಜಾತ್ರೆಗೆ ಇವರ್‍ನ ಕರಿಸಬೇಕ ಕೇಳರಲೇ ಕೇಳರ್ರೀ ಅಂದ್ರ ನಾ ಗದ್ಧಗಿ ಕುಂದ್ರತಿನಿ

೩೬೪. ಕುಲ ಎತ್ತಿ ಮಾತಾಡಬ್ಯಾಡ್ರಿ ಕುಲ ಎತ್ತಿ ಕೊಡಬ್ಯಾಡ್ರಿ ಹಾಲ, ಅನ್ನ ಇಟ, ಮನಿ ಹಾಲ ಸಾಗವಾಗತತಿ ಬೆಣ್ಣಿ ಬಟ್ಟಲವಾಗತತಿ ಮನಿಗೆ ಗಂಡ ಮಕ್ಕಳ ಹೆಣ್ಣು ಮಕ್ಕಳ ತುಂಬತತಿ ದಂಡಿಗೆ ಹೋದ್ರೂ ಧರ್ಮ ಮರಿಬ್ಯಾಡ್ರಿ ಬಣ್ಣದ ಬಾಗಲ ಎರಡಾಗಬಾರದು ತಿಳಕೊಂಡ ನಡಿರಲೇ

೩೬೫. ಎಲೇ ಮಕ್ಕಳಿರ್‍ಯಾ ಹೊಂದಕೊಂಡ ಹೋಗ್ರಿ ಕೂಡಿ ಇರ್ರಿ ಹಂಚಿಕೊಂಡ ತಿನ್ರಿ ಬ್ಯಾರೆ ಆಗೊದ್ರಾಗ ಎನ್ ಗಂಧ ಇಲ್ಲ ಒಬ್ಬರಕೊಬ್ಬರ ತಿಳಕೋಳ್ರಿ ಇನ್ನೊಮ್ಮೆ

ಹೇಳತನ್ರೆ ಬಣ್ಣದ ಬಾಗಲ ಎರಡ ಆಗಬಾರದು ಒಬ್ಬರಿಗೊಬ್ಬರು ಹೊಂದಾಣಿಕೆ ಮಾಡಿಕೊಂಡ ಹೋಗ್ರಿ ಹಿಡಿ ಭಂಡಾರ ಗಾಣಮಿಣಿ

೩೬೬. ಹಿರಿಹೊಳಿ ದಂಡಿಲಿ ಇಟ್ಟಪ್ಪ ಬರುವಾಗ ಹಸ್ತದೊಳು ಆಡಿತೊ ಈ ಭಂಡಾರ ಆಳು ಮಕ್ಕಳು ಎಲ್ಲರೂ ವರಮುಂದೆ ಇರುವುದೇ ಈ ಭಂಡಾರ ದನಗಳಿಗೆ ಮನುಷ್ಯರಿಗೆ ಬ್ಯಾನಿ ಬಂದರೆ ಹೊಗತತಿ ಈ ಭಂಡಾರ ಹಚ್ಚಿಕೊಂಡರ್ ಹಿಂಡಿ ಭಂಡಾರ

೩೬೭. ಧರೆಯಾಳು ಹೂಲಿಕಟ್ಟಿದೇವಿ ಕರೆಮ್ಮನ ಮಾನದಿ ಹಾಸುವೆ ಕಂಬಳಿ

೩೬೮. ಆದಿಯಲ್ಲಿ ಆಕಾರ ಇದ್ದಿದ್ದಿಲ್ಲ ನಿರಾಕಾರ ಇತ್ತೋ ಬರಿ ಬಯಲಾ ವಿದ್ಯಾಧರ ಸುರಸಿದ್ಧ ಸಾಧ್ಯರು ಯಕ್ಷಿ ಗರುಡ ಕಿಂ ಪುರುಷರು ಇಲ್ಲ ಸತ್ತಾವೀಸ ನಕ್ಷತ್ರ ರಾಶಿಗಳು ಸಪ್ತ ಸಮುದ್ರ ಗುರುತಿಲ್ಲ

೩೬೯. ಕಾಲಾಗ ಗೆಜ್ಜೆ ಕಟ್ಟಿ ಹೆಗಲಾಗ ಕಂಬಳಿ ಹಾಕಿ ಕೈ ಮಾಡಿ ಹೇಳಕಿ ಹೇಳ್ಯಾನ ಕರಿಸಿದ್ಧ ಮಿರಗ್ ಮಿಂಚತತಿ ಆರಿದ್ರ ಆಗತತಿ ಮುಂತ್ತಿನಂತಹ ಜ್ವಾಳ ಮಾನಿಯಾಗ

೩೭೦. ಕೇಳಿರಿಲೇ ಕೇಳಿರಿ ಹಳ್ಳದ ಮಳಲಾಗ ತಿಳಿನೀರ ಹಾಲೊರತಿ ಬಿಂದಿಗಿ ಹೊತ್ತ ನೀರ ತಗೋರಿ ನನ್ನ ಪೌಳ್ಯಾಗ ಐದಸಾರಿ ಮತ್ತ ಹಾಕಿರಿ ನೆತ್ತಿ ತಂಪ ಆಗತತಿ ಆಗುದ ಆಗತತಿ ಹಿಡಿ ಭಂಡಾರ

೩೭೧. ರೊಖ್ಖಕ್ಕೆ ಹಪಾಹಪಿ ಮಾಡಬೇಡರಿ ಜನಾ ಗಳಿಸಿರ ಮನಸ್ಸ ಗೆಲ್ಲಿರಿ ಗಂಟಹೋಗಿ ನೆಂಟರ್ ಮಾಡಿರಿ ಎಲ್ಲಾರು ಜೊತೆಗೆ ಬೆಲ್ಲದಂಗ ಇರ್ರಿಲೇ

೩೭೨. ಬೀರಪ್ಪ ಕಡಲೆ ಕಾಯಕ ಬಿಟ್ಟರ ಮೂರು ದಂಡು ಊರಾಗ ಮಳೆ ಬೆಳೆ ಆಗುದಿಲ್ಲ ಮಕ್ಕಳ ಮರಿ ಆಗುದಿಲ್ಲ ಅಮಾಸಿಗೊಮ್ಮೆ ಬೀರಪ್ಪಗ ನಡೆದುಕೊಳ್ಳಬೇಕು

೩೭೩. ಲೇ ಸುಳ್ಳ ಹೇಳಬೇಡ ಕಳ್ಳತನ ಮಾಡಬ್ಯಾಡ ಕಣ್ಣ ಕಾಣುದಿಲ್ಲ ಕಿವಿ ಕೇಳುವುದಿಲ್ಲ ಹುಷಾರಾಗಿ ಹೋಗಿ ಹಿಡಿ ಭಂಡಾರ

೩೭೪. ಹಗಲು ಆಡಿ ಬನ್ನಿ ಏಳು ಸಮುದ್ರಾ ತಿರುಗಿ ಬನ್ನಿ ಮುಗಿಲು ಮುಟ್ಟಿ ಬನ್ನಿ ಹತ್ತಬಾರದ ಗಿಡ ಹತ್ತಿ ಬನ್ನಿ ಮುಂಗೈ ಹಿಡದ ಕೇಳರಿಲೆ ಈ ವರ್ಷ ಆಗುವದ ಆಗತತಿ ಏನ್ ಚಿಂತಿ ಮಾಡಬ್ಯಾಡರಲೆ ಕುರಬ್ಯಾಟ್ ಬೀರಪ್ಪ ಹೇಳಿದ ಮಾತ ಹಸಿ ಗ್ವಾಡ್ಯಾಗ ಹಳ್ಳ ಒಗದಂಗ

೩೭೫. ಕೇಳಿರಿಲೇ ಕೇಳಿರೀ ಈ ಕಡೆಬಾರ  ತೊಟ್ಟ ಬಲಕ ಬಾರೊ ಪುತ್ರನ ಸ್ವಾದರ ಮಾವ ಪುತ್ರನ್ ಹೆಸರು ಕರಿಯಬಾರೊ ಜೋ ಜೋ ಎನ್ನಿರಿಲೇ ಅಂದಾಳೆ ಗೋಪಿ ಜೋ ಜೋ ಎನ್ನಿರಿಲೇ

೩೭೬. ಏ ತಂಗಿ ಈ ಕಡೆ ಬಾ ಹಿಡಿ ಭಂಡಾರ ತೊಟ್ಲ ಬಲಕ ಬಾರೊ ಸ್ವಾದರ ಮಾವ ಮಾಳಿಂಗನೆಂದು ಕರೆದಿದ್ದ ನಮ್ಮ ಜೋ ಜೋ ಎನ್ನಿರಿಲೆ ಅಂದಾಳೆ ಮಾಳಿಂಗ ಜೋ ಜೋ ಎನ್ನಿರಿಲೆ

೩೭೭. ಸಂಜೆಲಿ. ಹುಟ್ಟಲಿ ಮುಂಜೆಲಿ ಸಾಯಲಿ ಬಂಜೆಂಬ ಸೊಲ್ಲಬಿಡಿಸಯ್ಯ ಈಗಲೇ ಹುಟ್ಟಲಿ ಈಗಲೆ ಸಾಯಲಿಗೊಡ್ಡೆಂಬ ಸೊಲ್ಲಬಿಡಿಸಯ್ಯ

೩೭೮. ಕೇಳಿರಿಲೆ, ಕಂಬಳಿ ಹಾಸಲಿ ಕರಿಯಾನೆ, ಕಂಬಳಿ. ಮುರಿದು ಗದ್ದಿಗೆ. ಮಾಡಿ ಹೊತ್ತಿಗೆ ಗಂಟು ಇಡುತ್ತಾರೆ ಸುವ್ವೆ

೩೭೯. ಉಡಿಗಳ ತುಂಬುತಾ ಸಡಗರ ಆದಾವ ಬಂದು ತೊಟ್ಲ ಹಗ್ಗ ಹಿಡಿದಾರಮ್ಮ

೩೮೦. ಕೇಳಿರಿ ಲೇ ಕೇಳಿರಿ ಹೋಗಿ ಈರೇಶನ ಸೆರಗಿಡದ ಕೇಳಿರೀ ಹೇಳಿರಪ್ಪ ನಿಮ್ಮ ಸತಿಯೊಳ ಹೆಸರು ಕೇಳಿರಿ ಹಿಡಿ ಭಂಡಾರ

೩೮೧. ಕೇಳ್ರಪಾ ಕುಂತೋ/ ಹೇಳುವೆನೋ ನಿಂತು ದೇವರ ಮಾತು/ ಈ ವರ್ಷ ಊರಾಗಆಗಬಾರದು ಆಗತೆತಿ, ಕೇಳಬಾರದ ಕೇಳತತಿ ದೈವ ಕುಂತಿರಿ ಶಿಸ್ತು

೩೮೨. ಮಕ್ಕಳಿರಾ ಭಂಡಾರ ಹಾರಿಸಿರೇ ಬೀರಪ್ಪ ಏಳು ಸಮುದ್ರದಾಗ ಬಂದಾನ ಮಿರಗಿ ಮಳಿ ಆಗತತಿ ರೆಂಟಿ ಕುಂಟಿ  ಸಜ್ಜ ಮಾಡಿರಿಲೇ ಊರಾಗ ಸುಖಕಾಲ ಬಂದ್ಯೆತಿ ಕುಂಬಿ ಮ್ಯಾಗ ನವಲ ಕುಂತ್ಯೆತಿ  ಆಗುವುದು ಆಗತ್ತದೆ ಹಾಕರಿಲೇ ಡೊಳ್ಳು

೩೮೩. ಮಕ್ಕಳಿರಾ ಗುಲ್ಲ ಮಾಡದೆ ನನ್ನ ಸೊಲ್ಲ ಕೇಳಿರಿ  ನಿಂತು ಹೇಳತೇನ ಕುಂತ ಕೇಳಿರಿ ಉತ್ತರ ದಕ್ಕಿನ್ಯಾಗ ಪುಂಡ ತಡಿತಾನ ಆ ಪುಂಡ ಅಂದರ ಊರಿನ ಕಂಟಕ

೩೮೪. ಎಲೇ ತಮ್ಮ ಅರಿಯದ ಅರ್ಥ ಕೇಳಿಲ್ಲ ಅಗಾಧ ನಮಗೇನು ಆಗಿಲ್ಲ ಕುರಿಗಳು ಧರಣಿಗೆ ಬಂದ ಮಜುಕುರ ಈ ಭೂಮಿ ತಂಪ ಮಾಡಾಕ ಕುರಿಬಿಟ್ಟಾರ ಹೊಲಕ್ಕ ತಿಳಿದುಕೊಂಡ ನಡೀರಿ

೩೮೫. ಕುರಿಯ ಒಕ್ಕಿಯ ಕಟ್ಟಿ ಕಟ್ಟಿ ಅಪ್ಪ ಮಾರುತಿ ಇಟ್ಟನು ವೀರ ಕುರಿಯ ಹಾಲ ಹಿಂಡಿ ಬೀರಲಿಂಗಕ್ಕೆ ಎರಿರಲೇ ಹಿಡಿ ಭಂಡಾರ

೩೮೬. ಗಂಡ ಹೆಂಡತಿ ಜಗಳಾಡಬ್ಯಾಡ್ರಿ ಇದು ನಾಕ ದಿನದ ಸಂತಿ ಹಗಲ ಆಡಿ ಬನ್ನಿ ಏಳು ಸಮುದ್ರ ತಿರುಗಿ ಬನ್ನಿ ಮುಗಿಲ ಮುಟ್ಟಿ ಬನ್ನಿ ಹತ್ತಬಾರದ ಗಿಡ ಹತ್ತಿ ಬನ್ನಿ ಮಕ್ಕಳಿರ್ರ್ಯಾ ಹೊಂದಿಕೊಂಡ ಹೋಗರಲೇ

೩೮೭. ಎರಿ ಹೊಲ್ದಾಗ ಕಾಲ ಹಾದಿ ಐತಿ ಕಂಚಿನ ಮಾಳಿಂಗ ಕರಿ ಕಂಬಳಿ ಹಾಕೊಂಡ ಸರಹೊತ್ತಿನ್ಯಾಗ ಹೊರಟಾನ ಇದರ ಬಂದ್ರ ಬರ ಹಿಂಗಸ್ತಾನ ಹಿಡಿರಲೇ ಭಂಡಾರ

೩೮೮. ಎಲೇ ಗುಡ್ಡದಾಗಿನ ಹುಲಿ ಗಡಬಡಸಾಕ ಹತ್ತೇತಿ ನಾಳಿ ಇಲ್ಲ ಇವತ್ತ ಅಂತತಿ ಬಗಲಾಗ ಹಿಡಕೊಂಡ ದಂಡಿಗಿ ಹಚ್ಚೀನಿ

೩೮೯. ಹವಳ ಮುತ್ತ ತೂಕ ಮಾಡುದ್ರಾಗ ಹವಳ ಒಂದು ಗುಂಜಿ ಹೆಚ್ಚಿತು ಮುತ್ತ ಒಂದ ಗುಂಜಿ ಹೆಚ್ಚಿತು ನಾಳಿ ಬೀರಪ್ಪನ ದರ್ಶನಕ ಬಾ

೩೯೦. ಲೇ ಮಕ್ಕಳಿರ್ರ್ಯಾ  ಅಂಜಬ್ಯಾಡರಲೇ ಕಡಬಿ ಗುಡ್ಡದಾಗ ಮಂಜ ಕಾಣತತಿ ಗುಡ್ಡದ ಹುಲಿ ಗಡಬಡಸಾಕ ಹತ್ತೈತಿ ಮಾನವಗ ಸೊಕ್ಕ ಬರಬಾರದರಲೇ ನಿಮ್ಮ ಸೊಕ್ಕ ಮುರಿಬೇಕಂತ ಮಳಿ ಬರಲಿಲ್ಲ ಆಗುದಾಗೇತಿ ಚಿಂತಿ ಮಾಡಬ್ಯಾಡರ್ರೀ ಈ ವರ್ಷ ಸಂಪನ್ನ ಆಕ್ಕತಿ ಕಂಬಳಿ ಬೀಸರಲೇ ಹಿಡಿ ಭಂಡಾರ

೩೯೧. ಎಪ್ಪಾ, ನಾಲ್ಕು ವರ್ಷ ಆತು ಮಗಗ ಮಕ್ಕಳಿಲ್ಲ ನೀನು ನಮಗ ರಗಡ ಆಸ್ತಿ ಪಾಸ್ತಿ ಕೊಟ್ಟಿ ಆದ್ರ ಸಂತಾನ ಭಾಗ್ಯಕೊಟ್ಟಿಲ್ಲ. ನಿನಗ ಬೆಳ್ಳಿ ಕುದರಿ ಕೊಡತುನು ನಮಗ ಮಕ್ಕಳ ಫಲಾ ಕೊಡು

೩೯೨. ಲೇ ಮಗನ ನಾಳಿ ಅಮಾಸಿಗೆ ಕವಲಕಟ್ಟು ನನ್ನ ಹೂವಿನ ದಳ ಬಲಕ ಬೀಳತೈತಿ ಮನಸನ್ಯಾಗಿಂದ ಆಗುದ ಅಕ್ಕತಿ ಐದ ಅಮಾಸಿ ಗುಡಿಗೆ ಬಂದ ಹೋಗು ಭಕ್ತೀಲೆ ಪಾಳಿ ಹಸನ ಮಾಡು ನಿನ್ನ ಮಗಾ ಮತ್ತು ಸೊಸಿ  ನಾಳಿ ಜಾತ್ರೆಗೆ ಬಿಳಿಕಾಳ ಕೆಂಪಕಾಳ ತಗೊಂಡ ನನ್ನ ಗುಡಿಗಿ ಬಂದ ಹೋಗ್ಲಿ ಆಗ ನೋಡ ಸಕ್ರಿ ತುಪ್ಪದಾಗ ಕೈ ತೋಳಿತಿನಿ ಆಗ ಮಕ್ಕಳ ಫಲಾ ಅಕ್ಕಾವ ಚಂದಾಗಿ ಬದಕ ಮಾಡರಲೇ.

೩೯೩. ಎಲೇ ಮಕ್ಕಳ್ರ್ಯಾ ಕಷ್ಟ ಬಂದಾಗ ಬೀರಪ್ಪ ನೆನಪ ಆಗತಾನ ನಾಲ್ಕ ವರ್ಷ ಆತು ಊರಾಗ ಜಾತ್ರಿ ಮಾಡಿಲ್ಲ ಕುಂಬಿ ಮ್ಯಾಗ ನವಲಕುಂತತಿ. ಪಕ್ಕ ಇಲ್ಲದ ಹಾರ್ಯಾಡತತಿ ಒಕ್ಕಲಿಗ್ಯಾ ಮಗನಿಗೆ ಎಷ್ಟು ಸುಧಾರಿಸಿ ಹೇಳಿದ್ರೂ ಹಾದಿಗಿ ಬರ್ತಾ ಇಲ್ಲ ಈಗ ನಿಮಗ ಅರು ಆಗೇತಿ ತೊಗಲ ಹೋತು ತಗಲ ಬಂತು ಎಚ್ಚರದಿಂದ ನಡಿರಿ ಮುಂದಿನ ಮಳಿಗಾಲಕ ಮುಂಗಾರು ಮಳಿ ಗಿಂಡಿ ಗಾತ್ರದ ಮಳಿ ಬರ್ತಿ ಮಿರಗ ಮಿಂಚಲಿ. ಕೂರಗಿ ಸಾಗ ಮಾಡ್ರಿ ಹಿಡಿ ಭಂಡಾರ.

೩೯೪. ಮಳೆರಾಯ ಹುಯ್ಯಲಿ ಕೆರೆಯ ರಾಯ ತುಂಬಲಿ ಹನ್ನೆರಡು ಕೋಡಿ ಹರಿಯಲಿ ಸಣ್ಣಕ್ಕಿ ಬಯಲು ಬೆಳೆಯಲಿ ನಮ್ಮೂರು ತೇರ ಎಳೆಯಲಿ ನಮ್ಮೂರು ಕೆರೆ ತುಂಬಲಿ।।

೩೯೫. ಮಳಿ ಹೋತಂತ ಅಂಜಬ್ಯಾಡರಲೇ ವಾರಾ ಬಿಟ್ಟ ನನ್ನ ಸೇವಾ ಮಾಡರಿ ಒಕ್ಕಲಿಗ್ಯಾ ನಿನ್ನ ಸೆರಗದಾಗ ಈ ವರ್ಷ ಹೊನ್ನ ಬರ್ತ್ತಿ. ನೀ ಮಾಡಿದ ಸಾಲ ಹೊಕ್ಕತಿ ಊರಾಗ ಮಳಿ ಬರ್ತ್ತಿ ಕೆರಿ, ಭಾವಿ ತುಂಬತೈತಿ ಮಕ್ಕಳಾ, ಹೆಣ್ಣಮಕ್ಕಳಾ ದನಾ ಕರ ಸುಖದಿಂದ ಇರ್ತಾವ ಮುದಕರ ತದಕರು ಸುಖದಿಂದ ಇರ್ತಾವ ಗಂಡುಳ್ಳ ಬಾಲ್ಯಾರು ಬಿಕ್ಷಕ ಹೋಗುದಿಲ್ಲ ಸ್ವಾತಿ ಮಳಿ, ಮಿರಗನ ಮಳಿ ಸಮೃದ್ದ ಆಗತಾದ, ಹಳ್ಳಾ ಕೊಳ್ಳ ತುಂಬಿ ಹರಿತಾವ

೩೯೬. ಮಗನ ನಿನಗ ಬಂದ ಸಂಕಟ ಪಾರ ಅಕ್ಕತಿ ಮನಸಿನ್ಯಾಗ ಇದ್ದದ್ದ ಆಕ್ಕತಿ ಇರಾವ ಒಬ್ಬ ಮಗಾ ಕುದರಿ ಹಂಗ ಮೇಯಿಸರಿ ಬಹಳ ಬುದ್ದಿ ಹೇಳಬ್ಯಾಡ್ರಿ ಅವಗ ಎಲ್ಲಾ ಗೊತ್ತತಿ ನನ್ನ ಮರೀಬ್ಯಾಡ್ರಿ ಇದ ಬೀರಪ್ಪ ಹೇಳಿದ ಮಾತ

೩೯೭. ದೆವ್ವ ಇಕಡೆ ಮೂಲಿ ಮ್ಯಾಲಿಂದ ಬಂದೈತಿ ಮೂರ ಮೂಲಿ ಕೂಡುವಲ್ಲಿ ಅನ್ನ ಕಿಚಡಿ ಇಟ್ಟ ಬರ್ರಿ ಬಂದ ದೆವ್ವ ಬಂದ ಹಾದೀಲೆ ಹೊಕ್ಕತಿ ಏನ ವಿಚಾರ ಮಾಡಬ್ಯಾಡ್ರಿ ಸುಮ್ಮನ ಹೋಗ್ರಿ.

೩೯೮. ಈ ಸಲ ಮಿರಗನ ಮಳಿ ಸುಳ್ಳ ರೋನಿ ಮಳಿ ಬರ್ತ್ತಿ ಸ್ವಾತಿ ತಪ್ಪಸುದಿಲ್ಲ ನಂಬಿ ಬಿತ್ತರಲೇ ಕಣದಾಗ ರಾಶಿ ಹಬ್ಬತತಿ ಬಿಳಿಜ್ವಾಳಕ ಒಮ್ಮೆ ಎಡಿ ಹೊಡದ್ರು ಪಡುಗಾಳಿ ಬರ್ತ್ತಿ ಮುತ್ತಿನಂತ ಜ್ವಾಳ ಮನ್ಯಾಗ ಕಪ್ಪಿ ಮದುವಿ ಮಾಡಿ ಕತ್ತಿ ಕಾಲ ಹಿಡಿರಿ ಮಳಿ ಬರ್ತ್ತದ ಎಕರೆ ಹೊಲದಾಗ ಹನ್ನೆರಡು ಬೀಜಾ ಬಿತ್ತಬ್ಯಾಡರೀ

೩೯೯ ಎಲೇ! ಮುದುಕ ಎಲೇ! ಮಗನ ದೂರ ನಿಂತ ಕೇಳಬ್ಯಾಡರಲೇ ಮುಂದಕ ಬಂದ ಕೇಳ್ರಿ ತುದಿಗೈ ಹಿಡಿಬ್ಯಾಡ್ರಿ ಮುಂಗೈ ಹಿಡಿರಿ ಸಮುದ್ರಕ ಜೋಡ ಯಾತಾಳ ಹೂಡೂದ್ರಾಗ ಒಂದ ಕೂರಗಿ ಕಸರ ಬಂತು ಎತಗೋಳಿಗೆ ಈ ವರ್ಷ ಹಸರ ಹುಲ್ಲ ಬರತ್ತತಿ ಅಂದ್ರ ಮಳಿ ಬೆಳಿ ಸಂಪೂರ್ಣ ಅಕ್ಕತಿ ಹಿಂಗಾರಿ ದೇಶಕ ಹಿಂಗಾರಿ ಮುಂಗಾರಿ ದೇಶಕ ಮುಂಗಾರಿ ಯರಗಟ್ಟಿ ಮ್ಯಾಲ ಗಾಳಿ ಕುಂತ ಹೊಳ್ಳೈತಿ ಲೋಕಾಪೂರದಾಗ ಬೆಂಕಿ ಬಿದ್ದತಿ ಬೆಂಕಿ ಬಿರುಗಾಳಿ ನಮ್ಮ ಬಿರಪ್ಪಾ ಆರಿಸ್ತಾನ ಕಂಬಳಿ ಬೀಸರಲೇ ಹಿಡಿ ಭಂಡಾರ

೪೦೦ ಹಾಲ ಕಂದಲು ತುಪ್ಪದ ಮಡಕೆ ಹಾಲುಕರಗಿ ತುಪ್ಪಕ್ಕೆ ಕಮ್ಮನೆ ಭಂಡಾರಕ ಬೋನ ಹಾಕಿರೋನಮ್ಮ ಬೀರಪ್ಪ ಒಲಿತಾನ

೪೦೧ ಕಂಬಳ್ಯಾಗ ಕನಕಾ ನಾದಿದಂಗನಿಮ್ಮ ಬಾಳೆ ಆಗಬಾರದುಪರಮ ನಿರಂಜನಇಟ್ಟಪ್ಪನ ನೆನೆದರತುಂಬಿದ ಹರವಿ ಹಾಲು ಹಾಕಿದಂತೆ.

೪೦೨. ಬೀರಪ್ಪನ ಮಾತು ಮಾತಾಡಾಕಕಹಿಯಾದರೂಮನಸಿಗೆ ಸಿಹಿ ಬೇವ-ಬೆಲ್ಲಇದ್ದಂಗೋ ತಿಳಿದ ನಡಿರಿ.

೪೦೩. ಅಗ್ಗ ಅಗ್ಯಾವಂತ ಬಹಳ ಹಿಗ್ಗಬ್ಯಾಡರೀ ಬಗ್ಗಿಸಿ ಗುದ್ದ್ಯಾರ ಸರಕಾರದವರಜ್ವಾಕೀಲೆ ಬಾಳೆ ಮಾಡ್ರಿ

೪೦೪. ಮೇಳಿಯವನ ಬೆನ್ನಿನಿಂದ ಲಾಳಿಯ ಹತ್ಯಾನಲಾಳಿಯವನ ಬೆನ್ನಿನಿಂದ ಮೇಳಿಯ ಹತ್ಯಾನು ತಿನ್ನುವ ಕಾಳ ಹೊರಗ ಹಚ್ಚುಬೀರಪ್ಪನ ಭಂಡಾರ ಒಳಗ ಹಚ್ಚು ಗಾಣಮಿಣಿ

೪೦೫. ಗರಿ ಇಲ್ಲದ ನವಿಲು ವಿಧವೆ ತೊಟ್ಟ ಬಂಗಾರವಂತೆ ಗತಿ ಇಲ್ರೋ,ಭಾವ ಸುದ್ಧ ಇದ್ರ ಭಾಗ್ಯಕ್ಕ ಏನ ಕಡಿಮೆರ್ರೋ

೪೦೬. ಮುಂಗೈಗೆ ಕಂಕಣ ಕಟ್ರೋ ಮನಸ್ ನಿಮ್ಮ ಕಯ್ಯಾಗ ಇರ್ಲಿ ನೀರಿಗಿ ಬೆಂಕಿ ಹಚ್ಚಬ್ಯಾಡಿ ವಾಗಾತಿಲಿ ಹೋಗ್ರಿ

೪೦೭. ಈ ವರ್ಷ ಮಳಿ ಬಂದ ಊರ ತಂಪ ಅಕ್ಕತಿ ಈ ವರ್ಷ ಹೊಟ್ಟ ನೆತ್ತಿಗೆ ಕಡಿಮಿ ಇಲ್ಲ ತಪ್ಪ ಇದ್ರ ತಗದ ಹಾಕ್ರಿ ಬೀರಪ್ಪನ ಉಡ್ಯಾಗ ಹಾಕ್ರಿ

೪೦೮ ಗೂಗಿಯಂಗ್ ಒಂಟಿಯಾಗಿ ಇರಬಾರದು ನಾಲ್ಕು ಮಂದ್ಯಾಗ ಬೆರಿಬೇಕು ಇನ್ನೊಬ್ಬರ ಅನುವ ತನುವ ಕೇಳಬೇಕು ಪ್ರಸಾದ ತಗೊಂಡ ಹೋಗ್ರೀ

೪೦೯. ಗುರು ಹಿರ್ಯಾರಿಗೆ ಗೌರವ ಕೊಡಬೇಕ್ರಲೇ ಮನ್ಯಾನ ತಂದಿ ತಾಯಿನ್ನ ಜ್ವಾಪಾನ ಮಾಡ್ರಿ ಪುಣ್ಯಾ ಬರ್ತತಿ. ಅವರ ಸತ್ತ ಹೋದ ಮ್ಯಾಲ ಅವರ್ನ ನೆನಸಿರ ಏನ ಉಪಯೋಗ ಇದ್ದಾಗ ನೋಡಿ ನಡೀರಿ

೪೧೦. ಮನುಷ್ಯಾಗ ನಾ ಅನ್ನುದ ಇರಬಾರದು ಅದು ಬಹಳ ದಿನ ಉಳಿದುಲ್ಲಾ ಕಲ್ಲ ತಗೊಂಡ ಅದರ ಮ್ಯಾಲ ಮೆಳಿ ಹೊಡದ್ರ ಆ ಮೆಳಿ ಕಲ್ಲಿನ್ಯಾಗ ಸಿಕ್ಕೋತತಿ ಆದ್ರ ಮೆಳಿ ಭಕ್ತ ಆಗುದಿಲ್ಲ ಕಲ್ಲ ಭಕ್ತನಾಗುವುದಿಲ್ಲ ಆತ್ಮ ಶುಧ್ಧಿ ಇರಬೇಕು.

೪೧೧. ಯೇಳು ಮಂದಿ ಅಣ್ಣೋರು ಪಾದಕ ಬಿದ್ದಾರಯಮ್ಮ ಡೊಳ್ಳು ಹೊಡ್ಯೋರು ಮ್ಯಾಳ ಊದೋರು ಈಗ ಖಂಡಗ ಜ್ವಾಳಾ ಕುಟ್ಟಿನಿ ಇವಾಗ ನೀನು ಮದ್ವಿಗೆ ಒಲ್ಲೆ ಅಂದ್ರ ಹ್ಯಾಂಗಮ್ಮ ಅಯ್ಯೋ ನಿನ್ನ ಪಾದಕ ಶರಣಮ್ಮ ತಂಗಿ ಸರಿ ನೀವು ಮದಿವಿ ಮಾಡ್ತಿನಂತ್ರಿ

೪೧೨. ಪಡುಗಾಳಿ ಸೂತ್ಯಾಡಕತ್ತತಿಯಾರ ಅಡ್ಡ ಬರಬ್ಯಾಡ್ರಿ ಕೂಸಿನ ಕೈಯಾಗ ಬಲಗೈಯಾಗ ಹಾಲಗಡಗ ಹಾಕ್ರಿ ಉಧೋ ಅನ್ರಿ ಎಲ್ಲಾ ಭಲೋ ಅಕ್ಕತಿ

೪೧೩. ಎಪ್ಪಾ ವರ್ಷ ತುಂಬಗೊಡದ ಮದುವಿ ಆಕ್ಕತಿ ಎಪ್ಪಾ ಚಿಂತಿ ಮಾಡಬ್ಯಾಡ ಬಲಗಾಲ ಇಟ್ಟು ಒಳಗ ಹೋಗು

೪೧೪. ಮೈತುಂಬಾ ಹುಣ್ಣ ಪಿಳಿ ಪಿಳಿ ಹುಳಾಕೀವಾ ರಕ್ತ ಇಳಿತೈತಿ ಅನ್ನಾ ನುಂಗಾಕ ಬರುದಿಲ್ಲ ವಯಸ್ಸ ಆಗ್ಯಾವ ಚಂದಾಗಿ ನೋಡಿಕೋರಿ ಇರುತನಕ ಜ್ವಾಪಾನ ಮಾಡಿಕೊಂತ ಹೋಗ್ರಿ

೪೧೫. ಓನ್ಯಾಗ ಯಾರೂ ಇಲ್ಲ ಮನ್ನಿ ಜಾತ್ರ್ಯಾಗ ಬರಾವರು ಬರಲಿಲ್ಲ ಹೋದವರು ಹೋಗಲಿಲ್ಲ ಊರಾಗ ಹಿರ್ಯಾರ ಕಿರ್ಯಾರ ಇಲ್ಲ ನನ್ನ ಜಾತ್ರಿ ಈ ವರ್ಷ ಮಾಡಲಿಲ್ಲ ಈ ವರ್ಷ ಮಳಿ ಬೆಳಿ ಆಗುದಿಲ್ಲಾ ಜಾತ್ರೆ ಮಾಡ್ರಲೇ ತಿಳಿದ ನಡಿರಿ

೪೧೬. ಹಿಂದಕ್ಕ ಹತ್ತು ಮುಂದಕ್ಕ ಹನ್ನೊಂದು ಇದರ ಅಂದಾವ ನಮ್ಮ ಆಳುಮಕ್ಳು ಬಲ್ಲರು.

೪೧೭. ಕೇಳೋ ಕೇಳೋ ಏ ತಮ್ಮಾ ಕೇಳೋಕವಲ ಕಟ್ಟು ಈ ಸ್ವಾಮಾರ ನಿನ್ನ ನೆತ್ತಿಯ ಬಾಗಿಲ ತೆರಿತತಿ ಏನ ಚಿಂತಿ ಮಾಡಬ್ಯಾಡ

೪೧೮. ನೀರು ಬಿಸಿ ಮಾಡಿ ಹಾಕರಲೇ ಎಣ್ಣೆ ಬೆಣ್ಣೆಯಲಿ ತಿಕ್ಕರಿ ವಿದ್ಯೆ ಬುದ್ದಿ ಕೋಡರಿ ರಟ್ಟಿಗಟ್ಟಿ ಮಾಡ್ರಿ

೪೧೯. ಎಪ್ಪಾ ಮಕ್ಕಳಿಲ್ಲದರ ಮನಸ ಮರಗತಿತ್ತು ದಿನಕ ಎರಡು ಹೊತ್ತು ಇಪತ್ನಾಲ್ಕುತಾಸ ಮಳಿ ಸುರಿತಿತ್ತು ದಡಬಡಿಸಿ ಸಿಡಿಲ ಬಂತ ಹನ್ನೆರಡು ವರಸ ತಪಸ್ಸು ಮಾಡಿ ನೀವು ಬೇಡಕೊಂಡ್ರಿ ಈಗ ನನಗ ಅರು ಆತು ಚಿಂತಿ ಮಾಡಬ್ಯಾಡಿ ನೆಂಪ ಆದಾಗ ನನ್ನ ಗುಡಿಗಿ ಬರ್ರಿ ಹಿಡಿರಿ ಭಂಡಾರ

೪೨೦. ಕಡಿಬಿ ಮ್ಯಾಲ ದಡ್ಡಿಐತಿ ನಾ ಹಾಕಿದ ದಡ್ಡಿ ಹೆಗಲ ಮ್ಯಾಲ ಬಿಳಿ ಕಂಬಳಿ ಹೊತಗೊಂಡ ಕೈಯಾಗ ನೇಮದ ಬೆತ್ತ ಹಿಡಕೊಂಡು ನಾ ಕುರಿ ಕಾಯತಿನಿ ಹೇಳತಿನ ಕೇಳಲೇ ನಾ ಕಾಯುದೊಡ್ಡ್ಯಾಗ ಕುರಿ ಹಿಕ್ಕಿ ಬಿಳತಾವ ಹಾಕರಲೇ ನಿಮ್ಮ ಹೊಲಕ ನೋಡ ಹೆಂಗ್ ಫಸಲ ಬರತತಿಹಿಡಿ ಭಂಡಾರ ಗಾಣಮಣಿ

೪೨೧. ಎಪ್ಪಾ ಬೀರಪ್ಪ ಮಕ್ಕಳಿಲ್ಲದವರಿಗೆ ಮಕ್ಕಳಾ ಕೊಡತಿಕಾಲ ಇಲ್ಲದವರಿಗೆ ಕಾಲ ಕೊಟ್ಟಿರಿ ಕುರುಡ ಇದ್ದವಗ ಕಣ್ಣ ಕೊಟ್ಟಿರಿ ಕಿವಡಗ ಕಿವಿ ಕೊಟ್ಟಿರಿ ಎಪ್ಪಾ ನಾನಾತರ ಬ್ಯಾನಿ ಬಂದವರ ಪಾರಮಾಡಿರಿ ನಿನಗ ಬಂದ ಭೆಟ್ಟಿ ಆಗೂದು ನಮ್ಮಧರ್ಮ ಎಪ್ಪಾ ಕಾಲೀಲೆ ಅಲ್ಲತಲೀಲೆ ಬರ್ತಿವಿ.೫೨

೪೨೨. ಕೇಳರಲೇ ಕೇಳ್ರಿ ಕೇಳರಪ್ಪೋ ಕೇಳ್ರಿ ಕಂಬಳಿ ಮ್ಯಾಲ ಕುಂತ ಇಟ್ಟಪ್ಪ ಹೇಳತಾನ ನನ್ನ ಕಂಬಳಿ ಅಂದಇ ಟ್ಟಪ್ಪನ ಸದರ ಇದ್ದಾಂಗ ಮೂಲ ಮಂತ್ರಕ ಮೇಲಾದ ಕಂಬಳಿ ಬೀರಪ್ಪ ಇಟ್ಟಪ್ಪ ಹೊರುವ ಕಂಬಳಿ ಕಡಬಿ ಮ್ಯಾಲ ಇದ್ದ ಕಂಬಳಿ ಬೀಸ್ಯಾಡಿ ಮಳಿ ತರುವ ಕಂಬಳಿ ಮ್ಯಾಲ ಕುಂತ ಆಡಿದ ಮಾತ ಹುಸಿ ಹೋಗುದಿಲ್ಲ ಹೊಡಿರಲೇ ಡೊಳ್ಳು

೪೨೩. ಹವಳ ಮುತ್ತ ತೂಕಾ ಮಾಡೊದ್ರಾಗ ಹವಳ ಒಂದಗುಂಜಿ ಹೆಚ್ಚಾತು ಮುತ್ತ ಒಂದು ಗುಂಜಿ ಕಡಮಿಯಾಯ್ತಿ ಬೀರಪ್ಪನ ಪಾಲಕಿ ಹೇಳಿತಿತ್ತು ಆಗ ಮಿರಗ ಮಿಂಚತಿತ್ತು ಆರಿದ್ರಾ ಬರ್ತಿತ್ತು ಊರಿಗೆ ಮಳಿ ಸಂಪನ್ನ ಆಗತತಿ

೪೨೪. ಎಲೇ ಮಗನ ಹಾರಲಾಕ ರಾಮಣ ಬಾಣ ಅಲ್ಲ ತಿರಗಲಾಕ ಕಾಮನ ಬೂದಿ ಅಲ್ಲ ನಡು ಗದ್ದಿಗೆ ಎದ್ದಿತು ಅಲಕನೂರ ಅಗಸಿ ಇದ್ದಿಲಾಯ್ತು ಚಿಂಚಲಿ ಅಗಸಿಗೆ ಬೆಂಕಿ ಹತ್ತಿತುಎಲೇ ಮಗನ ಪಕ್ಕ ಇಲ್ಲದ ಹಕ್ಕಿಲೆಕ್ಕ ಇಲ್ಲದ ಬಂತು ದಕ್ಕೆ ಆಗದಂಗ ತೆಕ್ಕ್ಯಾಗ ಹಿಡಿದಿ ಎಲ್ಲೋ ತಮ್ಮಾ.

೪೨೫. ಹಿರಿಯರಿಲ್ಲದ ಮನಿತನಾ ಅಲ್ಲ ನೋಡ ಗುರು ಇಲ್ಲದ ಮಠಾ ಸುಳ್ಳೋ ಗುರುವಿನ ಹೊರತು ದಾರಿ ಸಿಗುವುದಿಲ್ಲೋ ಮಳ್ಳಾಗುರು ಮಾರ್ಗ ಮರತ್ಯಾಕೋ ಅರುವಿಟ್ಟು ನಡದರ ಮಾನವ ಜನ್ಮ ಗಟ್ಟಿ ತಿಳಕೊಂಡು ನಡದರ ಮುಕ್ತಿ ಆಗೋದು ಗಟ್ಟಿ ಜ್ಞಾನಿಗಳು ಇರಬೇಕೋ ನಮ್ಮನೆರೀ

೪೨೬. ಬೂದಿಗೊಪ್ಪ, ಮಾಳಿಂಗರಾಯನ ಮುಂದಖರೇ ಹೇಳರಲೇ ತಗಲ ಮಾತಾಡಬ್ಯಾಡ್ರಿ ಮುರದ ಹಾಕತಾನ ಖರೇ ಹೇಳಿದ್ರ ಕಾಪಾಡತಾನಹೇಳ್ರೀ ಹೇಳ್ರೀ ಮಗನ ಜುಟ್ಟುಕಿತ್ತ ಬಾಯಾಗ ಕೊಡತನ ಹಿಡಿ ಭಂಡಾರ.

೪೨೭. ಕೇಳ್ರಲೇ ಕೇಳ್ರೀ ಬಡವರನ ಬಗ್ಗಸಬ್ಯಾಡರಿ ಅವರಿಗೆ ಕೊಡುವುದ ಕೊಡ್ರಿ ಇಲ್ಲದಿದ್ರ ಚಲೋ ಮಾಡೊದಿಲ್ಲ ಬಾಳೆ ಮುರುದ ಮೂರಾಬಟ್ಟಿ ಆಗತೈತಿ ತಿಳದ ನಡಕೋ

೪೨೮. ಎಲೇ ಎಲೇ ತಂಗೀ ಏನ್ ಆಗೊದಿಲ್ಲನಾಲ್ಕ ಅಮಾಸಿ ನನ್ನ ಗುಡ್ಯಾಗ ಇರ್ರಿ ನನ್ನ ಪೌಳಿ ಸೇವಾ ಮಾಡ ಬಡಕೊಂಡ ದೆವ್ವ, ಗಾಳಿ, ಧೂಳಿ ಪತಾ ಆಗಿ ಹೊಕ್ಕತಿ ಹಿಡಿ ಭಂಡಾರ

೪೨೯. ಎಲೇ ಮಕ್ಕಳಿರ್ಯಾ ಮೆಲ್ಲಕ ಮಾತಾಡ್ರಿ ಎತ್ತ ಉಚ್ಚಿ ಹೋದ ಹಾಗೆ ಬ್ಯಾಡ ಎದ್ದಾಗ ಜುಟ್ಟು ಹಿಡಿಬ್ಯಾಡರಲೇ ಬಿದ್ದಾಗ ಕಾಲ ಹಿಡಿಬ್ಯಾಡರಲೇ ಬಗ್ಗಿ ನಡಿರಲೇ

೪೩೦. ಭಕ್ತ –ಎಪ್ಪಾ ಮನ್ಯಾಗ ನೂರಾಎಂಟು ಸಮಸ್ಯೆಗಳು ತಿನ್ನಾಕ ಒಂದ ಹೊತ್ತ ಕೂಳಕೂ ಗತಿಇಲ್ಲ ಹೆಂಗ ಮಾಡ್ಲಿ ಒಡೆಯರರು –ಚಿಂತಿ ಮಾಡಬ್ಯಾಡರಲೇ ರಟ್ಟಿ ಮುರದ ರೊಟ್ಟಿ ತಿನ್ನರಿಮಗ್ಗಲ ಎಲುವ ಮುರದೀನು ಚಂದಾಗಿದುಡೀರಿ!

೪೩೧. ಭಕ್ತ – ಎಪ್ಪಾ ನನ್ನ ಮಗಗ ಎಲ್ಲಾ ಹೆಣ್ಣ ಹುಟ್ಯಾವು ಹೆಂಗ ಮಾಡೂದು ಮನಿ ದಿಪಕ್ಕ ಒಂದ ಗಂಡ ಬೇಕಲಿ

ಒಡೆಯರರು - ಹುಚ್ಚ ಮಗನ ಹೆಣ್ಣ ಗಂಡ ಒಂದ ಸಮಾ ಹೆಣ್ಣ ಹುಟ್ಟ್ಯಾವಂತ ಮರಗಬ್ಯಾಡರಲೇ ಹೆಣ್ಣ ಹಡದರ ಮನಿ ತಂಪ ಆಕ್ಕತಿ ಗಂಡ ಮಗನಂಗ ಹೆಣ್ಣ ಮಗನ ಬೆಳಸಬೇಕು ಗಂಡ ಮಗನಂಗ ಒಂದ ಮನಿ ದೀಪಾ ಹಚ್ಚತತಿ ಎಲ್ಲಾ್ರ ಇದನ್ನ ತಿಳದ ನಡೀರಲೇ

೪೩೨. ಹಣ್ಣಿನೊಳಗ ರಸ ಇಲ್ದಂಗ ಹಂಗ್ರ್ಯೋ ಭಾವ ಸಿದ್ದ ಇರಬೇಕೋ ಮರ ಬಾಯಿ ಬಿಡತೈತಿ ಕೆಳಗ ನೀರ ಹಾಕ್ರೋ

೪೩೩. ಅಂಡಜ ಪಿಂಡಜ ತತ್ತಿಯ ಪಡೆದಂತೆ ಪಕ್ಷಿಯ ಕೂನ್ಯಾವದೇಳಣ್ಣಾ ತತ್ವೊದವ ನೀರಾತು ನೀರಿಗೆ ಬೇರುಂಟು ನೀರಿನ ಮಾರ್ಯಾವುದೇಳಣ್ಣಾ ಬೈಲಿಗೆ ಬೈಲಿತ ಬೈಲೊಳಗೇನಿತ್ತು ಬೀಜಿಲದ ಮರ ಯಾವುದೇಳಣ್ಣಾ ಹನ್ನೆರಡು ವಾಲಿಯು ಮೂವತ್ತೆರಡು ಕಾಯಿ ಮರ್ತ್ಯಕ ಮರ ಯಾವುದೇಳಣ್ಣಾ

೪೩೪. ಅತ್ತೆಯ ಸೊಸೆ ಒಂದು ಕಾಲದಲ್ಲಿ ಒದೆವಾಳು ಕೇಡನೋಡಿ ನಿತ್ಯ ನೇಮವು ಜಪತಪಗಳು ಅಳಿಯದು ಕೇಡನೋಡಿ

೪೩೫. ಶೆಟ್ಟಿ ಶೆಟ್ಟರೆಲ ್ಲತಟ್ಟವಉಟ್ಟಾರ ಗೌಡ ಗೌಡರೆಲ್ಲ ತವುಡಾಗಿ ಹ್ವಾದಾರು ಇಲ್ಲದವರು ಗುಣದಿಂದ ರಾಜ್ಯವಾಳತಾರು

೪೩೬. ಜೋಳವಕಾಣ ಹಾಳಾಗಿಹೋದಾರು ಕೇಳಿರಣ್ಣನಾಳೆಯೆಂದೆನಬೇಡಿ ಈಗಲೇ ಬಂತಿನ್ನು ಕೇಳಿರಣ್ಣ

೪೩೭. ಉದ್ಯೋಗವುಳ್ಳವ ಹೊದ್ದುವುದು ಸಿರಿಬಂದು ಉದ್ಯೋಗವಿಲ್ಲದವ ಕರದೊಳಗೆ ಇದ್ದುದು ಹೋಗಿತಯ್ಯ

೪೩೮. ಪಡು ಗಾಳಿ ಬಿಟ್ಟೈತಿಕುಂಟಿ ಸಾಗ ಮಾಡ್ರಲೇ' 'ಕುಂಬಾರ ಗಡಿಗಿ ಒಡಿತು ಆವಿಗ್ಯಾಗ ಹೊಗಿ ಬರಾಕತ್ತೈತಿ ನಾಳೆ ಬಿತ್ರಲೇ ನಾಳೆ ಆಯತಾರ ಬೀರಪ್ಪಗ ಹೋಗಿ ಬರ್ರೀಕಡ್ಲಿ ಹಸನ ಮಾಡ್ರೀ

೪೩೯. ಕೇಳರಲೇ-ಕೇಳ್ರಿ ಕುರಿಗಿಕುಂಟಿ ಸಾಗ ಮಾಡ್ರೀ ಗೊರಗುದ್ದಿ ಇಟ್ಟಪ್ಪ ಹೇಳ್ಯಾನ ಚಿಂಚಲಿ ಮಾಯವ್ವ ಬರತಾಳ ಉಡೆಒಡ್ರಿ ಮಕ್ಕಳಿರ್ಯಾ ಭಂಡಾರ ತೂರ್ರೀಲೇ ವಾಗತಿಲೇ ಹೋಗ್ರಿ

೪೪೦. ಹೆಣ್ಣು ಮಕ್ಕಳು ಹುಟ್ಟದ ಮನಿ ಬಿಟ್ಟಕೊಟ್ಟ ಮನಿಗೆ ಬಂದಿರತಾಳ ಹೊಂದಿಕೊಂಡು ಹೋಗ್ರಲೇ"ಹೆಣ್ಣ ಗಂಡ ಎರಡು ಸಮಾನ ತಿಳಕೊಂಡ ನಡಿರ್ಲೇ

೪೪೧. ಎಲೇ ಎಲೇ ಕೇಳರಿಲೇ ಕೇಳರಿಲೇ ಅಲಕನೂರು ಕರಿಸಿದ್ಧ, ಚಿಂಚಲಿ ಮಾಯವ್ವ, ಕಡಬಿ ಇಟ್ಟಪ್ಪ, ಕುರುಬ್ಯಾಟ ಬೀರಪ್ಪ ಹೇಳಿಕಳಿಸ್ಯಾನ ಮಾಳಪ್ಪಗ ಹೋದ ವರ್ಷಕ್ಕಿಂತ ರೈತ ಈ ವರ್ಷ ಮಳಿ ಚಲೋ ಆಗಿ ಬಾಳೆ ಹರ್ಸ ಆಗತ್ತೈತಿ

೪೪೨. ಎಲೇ ಎಲೇ ತಂಗಿ ಏನ್ ಆಗೂದಿಲ್ಲ ನಾಲ್ಕ ಅಮಾಸಿ ನನ್ನ ಗುಡ್ಯಾಗ, ಇರ್ರ ನನ್ನ ಪೌಳಿ ಸೇವಾ ಮಾಡು ಬಡಕೊಂಡ ಗಾಳಿ, ಧೂಳಿ, ಪತಾ ಆಗಿ ಹೊಕ್ಕೈತಿ ಹಿಡಿ ಭಂಡಾರ.

# ಅನುಬಂಧ ೩
# ವಕ್ತೃಗಳ ಹೆಸರು

| ಕ್ರ.ಸಂ | ಹೆಸರು | ವಯಸ್ಸು | ಊರು | ಜಿಲ್ಲೆ |
|---|---|---|---|---|
| ೦೧ | ಪರಶುರಾಮ ಸಿಂಗನವರ | ೪೪ | ಯರಝರವಿ | ಬೆಳಗಾವಿ |
| ೦೨ | ಸಣ್ಣಪಕೀರಪ್ಪ ಪೂಜಾರಿ | ೬೫ | ಬೋಳಕಡಬಿ | ಬೆಳಗಾವಿ |
| ೦೩ | ಯಲ್ಲಪ್ಪ ಕಂಟೆಕರ | ೪೦ | ಅಲಖನೂರ | ಬೆಳಗಾವಿ |
| ೦೪ | ಅಪ್ಪಾಸಾಹೇಬ ಪೂಜೇರ | ೫೨ | ಚಿಂಚಲಿ | ಬೆಳಗಾವಿ |
| ೦೫ | ಕರಿಸಿದ್ದಯ್ಯ ಗುರುವಿನ | ೯೨ | ಸರೂರ | ವಿಜಯಪುರ |
| ೦೬ | ಗುಡ್ಡಯ್ಯ ಬರಬಳ್ಳಿ | ೮೦ | ಗೊರಗುದ್ದಿ | ಬೆಳಗಾವಿ |
| ೦೭ | ಬಾಲಬರಮಪ್ಪ ಒಡೆಯರ | ೫೮ | ಗುಡ್ಡದಮಲ್ಲಾಪುರ | ಹಾವೇರಿ |
| ೦೮ | ಫಕೀರಯ್ಯ ಡೊಳ್ಳದ | ೩೮ | ಅಡವಿಸೋಮಾಪುರ | ಗದಗ |
| ೦೯ | ಯಲ್ಲಪ್ಪ ಜಡೆಪ್ಪನವರ | ೪೬ | ಬೂದಿಗೊಪ್ಪ | ಬೆಳಗಾವಿ |
| ೧೦ | ಸಂಗಯ್ಯ ಗುರುವಿನ | ೬೨ | ಸರೂರ | ವಿಜಯಪುರ |
| ೧೧ | ಮದನ್ನ ಒಡೆಯುರು | ೫೨ | ಕಲ್ಲೂರು ಕಡೆಮತ | ಕಲಬುರ್ಗಿ |
| ೧೨ | ಮಹಾಂತಗೌಡ ಮಾಲಿಪಾಟೀಲ | ೩೯ | ಕಲ್ಲೂರು ಬಿ | ಕಲಬುರ್ಗಿ |
| ೧೩ | ಶಿವಪ್ಪ ಆಡಿನ | ೬೦ | ಗದ್ದನಕೇರಿ | ಬಾಗಲಕೋಟ |
| ೧೪ | ನಾಗಲಿಂಗ ಮುತ್ಯಾ | ೬೫ | ಗಲಗಲಿ | ಬಾಗಲಕೋಟ |
| ೧೫ | ಮುತ್ತಪ್ಪ ಹರಿವಾನ | ೭೦ | ತಿಮ್ಮಾಪೂರ | ಬಾಗಲಕೋಟ |
| ೧೬ | ಸನ್ನದೆಮಪ್ಪ ಪೂಜೇರ | ೩೮ | ಸವಣೂರ | ಹಾವೇರಿ |
| ೧೭ | ಕರಿಸಿದ್ದಪ್ಪ ದೊಡ್ಡಿ | ೪೫ | ಬಂಕಾಪುರ | ಹಾವೇರಿ |
| ೧೮ | ರೇವನಸಿದ್ದಪ್ಪ ಗಡ್ಡದ | ೪೭ | ಲೋಕುರ | ಧಾರವಾಡ |
| ೧೯ | ಯಲ್ಲಪ್ಪ ಮುತ್ಯಾ ಒಡೆಯರ | ೭೨ | ಅಮ್ಮಿನಭಾವಿ | ಧಾರವಾಡ |
| ೨೦ | ಕರಿಸಿದ್ದಯ್ಯ ಗೊರವರ | ೬೩ | ಇನಾಮಹೊಂಗಲ | ಬೆಳಗಾವಿ |

| | | | | |
|---|---|---|---|---|
| ೨೧ | ಸನ್ನಪಕೀರಪ್ಪ ಲಿಂಗರೆಡ್ಡಿ | ೫೮ | ಯರಝುರವಿ | ಬೆಳಗಾವಿ |
| ೨೨ | ಕೆಂಚಪ್ಪ ಹಕ್ಕಿ | ೩೧ | ಮಮದಾಪುರ | ಬೆಳಗಾವಿ |
| ೨೩ | ಬಸವಂತ ಹಕ್ಕೆನ್ನವರ | ೬೦ | ಅವರಾದಿ | ಬೆಳಗಾವಿ |
| ೨೪ | ಪವಾಡೆಪ್ಪ ಪೂಜಾರಿ | ೭೯ | ಹಿರೀಮೂಲಂಗಿ | ಬೆಳಗಾವಿ |
| ೨೫ | ಭರಮಾ ಮುಗಾಡಿ | ೩೮ | ಮುರಗುಂಡಿ | ಬೆಳಗಾವಿ |
| ೨೬ | ಪ್ರಭುಸಿದ್ದಪ್ಪ ಬಾದರದಿನ್ನಿ | ೫೨ | ಅರಕೇರಿ | ವಿಜಯಪುರ |
| ೨೭ | ಚಂದ್ರಯ್ಯ ಅಮೋಗಿಮಠ | ೬೫ | ಹಿರೇಕುಂಬಿ | ಬೆಳಗಾವಿ |
| ೨೮ | ಬಾಳಪ್ಪ ಬಿ ನೊರಜಪ್ಪನವರ | ೬೬ | ಗೋವನಕೊಪ್ಪ | ಬೆಳಗಾವಿ |
| ೨೯ | ಭಾವಿಸಿದ್ದಪ್ಪಯ್ಯ ಅಜ್ಜಪ್ಪ ಒಡೆಯರ | ೬೨ | ಕರೂರು | ಚಿಕ್ಕಮಂಗಳೂರು |
| ೩೦ | ಮಲಕಾರಿಸಿದ್ದ ಮೇಲಿನಮಠ | ೬೦ | ಕಲ್ಲೂರು ಬಿ. | ಕಲಬುರ್ಗಿ |

## ಅನುಬಂಧ ೪
## ಆಕರ ಗ್ರಂಥಗಳು

೧. ಅಂಗಡಿ ಎಸ್.ಎಸ್., ೨೦೦೮ ಕುರುಬ ಸಮುದಾಯ ಭಾಷೆ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ (ಚಿತ್ರದುರ್ಗ ಜಿಲ್ಲೆ)

೨. ಅಂಗಡಿ ಎಸ್.ಎಸ್., ೨೦೦೮ ಜನಪದ ಸಾಹಿತ್ಯ ಭಾಷೆ, ವಿಕಾಸ ಪ್ರಕಾಶನ, ಹೊಸಪೇಟೆ

೩. ಅನ್ನಪೂರ್ಣ ಗೋಸ್ಬಾಳ, ೨೦೧೪, ಹಾಲುಮತ ಕಿರಣ, ಹಾಲುಮತ ಸಂಸ್ಕೃತಿ ಸಂಶೋಧನಾ ಪ್ರತಿಷ್ಠಾನ, ಹೊಸಪೇಟೆ

೪. ಅನ್ನಪೂರ್ಣ ಗೋಸ್ಬಾಳ, ೨೦೧೧, ಹಾಲುಮತ ಅಧ್ಯಯನದ ಆಕರಗಳು ಸ್ವರೂಪ ಮತ್ತು ವಿಶ್ಲೇಷಣೆ, ವಿದ್ಯಾನಿಧಿ ಪ್ರಕಾಶನ, ಗದಗ

೫. ಉಷಾಕಿರಣ್, ೨೦೦೧, ಬಸವೇಶ್ವರ ಮತ್ತು ಪ್ರತಿಮಾನಿರ್ಮಿತಿ, ಆನಂದ ಪ್ರಕಾಶನ, ಬೆಂಗಳೂರು

೬. ಕಲಬುರ್ಗಿ ಎಂ.ಎಂ., ೨೦೧೦, ಮಾರ್ಗ ಸಂಪುಟ ೨, ಸಪ್ನ ಬುಕ್ ಹೌಸ್, ಬೆಂಗಳೂರು

೭. ಚನ್ನಪ್ಪ ಕಟ್ಟಿ, ೨೦೧೨, ಅರಕೇರಿ ಅಮೋಘಸಿದ್ದೇಶ್ವರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಚನ್ನಪ್ಪ ಕಟ್ಟಿ ಮತ್ತು ಪ್ರೊ.ಆರ್.ಎಸ್.ವಾಡೇದ, ೧೯೯೭ ಸಂ, ಕುರುಬು ಜನಪದ ಕನಕ ಜಯಂತ್ಯೋತ್ಸವ ಸಮಿತಿ, ಸಿಂದಗಿ

೯. ಚಿದಾನಂದಮೂರ್ತಿ ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೦. ಚಿದಾನಂದಮೂರ್ತಿ ಎಂ., ೧೯೮೯, ಭಾಷಾವಿಜ್ಞಾನ ಮೂಲತತ್ವಗಳು, ಡಿ.ವಿ.ಕೆ ಮೂರ್ತಿ, ಪ್ರಕಾಶನ, ಮೈಸೂರು

೧೧. ಜೋಶಿ ಶಂಬಾ, ೧೯೬೭, ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಸಮಾಜ ಪುಸ್ತಕಾಲಯ, ಧಾರವಾಡ

೧೨. ಶಿವ್ಯೇರುದ್ರಸ್ವಾಮಿ ಎಚ್., ೧೯೯೨, ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೧೩. ದೊಡ್ಡಣ್ಣ ಗದ್ದನಕೇರಿ, ೨೦೦೩, ಬೀರದೇವರ ಸಂಪ್ರದಾಯ ಮತ್ತು ಆಚರಣೆಗಳು ಕಮಲ ಪ್ರಕಾಶನ, ಹುನಗುಂದ ಜಿಲ್ಲಾ. ಬಾಗಲಕೋಟೆ

೧೪. ನೇಗಿನಹಾಳ ಎಂ.ಬಿ., ೧೯೯೨, ಮೈಲಾರ ಲಿಂಗ ಖಂಡೋಬಾ: ಒಂದು ಸಾಂಸ್ಕೃತಿಕ ಅಧ್ಯಯನ, ಕ.ವಿ.ವಿ.ಧಾರವಾಡ

೧೫. ಪಡಶೆಟ್ಟಿ ಎಂ.ಎಂ., ೧೯೯೩, ಸಂ ಹೇಳಿಕಿ ಮಾಡ್ಯಾರ ಒಡೆಯರರು ನೆಲೆ ಪ್ರಕಾಶನ, ಸಿಂದಗಿ

೧೬. ಪಡಶೆಟ್ಟಿ ಎಂ.ಎಂ., ೨೦೦೭, 'ಒಡೆಯರ ಹೇಳಿಕೆಗಳು' ಕುರುಬರ ಗುರು ಒಡೆಯರು, (ಸಂ) ಎಫ್.ಟಿ.ಹಳ್ಳಿಕೇರಿ ವಿಕಾಸ ಪ್ರಕಾಶನ, ಹೊಸಪೇಟೆ

೧೭. ಪಡಶೆಟ್ಟಿ ಎಂ.ಎಂ., ೨೦೧೭, ಕರುಬರ ಹೇಳಿಕೆಗಳು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಬಿರಾದಾರ ಬಿ.ಜಿ., ೨೦೧೦, ಕುರುಬರ ಗುರುಒಡೆಯರು: ಸಾಂಸ್ಕೃತಿಕ ಅಧ್ಯಯನ, ವಿಕಾಸ ಪ್ರಕಾಶನ, ಹೊಸಪೇಟೆ.

೧೯. ಮಾಣಿಕರಾವ್ ಧನಶ್ರೀ, ೨೦೧೩, ಕನ್ನಡದಲ್ಲಿ ಕಾಲಜ್ಞಾನ ಸಾಹಿತ್ಯ, ರೂಪ ಪ್ರಕಾಶನ ಮೈಸೂರು

೨೦. ರವೀಂದ್ರನಾಥ ಕೆ., ೨೦೧೪, ಕನ್ನಡ ದಾಖಲು ಸಾಹಿತ್ಯ, ಮಂಗಳಾ ಪ್ರಕಾಶನ, ಹೊಸಪೇಟೆ

೨೧. ರಾಜಶ್ರೀ ಪಾಟೀಲ, ೨೦೧೧, ಹಾಲುಮತಗುರು ಸರೂರ ಶಾಂತಮುತ್ತಯ್ಯ, ವಿಕಾಸ ಪ್ರಕಾಶನ, ಹೊಸಪೇಟೆ

೨೨. ಲಲಿತ ಎ.ಸಿ., ೧೯೯೩, ಕಾಡು ಕುರುಬರು ಮತ್ತು ಜೇನು ಕುರುಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೩. ಲಿಂಗದಹಳ್ಳಿ ಹಾಲಪ್ಪ, ೨೦೧೪, ಹಾಲುಮತ ಸಾಂಸ್ಕೃತಿಕ ಪದಕೋಶ, ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ

೨೪. ವೀರೇಶ ಬಡಿಗೇರ, ೧೯೯೯, ಉತ್ತರ ಕರ್ನಾಟಕದ ಜನಪದ ಗೀತ ಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ, ವಿಮೋಚನಾ ಪ್ರಕಾಶನ, ಅಥಣಿ ಜಿಲ್ಲಾ ಬೆಳಗಾವಿ

೨೫. ಸೋಮಶೇಖರ ಇಮ್ರಾಪೂರ, ೧೯೯೪ (ಸಂ), ಜಾನಪದ ಸಾಹಿತ್ಯ ದರ್ಶನ೧೫ ಕ.ವಿ.ವಿ. ಧಾರವಾಡ

